A. 72

ಶ್ರೀಗುರು ಮೇಧಾ ದಕ್ಷಿಣಾಮೂರ್ತಯೇನಮಃ.



# ಶಿವಾನುಭವ ಶಾಸ್ತ್ರವು.



ಆವುದಾನೊಂದು ಶಾಸ್ತ್ರವಂ ನೋಡಬೇಕಾದರೂ ಕೇಳಬೇಕಾ
ಪ್ರಥಮದಲ್ಲಿ ಶಿವಾನುಭಾವವ ಮಾಡಬೇಕಾದರೂ ಗುರು ನಮ
ರವೇ ಮುಖ್ಯವಾದಕಾರಣ, ಆದ್ಯರು ಈ ಶಾಸ್ತ್ರದ ಪ್ರಥಮ ಪ್ರಾ
ದಲ್ಲಿ ಗುರು ನಮಸ್ಕಾರವೇ ಅತ್ಯಧಿಕವೆಂದರಿದು ಪ್ರಥಮಾಚಾರ್ಯ
ಬಸವೇಶ್ವರನೆಂಬ ಶ್ರೀಗುರು ತತ್ವಕ್ಕೆ ನಮಸ್ಕರಿಸಿ, ಮುಂದೆ ಶಾ
ದ್ಧಾರವಂ ಮಾಡುತ್ತಿದ್ದಾರು. ಅದು ಹ್ಯಾಗೆಂದೊಡೆ—ಶ್ರೀ
ತೈಶ್ವರ್ಯ ಸಂಪತ್ಕರವೆನುಳ್ಳಂಥಾ ಗುರು ಆಚಾರ್ಯ ಚಕ್ರವರ್ತಿ
ಂಥಾ (ಬಸವ) ಬಕಾರವೇ ಭವಹರ ಗುರು, ಸಕಾರವೇ ಸಕಲ
ಆತ್ಮಕವಪ್ಪ ಲಿಂಗವು, ವಕಾರವೇ ವಚಿಸುವದಕ್ಕೆ ಕಾರಣವಾ
ಶಿವಾನುಭಾವ ಮೂರ್ತಿಯಪ್ಪ ಜಂಗಮವು. ಇಂತೀ ಗುರುಲಿಂ
ಗಮ ಸ್ವರೂಪವಾದೆಂಬುದೀಗ ಬಸವ ಯೆಂಬ ಶಬ್ದಕರ್ಥ—
ಮು ಉತ್ಪತ್ತಿ ಸ್ಥಿತಿ ಲಯಂಗಳಿಗಾಲಯವಾದ ಸಂಗನ ಬಸವೇ
ಬ ಮಹಾ ಜ್ಞಾನ ಗುರು ಮೂರ್ತಿಗೋಸ್ಕರ ನಮಸ್ಕಾರವು.
ಶ್ರೀಯೆಂಬಂತ ಪ್ರಣವವೇ ಬಸವೇಶ್ವರ ಸ್ವಾಮಿಗಳ ಹಾಗೆ ಭಕ್ತಿ
ನುಳ್ಳವರುಗಳ ಆಧಾರ ಚಕ್ರದ ನಾಲ್ಕೆಸಲ ಕಂಜದ ಮಧ್ಯದಲ್ಲಿ
ಶಕ್ತಿಯನಂಗವ ಮಾಡಿಕೊಂಡು ತಾನೇ ಪ್ರಾಣ ಸ್ವರೂಪವಾಗಿ
ಂಚಾಚಾರ ಸ್ವರೂಪವಾದ ಆಚಾರ ಲಿಂಗವಾಗಿ ನೆಲೆಗೊಂಡಿಪ್ಪ

ಡು. ಗುರುವೆಂಬ ಪ್ರಣವವೇ ಮಡಿವಾಳ್ಯೈಯ್ಯಗಳೋಪಾದಿಯಲ್ಲಿ ಮಾಹೇಶ್ವರ ಸ್ಥಲವುಳ್ಳವರುಗಳ ಸ್ವಾಧಿಷ್ಠಾನ ಚಕ್ರದ ಆರೆಸಳ ಕಂಜದ ಮಧ್ಯದಲ್ಲಿ ಜ್ಞಾನಶಕ್ತಿಯನಂಗವ ಮಾಡಿಕೊಂಡು ತಾನೇ ಪ್ರಾಣಸ್ವರೂಪವಾಗಿ, ಅಲ್ಲಿ ಮಂತ್ರಾತ್ಮಕ ಸ್ವರೂಪವಾದ ಗುರುಲಿಂಗವಾಗಿ ನೆಲೆಗೊಂಡಿಪ್ಪುದು. (ಬಾ) ಯಂಬ ಪ್ರಣವವೇ ಬಿಬ್ಬಿ ಬಾಚೈಯ್ಯಗಳೋಪಾದಿಯಲ್ಲಿ ಪ್ರಸಾದಿ ಸ್ಥಲವುಳ್ಳವರುಗಳ ಮಣಿಪೂರಕ ಚಕ್ರದ ಹತ್ತೆಸಳ ಕಂಜದ ಮಧ್ಯದಲ್ಲಿ ಇಚ್ಛಾಶಕ್ತಿಯನಂಗವ ಮಾಡಿಕೊಂಡು ತಾನೇ ಪ್ರಾಣ ಸ್ವರೂಪವಾಗಿ ಅಲ್ಲಿ ನಿರೀಕ್ಷಣ ಸ್ವರೂಪವಾದ ಶಿವಲಿಂಗವಾಗಿ ನೆಲೆಗೊಂಡಿಪ್ಪುದು. (ಸಾ) ಯೆಂಬ ಪ್ರಣವವೇ ತಂಗಟೂರ ಮಾರಣಂಗಳೋಪಾದಿಯಲ್ಲಿ ಪ್ರಾಣಲಿಂಗ ಸ್ಥಳವುಳ್ಳವರುಗಳ ಅನಾಹತ ಚಕ್ರದ ಹನ್ನೆರಡೆಸಳ ಕಂಜದ ಮಧ್ಯದಲ್ಲಿ ಆದಿಶಕ್ತಿಯ ನಂಗವಮಾಡಿಕೊಂಡು ತಾನೇ ಪ್ರಾಣ ಸ್ವರೂವಾಗಿ ಅಲ್ಲಿಯು ಜನಸ್ವರೂಪವಾದ ಜಂಗಮಲಿಂಗವಾಗಿ ನೆಲೆಗೊಂಡಿಪ್ಪುದು. (ವಾ) ಯೆಂಬ ಪ್ರಣವವೇ ಉರಿಲಿಂಗಯ್ಯಗಳೋಪಾದಿಯಲ್ಲಿ ಶರಣ ಸ್ಥಲವುಳ್ಳವರುಗಳ ವಿಶುದ್ಧಿ ಚಕ್ರದ ಹದಿನಾರೆಸಳ ಕಂಜದ ಮಧ್ಯದಲ್ಲಿ ಪರಶಕ್ತಿಯನಂಗವ ಮಾಡಿಕೊಂಡು ತಾನೇ ಪ್ರಾಣ ಸ್ವರೂಪವಾಗಿ ಅಲ್ಲಿ ತೃಪ್ತಿಸ್ವರೂಪವಾದ ಪ್ರಸಾದ ಲಿಂಗವಾಗಿ ನೆಲೆಗೊಂಡಿಪ್ಪುದು. (ಲಿಂಗಾಯ) ಯೆಂಬ ಪ್ರಣವವೇ ಅಜಗಣ್ಣೈಯ್ಯಗಳೋಪಾದಿಯಲ್ಲಿ ಐಕ್ಯಸ್ಥಲವುಳ್ಳವರುಗಳ ಆಜ್ಞಾಚಕ್ರದೆರಡೆಸಳ ಕಂಜದ ಮಧ್ಯದಲ್ಲಿ ಚಿಚ್ಛಕ್ತಿಯನಂಗವ ಮಾಡಿಕೊಂಡು ತಾನೇ ಪ್ರಾಣಸ್ವರೂಪವಾಗಿ ಅಲ್ಲಿ ಐಕ್ಯಸ್ವರೂಪವಾದ ಮಹಾಲಿಂಗವಾಗಿ ನೆಲೆಗೊಂಡಿಪ್ಪುದು.. ಇಂತೀ ಷಡ್ವಿಧ ಲಿಂಗಸ್ವರೂಪವಾದ ನಿಃಕಲ ಬ್ರಹ್ಮಕ್ಕೋಸ್ಕರ ನಮಸ್ಕಾರವು. (ಶ್ರೀಗುರು ಬಸವಲಿಂಗಾಯನಮಃ) ಎಂಬ ಪ್ರಣವದಲ್ಲಿ ವಿಗ್ರಹಾರ್ಥವೇನೈಯ್ಯಾ ಯೆಂಬಲ್ಲಿ ಆದ್ಯರು, ವೇದ್ಯರು, ಸಾಧ್ಯರು ಎಂದು ಮೂರು ಪ್ರಕಾರವುಂಟು. ಅದು ಹ್ಯಾಗೆಂದೊಡೆ— ಆದ್ಯರು ಎಂದೊಡೆ ಬಸವಣ್ಣ ಚನ್ನಬಸವಣ್ಣ ಪ್ರಭುಸ್ವಾಮಿಗಳು ಮೋಳಿಗೆ ಮಾರೈಯ್ಯ ಹಡಪದಪ್ಪಣ್ಣ ಮೊದಲಾದ ಪೂರ್ವ ಪುರಾತನರೇ ಆದ್ಯಗಣಂಗಳೆನಿಸುವರು. ವೇದ್ಯರೆಂದರೆ—ಕೋವಿ ಶಾಂತೈಯ್ಯ, ಕೋಲು ಶಾಂತೈಯ್ಯ, ಕುದರೆ ಶಾಂತೈಯ್ಯ, ಮಂಚದ ಶಾಂತೈಯ್ಯ, ಸರವೆ ಶಾಂತೈಯ್ಯ ಮೊದಲಾದವರು ಚಿನ್ನ ಬಣ್ಣದ ಹಾಗೆ ವಸ್ತುವಿಗೂ

ತವುಗೂ ಭಿನ್ನವಿಲ್ಲದೆ ನೂರೊಂದು ಸ್ಥಲ ಕುಲಂಗಳಾಚರಣೆವಿಡಿದಾಚ ರಿಸುವಂತಾ ಸ್ಥಳದ ವಿರಕ್ತರೇ ವೇದ್ಯ ಗಣಂಗಳೆನಿಸುವರು. ಸರ್ವಾ ಚಾರ ಸಂಪತ್ತಿನಾಚರಣೆ ವಿಡಿದಾಚರಿಸುವಂತಾ ನೂತನ ಪುರಾತನರೇ ಸಾಧ್ಯ ಗಣಂಗಳೆನಿಸುವರು. ಇವರು ಮೊದಲಾದ ಷಟ್ಸ್ಥಲ ಬ್ರಹ್ಮಿ ಗಳ ಷಡಾಧಾರ ಚಕ್ರದ ಕಂಜದಲ್ಲಿ ಅಷ್ಟವಿಧ ಸಕೀಲಂಗಳಿಂದ ನೆಲೆ ಗೊಂಡಿಪ್ಪುದುಂಟು. ಅದು ಹ್ಯಾಗೆಲೆ ಸ್ವಾಮಿ ಯೆಂದು ಬೆಸಗೊಂಡಡೆ (ಶ್ರೀ) ಎಂಬ ಪ್ರಣವುವೇ ಬಸವೇಶ್ವರ ಸ್ವಾಮಿಗಳ ಹಾಗೆ ಭಕ್ತಿಸ್ಥಲ ವುಳ್ಳವರುಗಳ ಆಧಾರ ಚಕ್ರದ ನಾಲ್ಕೆಸಳ ಕಂಜದ ಮಧ್ಯದಲ್ಲಿ ಭಕ್ತನೆಂ ಬ ಅಂಗ, ಆಚಾರವೆಂಬ ಲಿಂಗ, ಕ್ರಿಯೆ ಎಂಬ ಶಕ್ತಿ, ಶ್ರದ್ಧೆ ಎಂಬ ಭ ಕ್ತಿ, ಸುಚಿತ್ತವೆಂಬ ಹಸ್ತ, ಘ್ರಾಣವೆಂಬ ಮುಖ, ಸುಗಂಧವೆಂಬ ಪದಾ ರ್ಥ, ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿಪ್ಪುದೀಗ ಶ್ರೀಗು ರು ಯೆಂಬ ಪ್ರಣವುದಲ್ಲಿ ವಿಗ್ರಹಾರ್ಥ ಹ್ಯಾಗೈಯ್ಯಾ ? ಎಂಬಲ್ಲಿ ಮಡಿ ವಾಳೈಯ್ಯಗಳೋಪಾದಿಯಲ್ಲಿ ಮಹೇಶ್ವರ ಸ್ಥಲವುಳ್ಳವರುಗಳ ಸ್ವಾಧಿ ಷ್ಠಾನ ಚಕ್ರದ ಆರೆಸಳ ಕಂಜದ ಮಧ್ಯದಲ್ಲಿ ಮಹೇಶ್ವರನೆಂಬ ಅಂಗ, ಗುರುವೆಂಬ ಲಿಂಗ, ಜ್ಞಾನವೆಂಬ ಶಕ್ತಿ, ನೈಷ್ಠೆಯೆಂಬ ಭಕ್ತಿ, ಸುಬುದ್ಧಿ ಯೆಂಬ ಹಸ್ತ, ಜಿಹ್ವೆಯೆಂಬ ಮುಖ, ಸುರಸವೆಂಬ ಪದಾರ್ಥ, ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ ಗುರು, (ಬಾ)ಎಂ ಬ ಪ್ರಣವುದಲ್ಲಿ ವಿಗ್ರಹಾರ್ಥವೇನೈಯ್ಯಾ ಎಂಬಲ್ಲಿ ಬಿಬ್ಬಿ ಬಾಚೈಯ್ಯಗ ಳೋಪಾದಿಯಲ್ಲಿ ಪ್ರಸಾದಿಸ್ಥಲವುಳ್ಳವರುಗಳ ಮಣಿಪೂರಕ ಚಕ್ರದ ಹ ತ್ತೆಸಳ ಕಂಜದ ಮಧ್ಯದಲ್ಲಿ ಪ್ರಸಾದಿಯೆಂಬ ಅಂಗ, ಶಿವನೆಂಬ ಲಿಂಗ, ಇಚ್ಛೆಯೆಂಬ ಶಕ್ತಿ, ಸಾವಧಾನವೆಂಬ ಭಕ್ತಿ, ನಿರಹಂಕಾರವೆಂಬ ಹಸ್ತ, ನೇತ್ರವೆಂಬ ಮುಖ, ಸುರೂಪವೆಂಬ ಪದಾರ್ಥ, ಪ್ರಸನ್ನ ಪ್ರಸಾದ ಸ್ವ ರೂಪಿನಿಂದ ನೆಲೆಗೊಂಡಿಪ್ಪುದೀಗ ; (ಸಾ) ಯೆಂಬ ಪ್ರಣವುದಲ್ಲಿ ವಿಗ್ರ ಹಾರ್ಥವೇನೈಯ್ಯಾ ಎಂಬಲ್ಲಿ ತಂಗಟೂರು ಮಾರಣ್ಣಗಳೋಪಾದಿಯಲ್ಲಿ ಪ್ರಾಣಲಿಂಗಿಸ್ಥಲವುಳ್ಳವರುಗಳ ಅನಾಹತ ಚಕ್ರದ ಹನ್ನೆರಡೆಸಲ ಕಂಜ ದ ಮಧ್ಯದಲ್ಲಿ ಪ್ರಾಣಲಿಂಗಿಯೆಂಬ ಅಂಗ, ಜಂಗಮವೆಂಬ ಲಿಂಗ, ಆದಿ ಯೆಂಬ ಶಕ್ತಿ, ಅನುಭಾವವೆಂಬ ಭಕ್ತಿ, ಸುಮನವೆಂಬ ಹಸ್ತ, ತ್ವಕ್ಕೆಂ ಬ ಮುಖ, ಸುಸ್ಪರ್ಶನವೆಂಬ ಪದಾರ್ಥ, ಪ್ರಸನ್ನ ಪ್ರಸಾದ ಸ್ವರೂಪಿ ನಿಂದ ನೆಲೆಗೊಂಡಿಪ್ಪುದೆಂಬುದೀಗ ; (ವಾ) ಯೆಂಬ ಪ್ರಣವುದಲ್ಲಿ ವಿಗ್ರ

ಹಾರ್ಥವೇನ್ಯೆಯ್ಯಾ ಎಂಬಲ್ಲಿ ಉರಿಲಿಂಗೈಯ್ಯಗಳೋಪಾದಿಯಲ್ಲಿ ಶರಣ ಸ್ಥಲವುಳ್ಳವರುಗಳ ವಿಶುದ್ಧಿ ಚಕ್ರದ ಹದಿನಾರೆಸಳ ಕಂಜದ ಮಧ್ಯದಲ್ಲಿ ಶರಣನೆಂಬ ಅಂಗ, ಪ್ರಸಾದವೆಂಬ ಲಿಂಗ, ಪರೆಯೆಂಬ ಶಕ್ತಿ, ಆನಂದ ವೆಂಬ ಭಕ್ತಿ, ಸುಜ್ಞಾನವೆಂಬ ಹಸ್ತ, ಶ್ರವಣೇಂದ್ರಿಯವೆಂಬ ಮುಖ, ಸು ಶಬ್ದವೆಂಬ ಪದಾರ್ಥ, ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿ ವ್ಪುದೆಂಬುದೀಗ ; ಲಿಂಗವೆಂಬ ಪ್ರಣವದಲ್ಲಿ ವಿಗ್ರಹಾರ್ಥವೇನ್ಯೆಯ್ಯಾ ಎಂಬಲ್ಲಿ ಅಜಗಣ್ಣೈಯ್ಯಗಳೋಪಾದಿಯಲ್ಲಿ ಐಕ್ಯಸ್ಥಲವುಳ್ಳವರುಗಳ ಆಜ್ಞಾ ಚಕ್ರದೆರಡೆಸಳ ಕಂಜದ ಮಧ್ಯದಲ್ಲಿ ಐಕ್ಯನೆಂಬ ಅಂಗ, ಮಹಾಯೆಂಬ ಲಿಂಗ, ಚಿತ್ತೆಂಬ ಶಕ್ತಿ, ಸಮರಸವೆಂಬ ಭಕ್ತಿ, ಸದ್ಭಾವವೆಂಬ ಹಸ್ತ, ಹೃದಯವೆಂಬ ಮುಖ, ಸುತೃಪ್ತಿಯೆಂಬ ಪದಾರ್ಥ, ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿಪ್ಪುದೀಗ ಲಿಂಗ ; ಇಂತು ಷಟ್ಸ್ಥಲ ಬ್ರಹ್ಮಿ ಗಳ ಷಡಾಧಾರ ಚಕ್ರದ ಕಂಜದಲ್ಲಿರ್ದ ಅಷ್ಟವಿಧ ಸಕೀಲಂಗಳಿಂದ ನೆಲೆಗೊಂಡಿಪ್ಪ ಚಿದ್ಘನ ಲಿಂಗಕ್ಕೋಸ್ಕರ ನಮಸ್ಕಾರವು. ಮತ್ತೆ ಶ್ರೀ ಜ್ಞಾನದೈಶ್ವರ್ಯವನುಳ್ಳಂತ ಗುರು, ಮುಕ್ತಿಪ್ರದಾಯಕನಾದಂತ ಬ ಸವ, ಸತ್ಯಜ್ಞಾನಾನಂತ ಬ್ರಹ್ಮಸ್ವರೂಪವಾದ ಲಿಂಗ, ಉತ್ಪತ್ತಿ ಸ್ಥಿತಿ ಪ್ರಳಯಕ್ಕಾಧಾರವಾದ ಪರಮ ದೇವೇಶಗೋಸ್ಕರ ನಮಸ್ಕಾರವು. ಮತ್ತೆ ಶ್ರೀ ಐಶ್ವರ್ಯೋಪಲಕ್ಷಿತವಾದಂತ ಗುರು, ಅನಂತಕಲ್ಯಾಣ ಗು ಣಗಣ ಗಂಭೀರ ರುದ್ರಮೂರ್ತಿಯಾದಂತ ಬಸವ, ಸದ್ರೂಪ ಚಿದ್ರೂ ಪ ಆನಂದಸ್ವರೂಪವಾದಂತ ಲಿಂಗ, ತ್ರಿವಿಧೈಕ ಸ್ವರೂಪವಾದ ಚಿದ್ಘನ ಲಿಂಗಕ್ಕೋಸ್ಕರ ನಮಸ್ಕಾರವು. ಮತ್ತೆ ಶ್ರೀಷಡ್ಗುಣ್ಯೈಶ್ವರ್ಯ ಸಂಪ ತ್ಕರವನುಳ್ಳಂತ ಗುರು, ಗುಣ ಗಂಭೀರ ರುಚಿಯನುಳ್ಳಂತಾ ಬಸವ, ಬಕಾರವೇ ಭವಹರ ಸದ್ರೂಪವಾದ ಗುರುಸ್ವರೂಪವು, ಸಕಾರವೇ ಸಕ ಲ ಚೈತನ್ಯ ಚಿದ್ರೂಪವಾದ ಲಿಂಗಸ್ವರೂಪವು, ವಕಾರವೇ ಆನಂದರೂ ಪವಾದ ಜಂಗಮ ಸ್ವರೂಪವು, ಅಂತಪ್ಪ ಸದ್ರೂಪವಾದ ಗುರುವನೇ ತನ್ನಂಗದಲ್ಲಿ, ಚಿದ್ರೂಪವಾದ ಲಿಂಗವನೇ, ತನ್ನ ಮನದಲ್ಲಿ ಆನಂದ ಸ್ವರೂಪವಾದ ಜಂಗಮನೇ ತನ್ನ ಆತ್ಮಾಂಗದಲ್ಲಿ ಸಾಹಿತ್ಯವ ಮಾಡಿ ಕೊಂಡ ಸಂಗನ ಬಸವೇಶ್ವರನೆಂಬ ಗುರುಮೂರ್ತಿಯು ಮತ್ತಂ ಶ್ರೀ ಷಡ್ಗುಣ್ಯೈಶ್ವರ್ಯ ಸಂಪತ್ಕರವನುಳ್ಳಂತಾದ್ದೇ ಶ್ರೀಯೆನಿಸುವದು. (ಐ ಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಶ್ಶ್ರಿಯಃ । ಜ್ಞಾನ ವೈರಾಗ್ಯ

ಯೊಶ್ಚೈವ ಷಣ್ಣಾಂಭಗಇತೀರಿತಃ ॥) ಗುರು ಮೂರ್ತಿ ಮೌಲ್ಯಪ್ರದಾಯಕನಾದಂತಾದ್ದೇ ಗುರುವೆನಿಸುವದು.

(ಗುಕಾರಂತ್ರೈಲವರ್ತಿಶ್ಚ ರುಕಾರಂಜಲನಸ್ತಥಾ । ದ್ವಯೋರೈಕ್ಯ ಪ್ರಭಾವೇನ ಸ್ವಯಂಜ್ಯೋತಿಗುರುಸ್ಮೃತಃ ॥) ಎಂಬದಾಗಿ ಲಿಂಗಾಯ ಲಯಾಗಮಂಗಳಿಗೆ ಕಾರಣವಾದ ತ್ರಿಮುಕ್ತಿಪ್ರದ ಪ್ರಮೇಷ್ಟಲಿಂಗ ದೇವೇಶಗೋಸ್ಕರ ನಮಸ್ಕಾರವು ಎಂದೀ ತತ್ವಾತ್ಮಕ ನಿರ್ಣಯ ಶಾಸ್ತ್ರವ ನಿರ್ಮಿಸುವ ಪ್ರಥಮ ಪ್ರಾರಂಭದಲ್ಲಿ ವಿಘ್ನವಾಗದೆ ನಿರ್ವಿಘ್ನವಾಗಲೆಂದು ಆಚಾರ್ಯರು ಗುರು ನಮಸ್ಕಾರವಂ ಮಾಡಿ, ಈ ಶಾಸ್ತ್ರವನ್ನುದ್ಧರಿಸುತ್ತಿದ್ದಾರಾದಕಾರಣ (ಶ್ರೀಗುರುಬಸವಲಿಂಗಾಯನಮಃ) ಎಂಬ ಶಬ್ದಕ್ಕರ್ಥ—ಎನ್ನೆ ಪರಮೇಶ್ವರನ ಕುಮಾರನಾದ ಷಣ್ಮುಖ ಸ್ವಾಮಿಗಳೇ ಕಕ್ಕೈಯ್ಯಗಳ ಪ್ರಸಾದ ಸ್ವರೂಪಿನಿಂದೆ ಅಕ್ಕ ನಾಗಲಾಂಬಿಕೆಯೆಂಬ ಚಿಚ್ಛಕ್ತಿಯು ಚಿದ್ಗರ್ಭದಲ್ಲಿ ಹುಟ್ಟುತ್ತಲೇ ಮರುಗದ ಗಿಡದೋಪಾದಿಯಲ್ಲಿ ಭಕ್ತಿ ಜ್ಞಾನ ವೈರಾಗ್ಯವಿಡಿದಾಚರಿಸುವ ಸುರುಚಿರ ಪಿಂಡಾದಿ ಜ್ಞಾನ ಶೂನ್ಯಾಂತಮಾದ ಸರ್ವಾಚಾರ ಸಂಪನ್ನನಾದಂತಾ ಪರಮ ವೀರಶೈವ ಷಟ್ಸ್ಥಲ ಜ್ಞಾನಕೋವಿದ ಚಕ್ರವರ್ತಿಯಪ್ಪ ಚಿಕ್ಕದಣಾಯಕನೆಂಬ ಮಹಾನುಭಾವನ ದಿವ್ಯ ಕಾಂತಿ ಮೂರ್ತಿಯೆಂಬುದೀಗ ಚನ್ನಬಸವೇಶ್ವರ ದೇವರು ಶ್ರೀಮತ್ಪರಮೇಶ್ವರನ ಕುಮಾರಕರಾದ ಷಣ್ಮುಖ ಸ್ವಾಮಿಗಳೇ ಕಕ್ಕೈಯ್ಯಗಳ ಪ್ರಸಾದ ಸ್ವರೂಪಿನಿಂದೊಬ್ಬುಳಿಯಾಗಿ, ಅಕ್ಕ ನಾಗಲಾಂಬಿಕೆಯೆಂಬ ಚಿಚ್ಛಕ್ತಿಯು ಚಿದ್ಗರ್ಭದಲ್ಲಿ ಭೂಮಿಯ ಮಧ್ಯದಲ್ಲಿ ಸ್ವಯಂಭು ಲಿಂಗ ಉದಯವಾದ ಹಾಂಗೆ, ಮಲಯಾಚಲದಲ್ಲಿ ಚಂದನದ ಮರ ಉದಯಿಸಿದ ಹಾಂಗೆ, ಮುಗಿಲ ಮರೆಯಲ್ಲಿ ಚಂದ್ರನುದಯವಾದಹಾಂಗೆ, ಹುಟ್ಟುತಲೇ ಮರುಗದ ಗಿಡದೋಪಾದಿಯಲ್ಲಿ ತನಗೆ ತಾನೇ ಪರಿಮಳ ವಡೆಗುವ ಹಾಂಗೆ ಭಕ್ತಿ ಜ್ಞಾನ ವೈರಾಗ್ಯಾನು ಯೋಗ್ಯಾನುಸಾರದಿಂ ದುಃಖಾಶ್ರಯ ಸಂಸಾರವಂ ವಿಲಂಬಿಸುತ್ತೆ, ತ್ರಿವಿಧ ಲಿಂಗ ಭಕ್ತಿಯಲ್ಲಿ ಭಕ್ತಿಯುತರ್ಗೆ ಪ್ರಕಟಿಸಿ ಕೊಡುತ್ತೆ. ಭ್ರಾಂತಿ ಭ್ರಮೆಗಳಂ ಕೆಡಮೆಟ್ಟುತ್ತೆ. ಷಡುಸ್ಥಲ ಜ್ಞಾನಕೋವಿದ ಚಕ್ರವರ್ತಿಗಳಾಗಿ ಸೊಗಯಿಪ ಶಿವಸುಖ ಭೋಗಿ, ಘನಲಿಂಗಯೋಗಿ, ಚಿಕ್ಕ ದಣಾಯರೆಂಬ ಮಹಾನುಭಾವನ ದಿವ್ಯ ಕಾಂತಿಯು ಚನ್ನಿಗತನದ ತ್ರಿವಿಧ ಪ್ರಣವಾಹ್ವಯ ಚಿದ್ಬ್ರಹ್ಮಾಂಡ ತಾಂ

ಡಮಾಡಂಬರ ಲಿಂಗೋದ್ಧರಣ ಸಮುಲ ವಿಚಕ್ಷಣ ಅನುಗ್ರಹಮಂ ಶಿವಗಣ ಸಮುದು ಪರಿಪಾಲನ ಪರಮಾರಾಧ್ಯ ಶ್ರೀಗುರು ಬಸವರಾಜ ದೇವರಿಂ ಪಡೆದು ಬಸವೇಶ್ವರ ಕುಲದಲ್ಲಿ ಸರಂಗೊಳಿಸಿ, ನಿಂದೊಪ್ಪುವ ಲಿಂಗಮೂರ್ತಿಗಳು ಹಾಲುಕ್ಕಿ ಮೇಲುವರಿಯೋಪಾದಿಯಲ್ಲಿ ತಮ್ಮಂತರಂಗದೊಳು ಹುಟ್ಟಿದ ಸ್ವಾತ್ಮಜ್ಞಾನ ಉತ್ಕರಿಸಿ, ತಮ್ಮ ಚಿತ್ತಿನ ಚಿದಂಗಸ್ವರೂಪವಂ ಜ್ಞಾನಿಗಳರಿದು ಆನಂದಿಸಿ ಮುಕ್ತಿಯನ್ನೈದಲೆಂದು ನಿತ್ಯಾನಿತ್ಯವಸ್ತು ವಿವೇಕ, ಇಹಮುತ್ರಾರ್ಥ ಫಲಭೋಗ ವಿರಾಗ, ಸಮಾಧಿಷಟ್ಕಸಂಪತ್ತಿ, ಮುಮುಕ್ಷುತ್ವವೆಂಬ ಸಾಧನ ಚತುಷ್ಟಯ ಸಂಪನ್ನರಾದ ಸಕಲ ಶಿವ ಶರಣರರಿದಾಚರಿಸಿ ಕೃತಾರ್ಥರಾಗಲೆಂದು ಅನ್ಯೋನ್ಯೋಪದೇಶವಾಗುಪದೇಶಿಸುತ್ತಿಹರು.

ಕರಣಹಸಿಗೆ—ಕರಣಹಸಿಗೆ ಯೆಂಬ ಪೂರ್ವಪ್ರಕರಣವು ಈ ಶಾಸ್ತ್ರಕ್ಕೆ ತತ್ವಂಗಳ ಸಂಗ್ರಹದ ವಿಭಾಗದ ವಿವರಣೆಯೆಂಬ ನಾಮವು ಏನುಕಾರಣದಿಕ್ಕೆ ಬಂದಿತೆಲೆ ಸ್ವಾಮಿ ಯೆಂದು ಬೆಸಗೊಂಡಡೆ—ಕರಣವೆಂದೆಡೆ ತತ್ವಂಗಳು, ಹಸಿಗೆಯೆಂದಡೆ ವಿಭಾಗವು, ಅದು ಹ್ಯಾಗೆಂದೊಡೆ—ಒಬ್ಬಾನೊಬ್ಬ ಹಲಾಯುಧನು ಮಳೆಯ ಹದದಿ ಭೂಮಿಯ ಬೆದೆಯನರಿದು ಎತ್ತು, ಕುಂಟೆ, ಕೂರಿಗೆ, ನೊಗ, ನೇಗಿಲು, ಮಿಣಿ, ಬಾರಕೋಲು ಮುಂತಾದವುಗಳನ್ನು ತೆಗದುಕೊಂಡು ಹೋಗಿ ಹೊಡಿ ಹೊಡದು ಹರಗಿ ಹಸನುಮಾಡಿ, ಹದಿನೆಂಟು ಧಾನ್ಯಗಳನ್ನು ಬಿತ್ತಿ, ಕಳೆಮಳೆಯಂ ತೆಗದು, ಸುರಕ್ಷಿತವಾಗಿ ಸಲಹಿ, ಫಲಪೂರಿತವಾದ ಬಳಿಕ ಲವಿತ್ರವ ತೆಗದುಕೊಂಡು ಛೇದಿಸಿ, ಕಂತೆಯಂ ಕಟ್ಟಿ ಬಣಬೆಯನೊಟ್ಟಿ ಕಣವ ಮಾಡಿ, ಮೇಟಿಯನ್ನೆಟ್ಟು ಮೆಡ್ಡನ್ನು ಹಾಕಿ ತುಳಿಸಿ ಹಸನಮಾಡಿ ಒಕ್ಕಿ ತೂರಿ ರಾಶಿಯಂ ಮಾಡಿದ ಬಳಿಕ ಹಸ್ತದಲ್ಲಿ ಕೊಳಗವ ತೆಗದುಕೊಂಡು ಅಳೆಯುವಲ್ಲಿ ನೆಲ್ಲಿಷ್ಟಾಯಿತು, ಗೋಧಿ ಇಷ್ಟಾಯಿತು, ಕಡಲೆ ಇಷ್ಟಾಯಿತು, ಉದ್ದು ಇಷ್ಟಾಯಿತು, ಹೆಸರು ಇಷ್ಟಾಯಿತು, ಯಾವನಾಳ ಇಷ್ಟಾಯಿತು, ಅವರೆ ತೊಗರಿ ಹುರಳಿ ಮೊದಲಾದ ವಿವಿಧ ಧಾನ್ಯಂಗಳೆಲ್ಲಾ ಇಷ್ಟಿಷ್ಟಾದವೆಂದು ಅಳದಳದು ಹಸಿಗೆಯಂ ಮಾಡುವ ಹಾಗೆ ಇಂತೀ ಬ್ರಹ್ಮಾಂಡವೆಂಬ ಕ್ಷೇತ್ರಕ್ಕಧಿಪತಿಯಪ್ಪ ಪರಶಿವನೆಂಬ ಮಹಾ ಹಲಾಯುಧನು ಅನಾದಿಯಲ್ಲಿ ತನ್ನ ಪಂಚ ಮುಖಂಗಳಿಂದ ಪಂಚ ಭೂತಂಗಳಂ ಪುಟ್ಟಿಸಿ, ಆ ಪಂಚ ಭೂತಂಗಳ ತಾರತಮ್ಯದಿಂ

ದಿಪ್ಪತ್ತೈದು ತತ್ವಂಗಳಂ ಪುಟ್ಟಿಸಿ, ಆ ಇಪ್ಪತ್ತೈದು ತತ್ವ ಯುಕ್ತವಾದ ಶರೀರವನ್ನು ತನ್ನ ಗೋಪ್ಯ ಮುಖದಲ್ಲಿ ಆತ್ಮನಂ ಪುಟ್ಟಿಸಿ, ಆ ಆತ್ಮನಿಗೆ ಸಂಬಂಧವಂ ಮಾಡಿಕೊಳ್ಳಲು, ಆ ಆತ್ಮನು ಆ ದೇಹೋಹಂ ಭಾವದ ಮರವೆಯಿಂದ ತನ್ನ ನಿಜವಂ ಮರೆದು, ಅಜ್ಞಾನಿಯಾಗಿ ಅನೇಕ ಜನ್ಮಂಗಳೊಳಗೆ ಹುಟ್ಟಿ ಹುಟ್ಟಿ ಬರುವಲ್ಲಿ (ಶ್ಲೋ ॥ ಪುಣ್ಯಾದಾಪ್ನೋತಿ ದೇವತ್ವಂ ಪಾಪೈಸ್ಸ್ಥಾವರಮೇವಚ । ಪುಣ್ಯಪಾಪಸಮಾನೇಭ್ಯೋ ಲಭತೆ ಜನ್ಮಮಾನುಷಃ ॥) ಎಂದು ಹೇಳುತ್ತಿಹುದಾದಕಾರಣ ಪುಣ್ಯದಿಂದ ದೇವತಾಜನ್ಮ, ಪಾಪದಿಂದ ಸ್ಥಾವರಜನ್ಮ, ಪುಣ್ಯ ಪಾಪಂಗಳ ಸಮಾನತ್ವದಿಂದ ಮಾನುಷ್ಯ ಜನ್ಮವಹುದು. ಅಂತಪ್ಪ ಮಾನುಷ್ಯಜನ್ಮ ಸಂಬಂಧಿಯಾದಾತ್ಮನ ಸ್ಥೂಲವಲ್ಲದ ಸೂಕ್ಷ್ಮವಲ್ಲದ ಪ್ರಮಾಣವಾದ ದೇಹದಲ್ಲಿ ಆರು ಬಳ್ಳ ರಕ್ತ, ಆರುಮಾನ ಶ್ಲೇಷ್ಮ, ಮೂರು ಮಾನ ಪಿತ್ತ, ಒಂದು ಸೊಲಗೆ ಶುಕ್ಲದಿಂದೊಪ್ಪುತ್ತಿಹುದು. ಮತ್ತಮಾ ದೇಹದಲ್ಲಿ ಅರವತ್ತಾರು ಕೋಟಿ ಕರಣಂಗಳು, ಮೂವತ್ತು ಮೂರು ಕೋಟಿ ಇಂದ್ರಿಯಗಳು, ಇಪ್ಪತ್ತೆರಡು ಸಾವಿರ ನಾಡಿಗಳು. ಎಂಟು ಸಾವಿರ ಸಂದುಗಳಿಂದೊಪ್ಪುತ್ತಿಹುದು. ಮತ್ತಮಾ ದೇಹದಲ್ಲಿ ಮೂವತ್ತೆರಡು ಪೊಳ್ಳ ಕರುಳುಗಳು, ಮೂವತ್ತೆರಡು ದಂತ ಪಜ್ತಿಗಳಿಂದೊಪ್ಪುತ್ತಿಹುದು. ಮತ್ತಮಾ ದೇಹದ ಬಹಿರ್ವಳಯದಲ್ಲಿ ಎಂಟು ಕೋಟಿ ರೋಮ ರಾಜಿಗಳಿಂದೊಪ್ಪುತ್ತಿಹುದು. ಮತ್ತಮಾ ದೇಹದಲ್ಲಿ ಹಸಕಲ ತತ್ವಂಗಳಂ ಬೇರೆಬೇರೆ ಹಸಿಗೆಯಂ ಮಾಡಿ, ವಿಸ್ತರಿಸಿ ಹೇಳುತಿಹುದಾದಕಾರಣ ಈ ಶಾಸ್ತ್ರಕ್ಕೆ ತತ್ವವಿಭಾಗವೆಂಬಭಿಧಾನವು ಪ್ರಸಿದ್ಧವಾಯಿತೆಂಬುದೀಗ ಕರಣಹಸಿಗೆಯೆಂಬ ಶಬ್ದಕರ್ಥವು. ಓಂಕಾರವೆಂಬ ಪ್ರಣವದಲ್ಲಿ ಈ ತತ್ವವಿಭಾಗವೆಂಬ ಶಾಸ್ತ್ರದಲ್ಲಿ ಸಂಬಂಧವಾವುದು, ವಿಷಯವಾವುದು, ಪ್ರಯೋಜನವಾವುದು, ಇದಕ್ಕಧಿಕಾರಿಯಾರೈಯ್ಯಾ ಸ್ವಾಮಿಯೆಂದು ಬೆಸಗೊಂಡಡೆ—ಈ ಶಾಸ್ತ್ರದಲ್ಲಿ ತತ್ತ್ವಪದಾರ್ಥ ರೂಪವಾದ ಲಿಂಗಾಂಗಸ್ಥಲ ಸಂಯೋಗವೇ ಸಂಬಂಧ, ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಸ್ವರೂಪಮಾದ ಶ್ರೀ ಗುರುಲಿಂಗ ಜಂಗಮ ಪಾದೋದಕ ಪ್ರಸಾದವೆಂಬೀ ಪಂಚವಿಧವೇಕರೂಪವೆಂದು ಪ್ರತಿಪಾದಿಸುವದೇ ವಿಷಯವು. ಹಾನಿ ವೃದ್ಧಿಯಿಲ್ಲದೆ ಸಮಾನ ಸಮರಸವಾದ ಸ್ವರೂಪವು ಸಾಕ್ಷಾತ್ಕಾರವಪ್ಪ ಪರಮೋಕ್ಷವೇ ಪ್ರಯೋಜನವು. ಒಂದೆರಡು

ಮೂರು, ಆರು ಮುವ್ವತ್ತಾರು, ಇನ್ನೂರು ಹದಿನಾರು ಮೊಂತಾದ ಸ ರ್ವಾಚಾರ ಸಂಪತ್ತಿನಾಚರಣೆಯಲ್ಲಿ ಮುಮುಕ್ಷುವಾದ ಸದ್ಭಕ್ತನಧಿಕಾ ರಿಯು. ಇಂತಪ್ಪ ಗುಣಾನ್ವಿತನಾದಧಿಕಾರಿಗೆ ಅನುಗುಣವಾದೀಶಾ ಸ್ತ್ರವು ಪ್ರಯೋಜನವು. ಈ ಶಾಸ್ತ್ರದಲ್ಲಿ ಮೊದಲಾವುದ್ಯೆಯ್ಯಾ ಎಂದೊಡೆ—ಪ್ರಣವೋತ್ಪತ್ತಿ, ಪ್ರಣವದ ನಿರ್ದೇಶವೇ ಮೊದಲಾಗಿಹು ದು. ಅದು ಹ್ಯಾಗೆಂದೊಡೆ—ಅಷ್ಟತನು ಯುಕ್ತವಾದ ಬ್ರಹ್ಮಾಂಡಾ ದಿ ಚರಾಚರ ಪ್ರಾಣಿಗಳು ತೋರುವ ತೋರಿಕೆ ಯೇನೇನೂ ಇಲ್ಲದಂ ದು ಸರ್ವಶೂನ್ಯ ನಿರಾಲಂಬ ಬ್ರಹ್ಮವು ತಾನೊಂದೇ ಒಪ್ಪುತಿರ್ದಿತು. ಅಂತಿರ್ದ ಪರಬ್ರಹ್ಮವು ತಾನೊಂದೇ ಘೃತಕಾಠಿಣ್ಯವನ್ಮೂರ್ತಿ ಸಚ್ಚಿ ದಾನಂದಲಕ್ಷಣವೆಂದು ಹೇಳುತ್ತಿಹುದಾದಕಾರಣ ಒಂದಾನೊಂದು ತಿಳಿದುಪ್ಪವೇ ಘಟ್ಟಗೊಂಡು ಮೆರೆದುಪ್ಪವಾದಹಾಂಗೆ ನಿರಂಜನ ಬ್ರ ಹ್ಮವಾಯಿತು. (ನಿರಂಜನಪ್ರಣವಚಿಂತಾಯ ನಿರಂಜೋಂಕಾರ ಸಂಭ ವಃ) ಎಂದು ಹೇಳುತ್ತಿಹುದಾದಕಾರಣ, ಆ ನಿರಂಜನ ಬ್ರಹ್ಮವು ನೆನ ದ ನೆನಹೇ ನಿರಂಜೋಂಕಾರಶಕ್ತಿ, (ನಿರಂಜೋಂಕಾರಚಿಂತಾಯಾ ವಾ ಚ್ಯಪ್ರಣವಜಾಯತೆ) ಎಂದು ಹೇಳುತ್ತಿಹುದಾದಕಾರಣ, ಆ ನಿರಂಜನ ಬ್ರಹ್ಮದ ನಿರಂಜೋಂಕಾರಶಕ್ತಿಯ ನೆನಹುಮಾತ್ರದಿಂದ ವಾಚ್ಯಪ್ರಣ ವ ಸ್ವರೂಪವಾದ ಶೂನ್ಯಲಿಂಗವು ಪುಟ್ಟಿತು. ಅದೆಂತೆಂದೊಡೆ—(ಲೀ ಯತೆಗಮ್ಯತೆಯತ್ರ ಜಗತ್ಸರ್ವಂ ಚರಾಚರಂ। ತದೇಕಲಿಂಗಮಿತ್ಯುಕ್ತಂ ಲಿಂಗಾಕಾರಮಿತಿಸ್ಮೃತಂ॥ ಲಿಕಾರಂವಿಲಯಂಪ್ರೋಕ್ತಂ ಗಕಾರಂ ಗಮನ ಮುಚ್ಯತೆ । ಲೀಯನಾಗಮನಾಭ್ಯಾಂಚ ಲಿಂಗಶಬ್ದರಿತಿಸ್ಮೃತಃ ॥ ನರ ಕ್ತಂನಚಪಾಪೀತಂ ನಶುಕ್ಲಂಕೃಷ್ಣಮೆವಚ। ಸರ್ವವರ್ಣವಿನಿರ್ಮುಕ್ತಂ ಜ್ಞಾನಾತೀತಂ ಪರಾತ್ಪರಂ ॥ ಮನ್ನಾಥಸ್ತ್ರೀಜಗನ್ನಾಥಃ ಮದ್ಗುರುಃತ್ರಿ ಜಗದ್ಗುರುಃ। ಸ್ವಾತ್ಮಾತ್ಮಸರ್ವಭೂತಾತ್ಮ ತಸ್ಮೈಶ್ರೀಗುರವೇನಮಃ॥) ಎಂಬದಾಗಿ ಆ ಶೂನ್ಯ ಲಿಂಗಕ್ಕಂಗವಾಗಿರುವಂತಾದ್ದೇ ಮಹಾಜ್ಞಾನ, ಚಿತ್ತು (ಅವಾಚ್ಯ ಪ್ರಣವಚಿಂತಾಯ ಕಲಾಪ್ರಣವ ಸಂಭವಃ) ಎಂದು ಹೇಳುತ್ತಿಹುದಾದಕಾರಣ, ಆ ಶೂನ್ಯ ಲಿಂಗದ ಮಹಾಜ್ಞಾನ ಚಿತ್ತಿನ ನೆ ನಹುಮಾತ್ರದಿಂದ ಕಲಾಪ್ರಣವ ಸ್ವರೂಪವಾದ ನಿಃಕಲಬ್ರಹ್ಮವು ಹು ಟ್ಟಿತು. ಆ ನಿಃಕಲಬ್ರಹ್ಮಕಂಗವಾಗಿರುವಂತಾದ್ದೇ ಜ್ಞಾನಚಿತ್ತು. ಆ ಚಿತ್ತಿನ ಚಿನ್ನಾದವೇ ಬಕಾರ, ಚಿದ್ಬಿಂದುವೇ ಸಕಾರ, ಚಿತ್ಕಳೆಯೇ

ಮಕಾರ, ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡಖಂಡಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು. (ಆದ್ಯಂತಶೂನ್ಯ ಮಮಲಂ ಪರಿಪೂರ್ಣಮೇಕಂ ಸೂಕ್ಷ್ಮಂಪರಾತ್ಪರಮನಾಮಯಮಪ್ರಮೇಯಂ । ಭಾವೈಕಗಮ್ಯಮಜಡಂ ಶಿವತತ್ವರೂಪಂ ಚಿಚ್ಛಕ್ತಿಸಂಸ್ಫುರಣರೂಢಮಹಾತ್ಮಲಿಂಗಂ॥ಮಹಾಲಿಂಗಮಿದಂದೇವಿಮನೋತೀತಮಗೋಚರಂ।ನಿರ್ನಾಮಂನಿರ್ಗುಣಂನಿತ್ಯಂ ನಿರಂಜನನಿರಾಮಯಂ॥) ಎಂದುದಾಗಿ ಆ ಮಹಾಲಿಂಗಕ್ಕಂಗವಾಗಿ ಪೀಠವಾಗಿರುವ ಓಂಕಾರವೆಂಬ ಓಂಕಾರವೆಂದು ಹೇಳಿಸಿಕೊಳ್ಳುವ ಪ್ರಣವದ ಪರಶಕ್ತಿ ಪ್ರಣವದಲ್ಲುತ್ಪತ್ತಿಯಾದಂತಾ ವಿಚಾರವು ಹ್ಯಾಗೆಂದೊಡೆ—(ಶ್ಲೋ॥ ಪ್ರಥಮಂತಾರಕಾಕಾರಃ ದ್ವಿತೀಯಂ ದಂಡರುಚ್ಯತೆ । ತೃತೀಯಂಕುಂಡಲಾಕಾರಶ್ಚತುರ್ಥಮರ್ಧಚಂದ್ರಕಂ॥ ಪಂಚಮಂ ದರ್ಪಣಾಕಾರಷ್ಷಷ್ಟಂಜ್ಯೋತಿರುಚ್ಯತೆ॥)ಎಂದು ಹೇಳುತ್ತಿಹುದಾದಕಾರಣ ತಾರಕಾಕೃತಿ, ದಂಡಾಕೃತಿ, ಕುಂಡಲಾಕೃತಿ, ಅರ್ಧಚಂದ್ರಾಕೃತಿ, ದರ್ಪಣಾಕೃತಿ, ಜ್ಯೋತಿರಾಕೃತಿಗಳೆಂಬ ಷಷ್ಠಾಕೃತಿಗಳೊಳಗೆ ಓಂಕಾರವೆಂಬ ಪ್ರಣವದಲ್ಲಿ ಅಕಾರ (ಓಂಕಾರಂತಾರಕಾಕಾರ ಮಕಾರಂಚ ಪ್ರಜಾಯತೆ) ಎಂದು ಹೇಳುತ್ತಿಹುದಾದಕಾರಣ ಓಂಕಾರ ಪ್ರಣವದ ತಾರಕಾಕೃತಿ ದಂಡಾಕೃತಿಗಳೆಂಬ ಉಭಯಾಕೃತಿಗಳನೊಳಕೊಂಡುತ್ಪತ್ತಿಯಾದಂತಾದ್ದೇ ಅಕಾರ ಪ್ರಣವ ; ಉಕಾರ (ಓಂಕಾರ ಕುಂಡಲಾಕಾರೆ ಉಕಾರಂಚ ಪ್ರಜಾಯತೆ) ಎಂದು ಹೇಳುತಿಹುದಾದಕಾರಣ ಓಂಕಾರ ಪ್ರಣವದ ಕುಂಡಲಾಕೃತಿ ಅರ್ಧಚಂದ್ರಾಕೃತಿಗಳೆಂಬುಭಯಾಕೃತಿಗಳನೊಳಕೊಂಡುತ್ಪತ್ತಿಯಾದಂತಾದ್ದೇ ಉಕಾರ ಪ್ರಣವವು. ಮಕಾರ (ಓಂಕಾರಜ್ಯೋತಿರಾಕಾರೆ ಮಕಾರಂಚ ಪ್ರಜಾಯತೆ) ಎಂದು ಹೇಳುತಿಹುದಾದಕಾರಣ, ಓಂಕಾರ ಪ್ರಣವದ ಜ್ಯೋತಿರಾಕೃತಿ ದರ್ಪಣಾಕೃತಿಗಳೆಂಬುಭಯಾಕೃತಿಗಳ ನೊಳಕೊಂಡುತ್ಪತ್ತಿಯಾದಂತಾದ್ದೇ ಮಕಾರಪ್ರಣವವು. ಈ ಮೂರು ಬೀಜಾಕ್ಷರ ಕಾರಣವಾದ ಪ್ರಣವಂಗಳು ಎಂಬಲ್ಲಿ (ಹೇತುನಾ ಕಾರಣಂಬೀಜಂ ಸಾಧನಂಲಿಂಗಮಾತ್ರಯೋಃ) ಎಂದು ಹೇಳುತ್ತಿಹುದಾದಕಾರಣ ಶೂನ್ಯಾದಿ ಬ್ರಹ್ಮಾಂತ, ಬ್ರಹ್ಮಾದಿ ಶಿವಾಂತ, ಶಿವಾದಿ ರುದ್ರಾಂತ, ರುದ್ರಾದಿ ಬ್ರಹ್ಮಾಂತ, ಬ್ರಹ್ಮಾದಿ ತೃಣಾಂತ್ಯವಾದ ತತ್ವ ಪಂಚ ಸೃಷ್ಟಿಗಳಿಗೆ ಕಾರಣವಾದ ಪ್ರಣವಂಗಳೆಂಬುದೀಗ ಈ

ಮೂರು ಬೀಜಾಕ್ಷರ ಅಕಾರ ಪ್ರಣವವೇ ಚಿನ್ನಾದ ಸ್ವರೂಪವಾಗಿಪ್ಪುದು. ಆ ಚಿನ್ನಾದವೆಂಬುದು ತಾನೆಂತಾದ್ದೆಂದರೆ—(ಯಥಾದೀರ್ಘಘಂಟಾನಿನಾದವತ್) ಎಂದು ಹೇಳುತ್ತಿಹುದಾದಕಾರಣ, ಒಂದಾನೊಂದು ಘಟಿಕಾಸ್ಥಾನದಲ್ಲಿ ಕಟ್ಟಿರ್ದ ಪಂಚಲೋಹದ ಮಣುವಿನ ತೂಕದ ಭಾರಿ ಘಂಟೆಯ ನಾಲಿಗೆಯನ್ನು ಹಿಡಿದು ಜಡಿದು ತೂಗಿಬಿಟ್ಟಲ್ಲಿ ಅದು ಹ್ಯಾಗೆ ಓಂ ಓಂ ಓಂ ಎಂದು ಘೋಷಿಸುತ್ತಿಹುದೋ ಅಂತಪ್ಪದೊಂದು ಸುನಾದಘೋಷವನುಳ್ಳದ್ದೇ ಅಕಾರ ಪ್ರಣವವೆಂಬುದೀಗ ಅಕಾರವೇ ನಾದವು. ಉಕಾರ ಪ್ರಣವವೇ ಚಿದ್ಬಿಂದು ಸ್ವರೂಪವಾಗಿಪ್ಪುದು. ಆ ಚಿದ್ಬಿಂದುವೆಂಬುದು ತಾನೆಂತಾದ್ದೆಂದೊಡೆ—(ಯಥಾಸುವರ್ಣತೈಲಧಾರವತ್)ಎಂದು ಹೇಳುತ್ತಿಹುದಾದಕಾರಣ, ಒಬ್ಬಾಳೊಬ್ಬ ರಾಜಸ್ತ್ರೀಯಳು ನವರತ್ನ ಖಚಿತವಾದ ಸುವರ್ಣದ ಗಿಂಡಿಯಲ್ಲಿ ಕಮ್ಮೆಣ್ಣೆಯಂ ತುಂಬಿಕೊಂಡು ವಳು ನೆಲೆಯ ಚಿನ್ನದುಪ್ಪರಿಗೆಯ ಲೋವೆಯ ಮೇಲೆ ನಿಂದು ಪ್ರಾತಃಕಾಲದಲ್ಲಿ ಕೆಳಕ್ಕೆ ಧಾರೆಗಟ್ಟಿ ಯೆರೆಯಲು, ಸೂರ್ಯನ ಕಿರಣ, ಸುವರ್ಣದ ಪ್ರಕಾಶ, ತೈಲದ ರಂಗು ಈ ತ್ರಿವಿಧವೂ ಕೂಡಿ ಜ್ವಲತ್ಸ್ತಂಭಾಯಮಾನವಾಗಿ ಝಗ ಝಗಿಸಿ ಬೆಳಗುತ್ತಿಹುದೋ, ಅಂತಪ್ಪದೊಂದು ಚಿದ್ಬಿಂದು ಪ್ರಕಾಶವನುಳ್ಳದ್ದೇ ಉಕಾರ ಪ್ರಣವವೆಂಬುದೀಗ ಉಕಾರವೇ ಬಿಂದು, ಮಕಾರ ಪ್ರಣವವೇ ಚಿತ್ಕಳಾಸ್ವರೂಪವಾಗಿರುತ್ತಿಹುದು. ಆ ಚಿತ್ಕಳೆ ಯೆಂಬುದು ತಾನೆಂತಾದ್ದೆಂದೊಡೆ—(ಯಥಾ ಅರುಣಪ್ರಕಾಶವತ್) ಎಂದು ಹೇಳುತಿಹುದಾದಕಾರಣ, ಒಂದಾನೊಂದು ಮಧ್ಯಾಹ್ನಕಾಲದ ಚಂಡಸೂರ್ಯ ಕೋಟಿಗಳ ಪ್ರಕಾಶವನು ಕೀಳ್ಪಡಿಸಿ, ಬೆಳಗಲ್ಪಟ್ಟ ಮಹಾ ಪ್ರಕಾಶವನುಳ್ಳದ್ದೇ ಮಕಾರ ಪ್ರಣವವೆಂಬುದೀಗ ಮಕಾರ ಪ್ರಣವವೇ ಕಳೆಯು. ಅಂತುಮಲ್ಲದೆಯು ಅಕಾರ ಪ್ರಣವವೇ ರುದ್ರ, ರುದ್ರತತ್ವ ಸ್ವರೂಪಿನಿಂದಿರುತ್ತಿಹುದು. ಅದು ಹ್ಯಾಗೆಂದೊಡೆ—ಅಕಾರವೇ ಬೀಜದಹಾಂಗೆ, ರುದ್ರಮೂರ್ತಿಯೇ ವೃಕ್ಷದಹಾಂಗೆ, ಬೀಜದಲ್ಲಿ ವೃಕ್ಷ ಅಡಗಿರುವಹಾಂಗೆ ಅಕಾರ ಪ್ರಣವದಲ್ಲಿ ರುದ್ರ, ತತ್ವವು ಅಡಗಿ ಒಪ್ಪುತ್ತಿಹುದು. ಉಕಾರ ಪ್ರಣವವೇ ಈಶ್ವರ, ಈಶ್ವರತತ್ವ ಸ್ವರೂಪವಾಗಿ ಪುಷ್ಪದಹಾಂಗೆ ಈಶ್ವರ ಮೂರ್ತಿಯೇ ಪರಿಮಳದ ಹಾಂಗೆ, ಪುಷ್ಪದಲ್ಲಿ ಪರಿಮಳ ಅಡಗಿರುವಹಾಂಗೆ ಉಕಾರ ಪ್ರಣವದಲ್ಲಿ ಈಶ್ವರತತ್ವ ಅಡಗಿ ಒಪ್ಪುತ್ತಿಹುದು. ಮಕಾರ ಪ್ರ

ಣವುಮೇ ಸದಾಶಿವ, ಸದಾಶಿವತತ್ವ ಸ್ವರೂಪವಾಗಿರುತಿಹುದು. ಅದು ಹ್ಯಾಗೆಂದೊಡೆ—ಮಕಾರವೇ ಚಿನ್ನದ ಹಾಗೆ, ಸದಾಶಿವ ಮೂರ್ತಿಯೇ ಬಣ್ಣದ ಹಾಗೆ, ಚಿನ್ನದಲ್ಲಿ ಬಣ್ಣ ಅಡಗಿರುವ ಹಾಗೆ ಮಕಾರ ಪ್ರಣವದಲ್ಲಿ ಸದಾಶಿವತತ್ವ ಅಡಗಿ ಒಪ್ಪುತಿಹುವೆಂಬುದರ್ಥ. ಮತ್ತಂತುವಲ್ಲದೆ ಅಕಾರವೇ ಅಕಾರ ಪ್ರಣವುಮೇ ರುದ್ರ, ರುದ್ರತತ್ವ ಸ್ವರೂಪಿನಿಂದ ಸಕಲ ಜಗತ್ತಿನ ಸಹ್ಮಾರ ಕೃತ್ಯವನ್ನುಂಟುಮಾಡಿ ನಡಸುತಿಹುದು. ಉಕಾರವೇ ಉಕಾರ ಪ್ರಣವುಮೇ ಈಶ್ವರ, ಈಶ್ವರತತ್ವ ಸ್ವರೂಪಿನಿಂದ ಸಕಲ ಜಗತ್ತಿನ ತಿರೋಧಾನ ಕೃತ್ಯವನುಂಟುಮಾಡಿ ನಡಸುತಿಹುದು. ಮಕಾರವೇ ಮಕಾರ ಪ್ರಣವುಮೇ ಸದಾಶಿವ, ಸದಾಶಿವತತ್ವ ಸ್ವರೂಪಿನಿಂದೆಸಕಲ ಜಗತ್ತಿನನುಗ್ರಹಕೃತ್ಯವನುಂಟುಮಾಡಿ ನಡಸುತಿಹುದು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಈ ಅಕಾರ ರುದ್ರತತ್ವ ಸ್ವರೂಪವಾದ ಅಕಾರ ಪ್ರಣವುವು, ಉಕಾರ ಈಶ್ವರತತ್ವ ಸ್ವರೂಪವಾದ ಉಕಾರ ಪ್ರಣವುವು, ಮಕಾರ ಸದಾಶಿವತತ್ವ ಸ್ವರೂಪವಾದ ಮಕಾರ ಪ್ರಣವುವು ಎಂಬೀ ತ್ರಿವಿಧ ಪ್ರಣವುಂಗಳು ದೆಯಾಧಾರ ವಿಶ್ರಾಂತಿಗೆ ನಾದ ಬಿಂದು ಕಳೆಯೇ ಪರನಾದ ಪರಬಿಂದು ಪರಕಳೆಯೆಂಬ ಬಸವಾಕ್ಷರ ತ್ರಯುಂಗಳೇ ಆಧಾರ. ಅದು ಹ್ಯಾಗೆಂದೊಡೆ—(ಶ್ಲೋ॥ ಬಕಾರಂ ನಾದರೂಪಂಚ ಸಕಾರಂ ಬಿಂದುರೂಪಕಂ ॥ ವಕಾರಂಚ ಕಳಾರೂಪಂ ತ್ರಿವಿಧಂಬಸವಾಕ್ಷರಂ॥) ಮತ್ತಂ (ಬಕಾರಂಗುರುರೂಪಂಚ ಸಕಾರಂ ಲಿಂಗರೂಪಕಂ । ವಕಾರಂಜಂಗಮಶ್ಚೈವ ತ್ರಿಮೂರ್ತಿಬಸವಾಕ್ಷರಂ ॥) ಮತ್ತಂ (ಬಕಾರಂಸತ್ಸ್ವರೂಪಂಚ ಸಕಾರಂಚಿತ್ಸ್ವರೂಪಕಂ । ಆನಂದಸ್ತು ವಕಾರಶ್ಚ ತ್ರಿವಿಧಂಬಸವಾಕ್ಷರಂ ॥) ಮತ್ತಂ (ಬಕಾರಮಿಷ್ಟಲಿಂಗಂಚ ಸಕಾರಂಪ್ರಾಣಲಿಂಗಕಂ । ವಕಾರಂಭಾವಲಿಂಗಂಚ ತ್ರಿವಿಧಂಬಸವಾಹ್ವಯಂ॥) ಇವುಗಳಾಧಾರಾಸ್ಪದವಾಗಿಪ್ಪವು. ಆ ನಾದ ಬಿಂದು ಕಳೆಗೆ ಆ ಪರನಾದ ಪರಬಿಂದು ಪರಕಳೆಯೆಂಬ ಬಸವಾಕ್ಷರ ತ್ರಯುಂಗಳುದಯಾಧಾರ ವಿಶ್ರಾಂತಿಗೆ ಪ್ರಕೃತಿಯೇ (ಮೂಲಪ್ರಕೃತಿಸಂಜ್ಞಾಯು ಮೂಲಸ್ತಂಭಾಯುವ್ಯೈನಮಃ) ಎಂದು ಹೇಳುತಿಹುದಾದಕಾರಣ, ಆ ಸ್ವಭಾವ ಸಂಸಿದ್ಧ ರೂಪಿಣಿಯುಪ್ಪ ಮಹಾಜ್ಞಾನ ಚಿಚ್ಛಕ್ತಿಯೇ ಆಧಾರಾಸ್ಪದವಾಗಿಪ್ಪಳು. ಆ ಪ್ರಕೃತಿಗಾಸ್ವಭಾವ ಸಂಸಿದ್ಧ ರೂಪಿಣಿಯುಪ್ಪ ಮಹಾಜ್ಞಾನ ಚಿಚ್ಛಕ್ತಿಯುದೆಯಾಧಾರ ವಿಶ್ರಾಂತಿಗೆ ಶೂನ್ಯಲಿಂಗ

ವೇ ಆಧಾರಾಸ್ಪದವಾಗಿರುತಿಹುದು. ಮತ್ತಂತೆಯಲ್ಲದೆ ಆ ಪ್ರಾಣಕ್ಕೆ ಆ ಗುಣ ತ್ರಾಣ ಪ್ರಾಣಸ್ವರೂಪವಾದ ನಿಃಕಲ ಬ್ರಹ್ಮಕ್ಕೆ ಮಹಾಲಿಂಗ ವೇ ಆಧಾರಾಸ್ಪದವಾಗಿರುತಿಹುದು. ಅದು ಹ್ಯಾಗೈಯ್ಯಾ ಯೆಂದೊ ಡೆ—ಈ ಲೋಕದಲ್ಲಿ ತಂದೆಯು ಮಗನಿಗೆ ಆಸ್ಪದವಾಗಬೇಕಲ್ಲದೆ, ತಂ ದೆಗೆ ಮಗನು ಆಸ್ಪದವಾಗುವದುಂಟೇ ಯೆಂದು ಬೆಸಗೊಂಡೊಡೆ ಉಂ ಟುಂಟು, ಅದು ಹ್ಯಾಗೆಂದೊಡೆ—ಒಬ್ಬಾನೊಬ್ಬ ರಾಜ ಕುಮಾರನು ತಮ್ಮ ತಂದೆಯಿಂದ ದೇಶ ಕೋಶ ಬೊಕ್ಕಸ ಭಂಡಾರ ಚತುರಂಗ ಸೇನೆ ಮೊದಲಾದವನು ತಮ್ಮ ತಂದೆಯು ಮುಂದಿಟ್ಟುಕೊಂಡು ತಾನೇ ಹ್ಯಾಗೆ ಪರಿಪಾಲಿಸುತಿಹನೋ ಹಾಗೆ ನಿಃಕಲ ಬ್ರಹ್ಮದಿಂದುಂಟಾದ ಸಗು ಣ ನಿರ್ಗುಣಾನಂದದ ಸೃಷ್ಟಿಯ ಲೀಲಾ ವಿನೋದವ ನಟಿಸುವದಕ್ಕೆ ಕುಮಾರಮೂರ್ತಿಯಪ್ಪ ಮಹಾಲಿಂಗವೇ ಆಸ್ಪದವಾಗಿರುತಿಹುದು. ಆ ಎಂದೊಡೆ, ಆ ಎಂಬ ಊರ್ಧ್ವ ಸ್ವರವು ತಾನೆಂತಾದ್ದೈಯ್ಯಾ ಎಂದೊ ಡೆ—ಅನಾಹತ ಎಂದೆಂದಿಗೂ ಕೇಡಿಲ್ಲದಿರ್ದಂತಾ ಶಿವಾಕ್ಷರವು, ಊ ಎಂ ದೊಡೆ, ಊ ಎಂಬ ಅರ್ಥವೇನೈಯ್ಯಾ ಎಂದೊಡೆ—ನಾದ ಇಳಿಯಿತು, ಆ ಎಂಬ ಶಿವ ಸ್ವರವು ಊ ಎಂಬ ಶಕ್ತಿಸ್ವರದಲ್ಲಿ ಬಂದು ಕೂಡಿತು. ಅಲ್ಲಿ ಅವು ಬ ಭವತಿ ಎಂಬ ವ್ಯಾಕರಣ ಸೂತ್ರ ವಿಭಾಗೆಯಿಂದ ಅಕಾರ ಉಕಾರ ಕೂಡಿ ಓಂಕಾರವಾಯಿತು. ಆ ಓಂಕಾರ ಪ್ರಣವದ ಸಮಕ್ಷ ಮದೊಳಗೆ ಮಾ ಎಂಬ ಬಿಂದು ಬಂದು ಕೂಡಲು, ಮಕಾರ ಪ್ರಣವವೆಂ ಬುದು ತಾನೇ ಅನುಸ್ವಾರ ಸ್ವರೂಪಿನಿಂದ ಬಂದು ಪ್ರಯೋಗವಾಗಿ ಶಿವ ಶಕ್ತಿಯಾಗುತ್ತಂ ಅಕಾರ ಉಕಾರ ಮಕಾರ ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು, ಇಂತೀ ನಾಲ್ಕು ಒಂದಾದಲ್ಲಿ ಪರಶಿವ ಪರಶಕ್ತಿ ಸ್ವರೂಪವಾಗು ತ್ತಲಿರುವಂತಾ ಓಂಕಾರವಾಯಿತು. ಓಂ ಎಂಬುವದೊರ್ಧ್ವ ಸ್ವರವ ನುಳ್ಳ ಷಟ್ಕೃತಿಗಳು ಸಂಪೂರ್ಣವಾದ ಸಾಕಲ್ಯ ಪ್ರಣವವು ಸಾಧನ್ಯ ವಾಯಿತು. ಅಕಾರವೆಂಬ ಪ್ರಣವದಲ್ಲಿ (ವರ್ಣಂಬೀಜಂತಥಾನ್ನಂಚ ಲಿಂಗಮಾತೃಕಮಕ್ಷರಂ) ಎಂದು ಹೇಳುತಿಹುದಾದ ಕಾರಣ, ವರ್ಣವೆಂ ದಡು, ಬೀಜವೆಂದಡು, ಅನ್ನವೆಂದಡು, ಲಿಂಗವೆಂದಡು, ಮಾತೃಕವೆಂದ ಡು, ಅಕ್ಷರವೆಂದಡೂ ಒಂದೇನಾಮ ಪರ್ಯಾಯವಾಗಿಪ್ಪುದು. ಅದು ಕಾರಣವಾಗಿ ಅಕಾರವೆಂಬ ಅಕಾರವೆಂದು ಹೇಳಿಸಿಕೊಂಬ ಪ್ರಣವದಲ್ಲಿ ಅಕ್ಷರದೊಳಗೆ (ಅಗ್ನಿಶ್ಚಋಗ್ವೇದೊಭವತಿ) ಅಗ್ನಿಃ-ಪಂಚಭೂತಗಳೊ

ಳಗೆ ತೇಜವೆಂಬುವದೊಂದು ತತ್ವವು, ಋಗ್ವೇದ-ನಾಲ್ಕು ವೇದಗಳೊ
ಳಗೆ, ಋಗ್ವೇದವೆಂಬುವದೊಂದು ವೇದವು ಓಂ-ಪ್ರಣವ ಸ್ವರೂಪವಾದ,
ರುದ್ರ-ಪಂಚಾಧಿ ದೇವತೆಗಳೊಳಗೆ ರುದ್ರಮೂರ್ತಿ ಯೆಂಬುವದೊಂದು
ಅಧಿದೇವತೆಯೂ ಇಂದ್ರಾದಿ ನಿರ್ಜರರೆಂಬ ದೇವತೆಗಳೂ ಉತ್ಪತ್ತಿಯಾ
ದರು. ಉತ್ಪತ್ತಿಯಾಗಿ ಪರಶಿವನ ಸಗುಣಾನಂದದ ಸೃಷ್ಟಿಯ ಲೀಲಾ
ವಿಲಾಸ ಉಂಟಾಗಿರುವ ಪರಿಯಂತರ ಉಂಟಾಗಿರ್ದು ಆ ಲೀಲೆ ಸಾಕಾದ
ಬಳಿಕ ಪ್ರಣಮವೇ ಓಂಕಾರ ಪ್ರಣಮವಾದ ಪ್ರಥಮಾಂಶಿಕೆ ಒಂದನೇ
ಅಂಶವಾದ ಅಕಾರ ಪ್ರಣಮದಲ್ಲಿಯೇ ವಿಶ್ರಾಂತಿಯನ್ನು ಐದುತ್ತಿಹುದು.
ಅದು ಹ್ಯಾಗೆಂದೊಡೆ—(ಯದ್ದೃಷ್ಟಂತನ್ನಷ್ಟಂ) ಎಂದು ಹೇಳುತಿ
ಹುದಾದಕಾರಣ. ಎಲ್ಲಿ ಹುಟ್ಟಿದಂತಾ ವಸ್ತುವೆಂಬುದು ತಾನು ಅದರೊ
ಳಗೆ ಅಡಗುತಿಹುದು. ಅದು ಹ್ಯಾಗೆಂದೊಡೆ—ಒಂದಾನೊಂದು ಪೃಥ್ವಿ
ಯಲ್ಲಿ ಪುಟ್ಟಿದಂತಾ ತರು ಗುಲ್ಮ ಲತೆ ಧೂಳಿಪಾಂಸ್ವಾದಿಗಳೆಲ್ಲವೂ ಆ
ಪೃಥ್ವಿಯಲ್ಲಿ ಯಡಗುವಹಾಗೆ (ಯಥಾಜಲಚರಂವೀಚಿ ಸಮುದ್ರಾಜ್ಜಾ
ತಂಲಯಂಚ) ಎಂದುದಾಗಿ ಒಂದಾನೊಂದು ಸಮುದ್ರದಲ್ಲಿ ಹುಟ್ಟಿದ
ನೊರೆ ತೊರೆ ಬುದ್ಬುದ ತುಂತುರುವನಿ ಸೀಕರಾದಿಗಳೆಲ್ಲವೂ ಆ ಸಮು
ದ್ರದಲ್ಲಿ ಯಡಗುವಹಾಂಗೆ ಈ ಅಕಾರ ಪ್ರಣಮದಲ್ಲಿ ಹುಟ್ಟಿದ ಸಕಲ ತ
ತ್ವಂಗಳೂ ಅಕಾರ ಪ್ರಣಮದಲ್ಲಿ ಯಡಗುತ್ತಿಹವು. ಉಕಾರವೆಂಬ ಉ
ಕಾರವೆಂದು ಹೇಳಿಸಿಕೊಂಬ ಪ್ರಣಮದಲ್ಲಿ ವರ್ಣದೊಳಗಂತರಿಕ್ಷ, ಪಂ
ಚಭೂತಗಳೊಳಗೆ ಆಕಾಶವೆಂಬುವದೊಂದು ತತ್ವವು ನಾಲ್ಕು ವೇದಂ
ಗಳೊಳಗೆ ಯಜುರ್ವೇದವೆಂಬುವದೊಂದು ವೇದವು ಓಂ-ಪ್ರಣವ ಸ್ವರೂ
ಪವಾದ ಪಂಚಾಧಿದೇವತೆಗಳೊಳಗೆ ಈಶ್ವರನೆಂಬುವದೊಂದಧಿದೇವತೆ
ಯು, ಇಂದ್ರಾದಿ ಅಪ್ಸರರೆಂಬ ದೇವತೆಗಳುತ್ಪತ್ತಿಯಾದವು. ಉತ್ಪತ್ತಿ
ಯಾಗಿ ಪರಶಿವನ ಸಗುಣಾನಂದದ ಲೀಲಾವಿನೋದ ಉಂಟಾಗಿರುವ ಪರಿ
ಯಂತರ ಉಂಟಾಗಿರ್ದು ಆ ಲೀಲೆ ಸಾಕಾದ ಬಳಿಕ ಪ್ರಣಮವೇ ಓಂ
ಕಾರ ಪ್ರಣಮದೆರಡನೆಯಂಶವಾದ ಉಕಾರ ಪ್ರಣಮದಲ್ಲಿಯೇ ವಿಶ್ರಾಂತಿ
ಯನ್ನು ಐದುತಿಹವು. ಅದು ಹ್ಯಾಗೆಂದೊಡೆ—(ಯದ್ದೃಷ್ಟಂತನ್ನ
ಷ್ಟಂ) ಎಂದು ಹೇಳುತಿಹುದಾದಕಾರಣ, ಯಾವಲ್ಲಿ ಹುಟ್ಟಿದಂತಾ ವ
ಸ್ತುವೆಂಬುದು ತಾನು ಅದರೊಳಗಡಗುತಿಹುದು. ಅದು ಹ್ಯಾಗೆಂದೊ
ಡೆ—ಒಂದಾನೊಂದಗ್ನಿಯಲ್ಲಿ ಹುಟ್ಟಿದಂತಾ ಸ್ಫುಲಿಂಗ ತೇಜಸಾದಿಗಳೆಲ್ಲ

ವೂ ಆ ಅಗ್ನಿಯಲ್ಲಡಗುವ ಹಾಗೆ ವಾಯುವಿನಲ್ಲಿ ಹುಟ್ಟಿದ ಸುಳಿಗಾಳಿ ಚಂಡಮರುತಾದಿಗಳೆಲ್ಲವೂ ಆ ವಾಯುವಿನಲ್ಲಡಗುವಹಾಂಗೆ ಆಕಾಶದಲ್ಲಿ ಹುಟ್ಟಿದಂತಾ ಗಂಧರ್ವ ನಗರಾದಿಗಳೆಲ್ಲವೂ ಆ ಆಕಾಶದಲ್ಲಿ ಯಡಗುವ ಹಾಂಗೆ ಉಕಾರವೆಂಬ ಪ್ರಣಮದಲ್ಲಿ ಹುಟ್ಟಿದ ಸಕಲ ತತ್ವಂಗಳು ಆ ಉಕಾರ ಪ್ರಣಮದಲ್ಲಿ ಯಡಗುತ್ತಿಹವು. ಮಕಾರವೆಂದು ಹೇಳಿಸಿಕೊಂಬ ಪ್ರಣಮದಲ್ಲಿ ಲಿಂಗದೊಳಗೆ ವಿದ್ಯಾಸುಜ್ಞಾನಕಲಾತ್ಮವೆಂಬುವದೊಂದು ತತ್ವವು, ಮತ್ತಂತೆಯಲ್ಲದೆ ಚತುಷ್ಷಷ್ಟಿಕಳಾ ವಿದ್ಯೆಗಳು, ಆ ವಿದ್ಯೆಗಳ ನರಿವಂತಾ ಜ್ಞಾನವು, ಸಾಮವೇದಃ-ನಾಲ್ಕು ವೇದಂಗಳೊಳಗೆ ಸಾಮವೇದವೆಂಬುವದೊಂದು ವೇದವು, ಓಂ-ಪ್ರಣಮ ಸ್ವರೂಪನಾದ; ಸದಾಶಿವಃ-ಪಂಚಾಧಿ ದೇವತೆಗಳೊಳಗೆ ಸದಾಶಿವನೆಂಬುವದೊಂದು ಅಧಿದೇವತೆಯು, ದೇವತಾಃ-ಇಂದ್ರಾದಿ ಅಷ್ಟದಿಕ್ಪಾಲಕರೆಂಬಧಿ ದೇವತೆಗಳು, ಭವತಿ-ಇಷ್ಟೆಲ್ಲಾ ಉತ್ಪತ್ತಿಯಾದವು, ಉತ್ಪತ್ತಿಯಾಗಿ ಪರಶಿವನ ಸಗುಣಾನಂದದ ಸೃಷ್ಟಿಯ ಲೀಲಾ ವಿನೋದ ಉಂಟಾಗಿರುವ ಪರಿಯಂತರ ಉಂಟಾಗಿರುವದು, ಆ ಲೀಲೆ ಸಾಕಾದ ಬಳಿಕ ಪ್ರಣಮವೇ ಓಂಕಾರ ಪ್ರಣಮದ ತೃತೀಯಾಂಶಿಕೆ, ಮೂರನೆಯಂಶವಾದ ಮಕಾರ ಪ್ರಣಮದಲ್ಲೇ ಲಯಂ-ವಿಶ್ರಾಂತಿಯನ್ನು ಪ್ರಾಪ್ತಿಐದುತಿಹುದು. ಅದು ಹ್ಯಾಗೆಂದೊಡೆ—ಯದ್ದೃಷ್ಟಂ ತನ್ನಷ್ಟಂ ಎಂದು ಹೇಳುತಿಹುದಾದಕಾರಣ, ಯಾವಲ್ಲಿ ಹುಟ್ಟಿದಂತಾ ವಸ್ತುವೆಂಬುದು ತಾನದರೊಳಗಡಗುತಿಹುದು. ಅದು ಹ್ಯಾಗೆಂದೊಡೆ—ಒಂದಾನೊಂದು ಚಂದ್ರನಲ್ಲಿ ಹುಟ್ಟಿದ ಷೋಡಶ ಕಲೆಗಳೆಲ್ಲವೂ ಆ ಚಂದ್ರನಲ್ಲಡಗುವಹಾಂಗೆ ಸೂರ್ಯನಲ್ಲಿ ಹುಟ್ಟಿದ ಸಹಸ್ರ ಕಿರಣಗಳೆಲ್ಲವೂ ಆ ಸೂರ್ಯನಲ್ಲಡಗುವ ಹಾಂಗೆ ಆತ್ಮನಲ್ಲಿ ಹುಟ್ಟಿದ ಹಮ್ಮು ಬಿಮ್ಮಾದಿಗಳೆಲ್ಲವೂ ಆ ಆತ್ಮನಲ್ಲಿ ಅಡಗುವಹಾಂಗೆ ಮಕಾರ ಪ್ರಣಮದಲ್ಲಿ ಹುಟ್ಟಿದ ಸಕಲ ತತ್ವಂಗಳು ಆ ಮಕಾರ ಪ್ರಣಮದಲ್ಲಡಗುತ್ತಿಹವು. ಅಕಾರೇಚ-ಅಕಾರವೆಂಬುವದೊಂದು ಪ್ರಣಮವು, ಉಕಾರೇಚ ಉಕಾರವೆಂಬುವದೊಂದು ಪ್ರಣಮವು, ಮಕಾರೇಚ-ಮಕಾರವೆಂಬುವದೊಂದು ಪ್ರಣಮವು, ಇದಂತೃತೀಯಕಂ-ಈ ತ್ರಿವಿಧ ಪ್ರಣಮಂಗಳು, ಏಕಂ-ಒಂದೆಯಾಗಿ, ಜ್ಯೋತಿರೂಪಕಂ-ಸ್ವಯಂ ಜ್ಯೋತಿ ಸ್ವರೂಪವಾದ ಓಂ ಓಂ ಯೆಂಬ ಊರ್ಧ್ವ ಸ್ವರವನುಳ್ಳ ಷಟ್ಕೃತಿಗಳು ಸಂಪೂರ್ಣವಾದ ಸಾಕಲ್ಯ ಪ್ರಣಮವು, ಇಂತಿ-ಈ ಪ್ರಕಾರದಿಂ

ಪೇ, ಸಮುತ್ಪನ್ನಂ-ಸಂ-ಲೇಸಾಗಿ, ಉತ್ಪನ್ನಂ-ಸಾಜನ್ಯವಾಯಿತು, ಓಂಕಾರಾತ್‌ಸಾಕಲ್ಯ ಪ್ರಣಮ ದತ್ತಣಿಂಪೇ, ಋಗ್ಯಜುಸ್ಸಾಮಾಥರ್ವ ಣವೆಂಬ ನಾಲ್ಕು ವೇದಂಗಳು ಎಂಬುದು ಸರಿ. ಮತ್ತಂತುಮಲ್ಲದೆ ಆ ಯುರ್ವೇದ, ಅಥರ್ವಣವೇದ, ಧನುರ್ವೇದ, ಗಾಂಧರ್ವವೇದವೆಂಬ ನಾಲ್ಕು ಉಪವೇದಂಗಳು. ಮತ್ತಂತುಮಲ್ಲದೆ ನೂರೊಂದು ವೇದ, ಹದಿನಾರು ಸಾವಿರ ಶಾಸ್ತ್ರ, ಮೊಂತಾದ ಸಕಲ ನಿಗಮಂಗಳು, ಪ್ರಭಾವಾತ್-ಉತ್ಪ ತ್ತಿಯಾದವು, ಓಂಕಾರಾತ್-ಸಾಕಲ್ಯ ಪ್ರಣಮದತ್ತಣಿಂದೆ, ಸ್ವರಂ-ಸರಿ ಗಮಪಧನಿಯೆಂದು ಸಪ್ತಸ್ವರಂಗಳು, ನಿಷಾದ ವೃಷಭ ಗಾಂಧಾರ ಷಡ್ಜ ಮ ಪಂಚಮ ಮಧ್ಯಮ ಧೈವತವೆಂಬ ಸಪ್ತಸ್ವರಂಗಳು ಎಂಬುದುಸರಿ. ಮತ್ತಂತುಮಲ್ಲದೆ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯವೆಂಬ ನಾ ಲ್ಕು ವೇದಂಗಳನೋದುವ ಸ್ವರಂಗಳು ಮೊಂತಾದ ಎಂಭತ್ತುನಾಲ್ಕು ಲಕ್ಷ ಪ್ರಕಾರವಾದ ಸ್ವರ ಭೇದಂಗಳು ಉತ್ಪತ್ತಿಯಾದವು, ಓಂಕಾರಾ ತ್-ಸಾಕಲ್ಯ ಪ್ರಣಮದತ್ತಣಿಂದೆ, ಸಚರಾಚರಂ-ಸ್ಥಿರ ಚರಾತ್ಮಕವಾ ದ, ತ್ರೈಲೋಕ್ಯಂ-ಸ್ವರ್ಗ ಮರ್ತ್ಯ ಪಾತಾಳವೆಂಬ ಮೂರು ಭುವನಂ ಗಳು, ಸರ್ವಂ-ಇನ್ನೂರು ಹದಿನಾರು ಭುವನಂಗಳು, ವಾಯು ಭುವನ ಮೊದಲಾದ ಸಪ್ತಭುವನಂಗಳು ಇಷ್ಟೆಲ್ಲಾ ಉತ್ಪತ್ತಿಯಾದವು. ಮ ತ್ತಂ ಅಕಾರ ಪ್ರಣಮದಿಂದ ಸ್ವರಾಕ್ಷರ ಹದಿನಾರು, ಉಕಾರ ಪ್ರಣಮ ದಿಂದಾದ ವಿಪಲಾಕ್ಷರ ಇಪ್ಪತ್ತು ನಾಲ್ಕು, ಮಕಾರ ಪ್ರಣಮದಲ್ಲಿ ಹುಟ್ಟಿ ದ ವ್ಯಾಪಕಾಕ್ಷರ ಹನ್ನೊಂದು, ಇಂತೀ ಐವತ್ತೆರಡು ಅಕ್ಷರಗಳಿಂದಾ ದ ಸಕಲ ವೇದ, ಶಾಸ್ತ್ರ, ಪುರಾಣ, ತರ್ಕ, ತಂತ್ರ, ಯಂತ್ರ, ಮಂತ್ರ ಇತಿಹಾಸಾದಿ ನಾನಾ ಶಾಸ್ತ್ರಾನಂತ ತತ್ವಂಗಳು, ಅನಂತ ಬ್ರಹ್ಮಾಂಡ ಗಳನಂತ ಮೂರ್ತಿಗಳು, ಷಡಧ್ವ ಷಡ್ಗುಣ ವಸ್ತುತತ್ವ ಪಂಚಕವು ಸೃಷ್ಟಿವಾಗುತ್ತಿರ್ದವಾದಕಾರಣ, ಈ ಮೂರು ಕಾರಣ ಸ್ವರೂಪವಾದ ಪ್ರಣಮಂಗಳು ಉತ್ಪತ್ತಿಯಾದವು. (ಸರ್ವವ್ಯಾಪಕಂಓಂಕಾರಂ) ಓಂ ಕಾರಂ-ಸಾಕಲ್ಯ ಪ್ರಣಮವೆಂಬುದು ತಾನು, ಸರ್ವ-ಸಮಸ್ತರಲ್ಲಿಯೂ, ವ್ಯಾಪಕಂ-ಮೇಲು ಹೊದಿಕೆಯಾಗಿ ಹೊದಿಸಿಕೊಂಡಿರುತಿಹುದು, ಅದು ಹ್ಯಾಗೆಂದೊಡೆ—ವ್ಯೋಮವ್ಯಾಪ್ತಿ ಯೆಂಬ ಎಂಭತ್ತೆಂಟುಕೋಟಿ ಪ ದಂಗಳಲ್ಲಿಯೂ ಶಿವಾದ್ಯವನೀಪರ್ಯಂತವಾದ ಮುವ್ವತ್ತಾರು ತತ್ವಂಗಳ ಲ್ಲಿಯೂ, ಸರ್ವ-ಸಮಸ್ತರಲ್ಲಿಯೂ, ವ್ಯಾಪಕಂ-ಮೇಲು ಹೊದಿಕೆಯಾಗಿ

ಶೋಧಿಸಿಕೊಂಡಿಹುದು, ಮಂತ್ರೇತರರ್ನಶೋಭಯೇತ್-ಉಳಿದ ಸಪ್ತ
ಕೋಟಿ ಮಹಾ ಮಂತ್ರವು ಉಪಮಂತ್ರ ಕೋಟಾನುಕೋಟಿಗಳೆಲ್ಲವೂ
ಈ ಸಾಕಲ್ಯ ಪ್ರಣವಕ್ಕೆ ಶೋಭನೆಂಬರಲರಿಯುವು ಎಂಬಲ್ಲಿ ಸಮಾನಂ
ಕಾಣಲರಿಯುವು ಎಂದು ಹೇಳುವದೇ ಕಾಣಬಂದರ್ಥವು, ಪ್ರಣವಂ-
ಸಾಕಲ್ಯ ಪ್ರಣವವು ಪರಬ್ರಹ್ಮಐದಿ ಪಂಚ ಬ್ರಹ್ಮವ ನೊಳಕೊಂಡು
ತೋರುವಂತಾ ಮಹಾಲಿಂಗ ಸ್ವರೂಪವೇ ಐದುವುದು. ಪ್ರಸಿದ್ಧವಲಾ.
ಸಾಕಲ್ಯ ಪ್ರಣವವು, ಪರಮಂ-ಉತ್ಕೃಷ್ಟವಾದ, ಪದಂ-ಘನಲಿಂಗ ಪ
ದವಿಯೇ ತಾನಾದಂತಾದ್ದು. ಮತ್ತಂತುಮಲ್ಲದೆ ಸರ್ವತ್ರ ಸಂಪೂರ್ಣ
ವಾದ ಮಹಾಲಿಂಗ ಪದವಿಯೇ ತಾನಾದಂತಾದ್ದು, ಓಂಕಾರಂ-ಸಾಕಲ್ಯ
ಪ್ರಣವವು, ನಾದಸ್ವರೂಪಂಚ-ಚಿನ್ನಾದಸ್ವರೂಪವಾಗಿಪ್ಪದು. ಅದು
ಹ್ಯಾಗೆಂದೊಡೆ—ಶರಧಿ, ನಿರ್ಝರ, ಮೇಘ, ಮುರಜ, ಕಹಳೆ, ಭೇರಿ,
ಶಂಖ, ಘಂಟೆ, ವಾಸ, ಕಿಂಕಿಣಿ, ವೀಣೆ, ಮರಭ್ರಮರ ಇವುಗಳ
ನಾದಂಗಳೋಪಾದಿಯಲ್ಲಿ ಚಿನ್ನಾದ ಸ್ವರೂಪವಾಗಿರುತಿಹುದು. ಓಂ
ಕಾರಂ-ಸಾಕಲ್ಯ ಪ್ರಣವವು, ಮಂತ್ರರೂಪಕಂ-ಷಡಕ್ಷರೀಮಂತ್ರ ಸ್ವ
ರೂಪವಾಗಿರ್ಪುದು ಎಂಬುದರ್ಥ. ಮತ್ತಂತುಮಲ್ಲದೆ ಸಪ್ತ ಕೋಟಿಮ
ಹಾ ಮಂತ್ರಗಳುಪಮಂತ್ರ ಕೋಟಾನುಕೋಟಿಗಳ ಸ್ವರೂಪವಾದಂಥಾ
ದ್ದು. ಸಾಕಲ್ಯ ಪ್ರಣವವು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಕವಾದ
ಚೈತನ್ಯ ಸ್ವರೂಪಿನಿಂದ ವೇದಿಸಿಕೊಂಡಿರುತಿಹುದು. ಅದು ಹ್ಯಾಗೆಂ
ದೊಡೆ—ಅಯಶ್ಶಕಟ ಮುಸಲಾದಿಗಳ ಸಂಘಟನೆಗಳಿಂದ ಹುಟ್ಟುವಂ
ತಾ ಶಬ್ದವು ನಿರ್ಝರ ಪ್ರದೇಶಂಗಳಲ್ಲಿ ಹುಟ್ಟುವಂತಾ ಶಬ್ದವು ಪಶು ಪ
ಕ್ಷಿ ಮೃಗಾದಿಗಳ ಜಿಹ್ವೆಯಲ್ಲಿ ಹುಟ್ಟುವಂತಾ ಶಬ್ದವು ಎಂಭತ್ತು ನಾ
ಲ್ಕುಲಕ್ಷ ಪ್ರಕಾರವಾದ ಸ್ವರ ಭೇದಂಗಳಲ್ಲಿ ಹುಟ್ಟುವಂತಾ ಶಬ್ದವು
ಓಂಕಾರ ಪ್ರಣವದ ಚಿದ್ಘೋಷವೇಯಾದಕಾರಣ ಸಾಕಲ್ಯ ಪ್ರಣವ
ವು ಎಲ್ಲಾ ಟಾವಿನಲ್ಲಿಯೂ ನಾದ ಚೈತನ್ಯ ಸ್ವರೂಪಿನಿಂದ ವೇದಿಸಿಕೊಂ
ಡಿರುತಿಹುದು. ಸಾಕಲ್ಯ ಪ್ರಣವವು ಗೋಪ್ಯಾನನಂ, ಗೋಪ್ಯಂ,
ಗೂಢಂ, ಗುಹ್ಯಂ, ರಹಸ್ಯಂ ಎಂದು ಹೇಳುತಿಹುದಾದಕಾರಣ ಪರಶಿವ
ನತ್ಯಂತ ರಹಸ್ಯವಾದ ನಿಜಚಿನ್ಮಯವಪ್ಪ ಹೃದಯಮುಖವಾಗಿರುತಿ
ಹುದು. ಅದು ಹ್ಯಾಗೆಂದೊಡೆ—ನಕಾರಾದಿ ಯಕಾರಾಂತ್ಯವಾದ ಪಂ
ಚ ಪ್ರಣವಂಗಳೇ ಸದಾಶಿವನ ಸದ್ಯೋಜಾತಾದೀಶಾನಾಂತ್ಯವಾದ

ಪಂಚಮುಖ ಸ್ವರೂಪದಲ್ಲಿ ಹುಟ್ಟಿದವು. ಈ ಸಾಕಲ್ಯಪ್ರಣವವೇ ಪ ರಶಿವನತ್ಯಂತ ರಹಸ್ಯವಾದ ನಿಜಚಿನ್ಹೆಯನಪ್ಪ ಹೃದಯಮುಖವಾ ಗಿರ್ಪುದು. ಪ್ರಣವೋತ್ಪತ್ತಿ ಹೀಗೆಂದು ಹೇಳುವಂತಾದದ್ದು ತಾನೇ ಪ್ರಣವದುತ್ಪತ್ತಿ, ಪ್ರಣವದ ಸೃಷ್ಟಿ, ಪ್ರಣವದ ನಿರ್ದೇಶ, ಪ್ರಣವ ದ ಲಕ್ಷಣವನ್ನೇ ಹೇಳುವುದಾದಕಾರಣ ಇದು ಪ್ರಣವೋತ್ಪತ್ತಿಯೆಂ ಬ ಶಬ್ದಾರ್ಥವು. ಅಂತುವಲ್ಲದೆ ನಿರಂಜನಪ್ರಣವು, ನಿರಂಜನೋಂಕಾರ ಪ್ರಣವು, ಅವಾಚ್ಯಪ್ರಣವು, ಕಲಾಪ್ರಣವು, ಬಕಾರಪ್ರಣವು, ಸಕಾರ ಪ್ರಣವು, ವಕಾರಪ್ರಣವು, ಅಕಾರಪ್ರಣವು, ಉಕಾರಪ್ರಣವು, ಮಕಾರ ಪ್ರಣವು, ಒಕಾರಪ್ರಣವು, ಓಂಕಾರಪ್ರಣವು ಮುಂತಾದ ಸಕಲ ಪ್ರಣ ವಂಗಳು ಉತ್ಪತ್ತಿಯಾದಂತ ವಿಚಾರವು ಒಂದನೆಯ ಸ್ಥಲದ ಪ್ರಣ ವೋತ್ಪತ್ತಿ ಸಮಾಪ್ತವಾದುದು.

## ಪಂಚಭೂತದುತ್ಪತ್ತಿ.

ಇನ್ನು ತದನಂತರದಲ್ಲಿ ಪಂಚಭೂತದುತ್ಪತ್ತಿಯನ್ನು ತಚ್ಛಿಷ್ಯಂ ಗೆ ಸದ್ಗುರು ಬೋಧಿಸುತಿಹರು. ಅದು ಹ್ಯಾಗೆಂದೊಡೆ—ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬೈದು ತತ್ವಂಗಳು ಹುಟ್ಟುವದ ಕ್ಕೆ ಓಂಕಾರಪ್ರಣವವೇ ಮೂಲಕಾರಣವಾಗಿರ್ಪುದು. ಅದೆಂತೆಂದೊಡೆ: ಪ್ರಣವಕ್ಕೆ ಪಂಚಾಕೃತಿಗಳು, ಆ ಪಂಚಾಕೃತಿಗಳಿಂದ ಪಂಚಾಕ್ಷರಂಗ ಳು, ಆ ಪಂಚಾಕ್ಷರಂಗಳೇ ಪಂಚಮುಖ ಸ್ವರೂಪವನ್ನೈದಿ ಪಂಚಕಲಾ ಶಕ್ತಿಯುಕ್ತವಾಗಿ ಪಂಚಮುಖ, ದಶಭುಜ, ದಶಹಸ್ತ, ದಶಾಯುಧ, ದಶಪಂಚನೇತ್ರ, ದ್ವಿಪಾದ, ತನುವೇಕ, ಶುದ್ಧಸ್ಫಟಿಕಸಂಕಾಶ, ಗಂಗೆ ಗೌರೀವಲ್ಲಭ ವೃಷಭಾರೂಢ ಮೂರ್ತಿಯಾದ ಸದಾಶಿವನಾದನು. ಆ ಸದಾಶಿವನ ಸದ್ಯೋಜಾತಾದೀಶಾನಾಂತ್ಯವಾದ ಐದು ವದನಂಗಳಿಂದ ಈ ಪೃಥ್ವ್ಯಾದಿ ಐದುಭೂತಂಗಳು ಪುಟ್ಟಿದವಾದಕಾರಣ ಈ ಪಂಚಭೂ ತದ ಈ ಐದುತತ್ವಂಗಳ ಜನನಕ್ಕೆ ಮೂಲಕಾರಣವಾಗಿರುವಂತಾದ್ದೇ ಓಂಕಾರಪ್ರಣವವು. ಆ ವಿಚಾರವನ್ನು ಉದ್ದೇಶಲಕ್ಷಣ ಪರೀಕ್ಷೆಯೆಂಬ ಮೂರುಭೇದವಾಗಿ ಹೇಳುವಂತಾದ್ದೇ ಶ್ಲೋಕವು. ಅದೆಂತೆಂದೊಡೆ— ಸದ್ಯೋಜಾತಾತ್=ಆ ಸದಾಶಿವನ ಸದ್ಯೋಜಾತ ಮುಖದೆತ್ತಣಿಂದ, ಭೂಮಿಃ=ಪೃಥ್ವೀತತ್ವವು, ಭವೇತ್=ಪುಟ್ಟಿತು, ತಥಾ=ಹಾಗೆ, ವಾಮದೇ

ವಾತ್=ಆ ಸದಾಶಿವನ ವಾಮದೇವ ಮುಖದತ್ತಣಿಂದೆ, ಜಲಂ=ಅಪ್ಪು ತತ್ವವು, ಭವೇತ್=ಉತ್ಪತ್ತಿಯಾಯಿತು, ಅಘೋರಾತ್=ಆ ಸದಾಶಿವನ ಅಘೋರಮುಖದತ್ತಣಿಂದೆ, ತಥಾ=ಹಾಂಗೆ, ವಹ್ನಿಃ=ಅಗ್ನಿತತ್ವವು, ಉತ್ಪತ್ತಿಃ=ಜನನವಾಯಿತು, ತತ್ಪುರುಷಾತ್=ಆ ಸದಾಶಿವನ ತತ್ಪುರುಷಮುಖದತ್ತಣಿಂದೆ, ವಾಯುಃ=ಸಮೀರತತ್ವವು ಪುಟ್ಟಿತೆಂದು, ಉಚ್ಯತೆ=ಹೇಳಲ್ಪಟ್ಟಿತು, ಈಶಾನ್ಯಾತ್=ಆ ಸದಾಶಿವನ ಈಶಾನ್ಯಮುಖದತ್ತಣಿಂದೆ, ಗಗನಂ=ಆಕಾಶತತ್ವವು, ಆಕಾರಂ=ವ್ಯಕ್ತಿಕರವಾಯಿತು, ಪಂಚಬ್ರಹ್ಮ ಮಯಂಜಗತ್=ಚತುರ್ದಶಭುವನ ಸಚರಾಚರ ಪ್ರಾಣಿಗಳ ಸಮೂಹವನುಳ್ಳ ವಿಶ್ವವು, ಪಂಚಬ್ರಹ್ಮಮಯಂ=ಸದ್ಯೋಜಾತಬ್ರಹ್ಮ, ವಾಮದೇವಬ್ರಹ್ಮ, ಅಘೋರಬ್ರಹ್ಮ, ತತ್ಪುರುಷಬ್ರಹ್ಮ, ಈಶಾನ್ಯಬ್ರಹ್ಮವೆಂಬೈದು ಲಿಂಗಗಳ ಸ್ವರೂಪವನ್ನು ವೆಂದಿರ್ಪವು ಎಂದಿವಕ್ಕೆ ವಿವರವು ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಣವ ಪಾಲಿಸುತಿಹರು. ಸದ್ಯೋಜಾತಮುಖದಲ್ಲಿ ಆ ಸದಾಶಿವಮೂರ್ತಿಗೆ ಹಿಂಭಾಗದಲ್ಲಿರುವಂತಾದ್ದೇ ಸದ್ಯೋಜಾತಮುಖವು, ಅಂತಪ್ಪ ಸದ್ಯೋಜಾತ ಮುಖವೆಂಬ ವದನದೊಳಗೆ, ಪೃಥ್ವೀ=ಸರ್ವಾಧಾರಮಯವಾದ ಧರಣೀತತ್ವವು ಪುಟ್ಟಿತು. ವಾಮದೇವ ಮುಖದಲ್ಲಿ ಆ ಸದಾಶಿವನಮೂರ್ತಿಗೆ ಎಡಭಾಗದಲ್ಲಿಪ್ಪ ವಾಮದೇವಮುಖ, ಅಂತಪ್ಪ ವಾಮದೇವಮುಖವೆಂಬ ವದನದೊಳಗೆ ಅಪ್ಪು ಸರ್ವಪಾನ್ಯ ಪ್ರಕ್ಷಾಳನರೂಪಮಾದುದಕತತ್ವವು ಪುಟ್ಟಿತು, ಅಘೋರಮುಖದಲ್ಲಿ ಆ ಸದಾಶಿವಮೂರ್ತಿಗೆ ಬಲಭಾಗದಲ್ಲಿಪ್ಪುದೇ ಅಘೋರಮುಖ, ಅಂತಪ್ಪ ಅಘೋರಮುಖವೆಂಬ ವದನದೊಳಗೆ, ಅಗ್ನಿ ಸರ್ವದಾಹಕ ಪಾಚಕರೂಪಮಾದ ಧನಂಜಯತತ್ವವು ಪುಟ್ಟಿತು, ತತ್ಪುರುಷಮುಖದಲ್ಲಿ ಆ ಸದಾಶಿವಮೂರ್ತಿಗೆ ಮುಂಭಾಗದಲ್ಲಿ ತೋರುವಂತಾದ್ದೇ ತತ್ಪುರುಷಮುಖ, ಅಂತಪ್ಪ ತತ್ಪುರುಷ ಮುಖವೆಂಬ ವದನದೊಳಗೆ ವಾಯು ಸರ್ವಚಾಂಚಲ್ಯಮಯವಾದ ಸಮೀರತತ್ವವು ಪುಟ್ಟಿತು, ಈಶಾನ್ಯಮುಖದಲ್ಲಿ ಆ ಸದಾಶಿವಮೂರ್ತಿಗೆ ಮೇಲುಭಾಗದಲ್ಲಿಪ್ಪುದೇ ಈಶಾನ್ಯಮುಖ, ಅಂತಪ್ಪ ಈಶಾನ್ಯಮುಖವೆಂಬ ವದನದೊಳಗೆ, ಆಕಾಶ=ಸರ್ವಾವಕಾಶಪ್ರದಮಾದ ವ್ಯೋಮತತ್ವವು ಪುಟ್ಟಿತು ಎಂಬುದೀಗ ಈ ತತ್ವಂಗಳುಪುಟ್ಟಿದವು. ಈ ಪ್ರಕಾರದಿಂದ ಹೇಳಲ್ಪಟ್ಟ ಪಂಚಬ್ರಹ್ಮದಿಂದೇ ಸದ್ಯೋಜಾತಬ್ರಹ್ಮ, ವಾಮ

ಜೇವಬ್ರಹ್ಮ, ಅಘೋರಬ್ರಹ್ಮ, ತತ್ಪುರುಷಬ್ರಹ್ಮ, ಈಶಾನ್ಯಬ್ರಹ್ಮವೆಂಬೈದು ವದನಂಗಳಿಂದ ಈ ಹಿಂದೆಹೇಳಿದ ಐದುಪ್ರಕಾರವಾದ, ಮಹಾ=ದೊಡ್ಡಿತ್ತಾದ ಭೂತಂಗಳೂ ತತ್ವಂಗಳೂ, ಪುಟ್ಟಿದವು=ಜನನವಾದವು, ಆ ಪ್ರಸಿದ್ಧವಾದ ಪಂಚಮಹತ್ತತ್ವ ಗುಣಶಬ್ದಾದಿ ಗುಣಭೇದಂಗಳು, ಧರ್ಮ=ಕಠಿಣಾದಿ ಸ್ವಭಾವಸ್ಥಿತಿಗಳು, ಕರ್ಮ=ಧಾರಣಾದಿ ಉದ್ಯೋಗಂಗಳು, ವರ್ಣ=ಪೀತಾದಿ ಕಾಯಕಾಂತಿಗಳು, ಅಧಿದೇವತೆಗಳು, ಬ್ರಹ್ಮಾದಿ ಅಧಿಷ್ಠಾನ ಕರ್ತೃಗಳೆಂದುಂಟಾಗಿರುತಿಹರು, ಅವು ಆವಾವೆಂದೊಡೆ—ಅವು ತಾವೆಂತಾವೆಲೆಸ್ವಾಮಿಯೆಂದು ಬೆಸಗೊಂಡಡೆ, ಆ ವಿಚಾರವೆನ್ನು ಮುಂದೆ ಗ್ರಂಥೋಕ್ತವಾಗಿ ನಿರೂಪಿಸುತಿಹರು :—ಶಬ್ದವಿಷಯವೇ ಮೊದಲಾದ ಪಂಚವಿಷಯಂಗಳು ಶಬ್ದ, ಸ್ಪರ್ಶ, ರೂಪು, ರಸ, ಗಂಧವೆಂಬೈದು ತನ್ಮಾತ್ರೆಯಂಗಳು, ಭೂಮೌ=ಪೃಥ್ವಿಯಲ್ಲಿಯೇ, ನಿವರ್ತತೆ=ಮಿಗೆ ವರ್ತಿಸುವಂತಾದ್ದು, ಸ್ಯಾತ್=ಅಹುದು, ಹಾಗೆ ಚತುರ್ಗುಣ, ಶಬ್ದ, ಸ್ಪರ್ಶ, ರೂಪು, ರಸವೆಂಬ ನಾಲ್ಕು ಗುಣಂಗಳು ಅಪ್ಪುವಿನ ಗುಣಂಗಳಾಗಿಪ್ಪವು. ಹಾಗೆ ವಹ್ನಿಗೆ ಅಗ್ನಿತತ್ವಕ್ಕೆ ತ್ರಿಗುಣ ಶಬ್ದಸ್ಪರ್ಶರೂಪವೆಂಬೀ ಮೂರುಗುಣಂಗಳುಂಟಾಗಿರುತ್ತಿಹವೆಂದು ಹೇಳಲ್ಪಟ್ಟಿತು, ಮಾರುತಂಗೆ ದ್ವಿಗುಣಃ=ಶಬ್ದ ಸ್ಪರ್ಶವೆಂಬೆರಡು ಗುಣಂಗಳು ಹೇಳಲ್ಪಟ್ಟಿತು, ಆಕಾಶಮಪಿ=ಅಂಬರತತ್ವಕ್ಕಾಯಿತಾದೊಡೆ, ಏಕಮೇವ=ಶಬ್ದ ವಿಷಯಮೆಂಬೊಂದೇ ಗುಣವನುಳ್ಳದೆಂಬಿವು ಗುಣಂಗಳು, ಹೀಗೆಂದು ಹೇಳಲ್ಪಟ್ಟಂತಾ ಇವು ತಾವೇ ಗುಣಂಗಳು, ಪಂಚಭೂತಂಗಳ ಗುಣಭೇದಂಗಳು, ಯತ್=ಯಾವಸ್ಥಾನದಲ್ಲಿ, ಕಠಿಣಃ=ಬಿರುಸಾಗಿರುವುದು, ತತ್=ಅದುತಾನೇ, ಪೃಥ್ವೀ=ಧರಣೀತತ್ವದ ಧರ್ಮವೆಂದು ಹೇಳಲ್ಪಟ್ಟಿತು, ಹಾಗೆ ಯತ್=ಯಾವಸ್ಥಾನದಲ್ಲಿ, ದ್ರವಂ=ಬೆವರು ಬಿಂದುಮಯವಾಗಿಹುದು, ತತ್=ಅದುತಾನೇ ಅಪ್ಪುತತ್ವದ ಧರ್ಮವೆಂದು ಹೇಳಲ್ಪಟ್ಟಿತು, ತಥಾ=ಹಾಂಗೆ, ಯತ್=ಯಾವಸ್ಥಾನದಲ್ಲಿ, ಉಷ್ಣಂಚ=ಶಕೆಮಯವಾಗಿಹುದು, ತತ್=ಅದುತಾನೇ, ತೇಜಃ=ಅಗ್ನಿತತ್ವದ ಧರ್ಮವೆಂದು ಹೇಳಲ್ಪಟ್ಟಿತು, ಹಾಗೆ ಯತ್=ಯಾವ ಸ್ಥಾನದಲ್ಲಿ, ಸಂಚರತಿ=ಚಾಂಚಲ್ಯಮಯವಾಗಿಹುದು, ತತ್=ಅದುತಾನೇ ಮಾರುತತತ್ವದ ಧರ್ಮವೆಂದು ಹೇಳಲ್ಪಟ್ಟಿತು, ಹಾಗೆ ಯತ್=ಯಾವ ಸ್ಥಾನದಲ್ಲಿ, ಆಕಾಶಂ=ಬಯಿಲಾಗಿಹುದು, ತತ್=ಅದುತಾನೇ, ಮಹತ್=ದೊಡ್ಡ

ದಾಹೆ ಅಂಬರತತ್ವದ ಧರ್ಮವೆಂದು ಹೇಳಲ್ಪಟ್ಟಿತು, ಪಂಚಭೂತಂಗಳ ಧರ್ಮಸ್ವಭಾವ ಸ್ಥಿತಿಗಳನ್ನು ಇಂತೀಪ್ರಕಾರದಿಂದೇ ಹೇಳಲ್ಪಟ್ಟಿತು, ಹೀಗೆಂದು ಹೇಳುವಂತಾ ಇವು ತಾವೇ ಧರ್ಮಂಗಳು. ಪಂಚಮಹಾ ಭೂತಂಗಳ ಸ್ವಭಾವಸ್ಥಿತಿಗಳ ನಿಲುಕಡೆಗಳು ಚರಪ್ರಾಣಿಗಳ ಭಾರವೆಲ್ಲ ವ ತಳೆದುಕೊಂಡಿರುವಂತಾದ್ದೇ ಪೃಥ್ವೀತತ್ವ ಮಾಡುವಂತಾ ಉದ್ಯೋಗವು ಪಿಂಡೀಕರಣ, ಹುಡಿಹಿಟ್ಟು, ಹುಡಿಮಣ್ಣು, ಧೂಳು ಮಾಂಸಾದಿಗಳಿಗೆ ತನ್ನ ದ್ರವವನ್ನುಕೊಟ್ಟು ಮುದ್ದೆಯನ್ನು ಕಟ್ಟುವ ಕರಣಮಾಡುವುದೇ ಅಪ್ಪುತತ್ವ ಮಾಡುವ ಉದ್ಯೋಗವು. ಪಚನಂ=ಇದಿರಿಟ್ಟ ತರಗೆಲೆ ತೃಣ ಕಾಷ್ಟಂಗಳನ್ನು ಸುಟ್ಟು ಬೂದಿಯಂ ಮಾಡಿಬಿಡುವಂತಾದ್ದು. ಮತ್ತಂತುಮಲ್ಲದೆ ಹದಿನೆಂಟು ಧಾನ್ಯಗಳನ್ನು ಪಾಕಪ್ರಯತ್ನವ ಮಾಡಿ ಕೊಡುವುದೇ ಅಗ್ನಿತತ್ವ ಮಾಡುವ ಉದ್ಯೋಗವು. ಸ್ವಸ್ಥಾನದಲ್ಲಿರ್ಪ ವಸ್ತುಗಳನ್ನು ಹೊತ್ತುಕೊಂಡುಹೋಗಿ ಪರಯೆಲ್ಲೆ, ಪರಮಂಡಲ, ಪರಸ್ಥಾನಕೊಯ್ದು ಹಾಕಿಬಿಡುವುದೇ ವಾಯು ಮಾಡುವ ಉದ್ಯೋಗವು. ಸಮಸ್ತ ಚರಾಚರಪ್ರಾಣಿಗಳು ಮುಂದಮುಂದೆ ಚರಿಸುವುದಕ್ಕೆ ತೆರಪು ಕೊಟ್ಟುಕೊಂಡಿರುವುದೇ ಆಕಾಶತತ್ವ ಮಾಡುವ ಉದ್ಯೋಗವೆಂದು ಹೇಳಲ್ಪಟ್ಟಿತು. ಪಂಚಭೂತಂಗಳ ಕರ್ಮೋದ್ಯೋಗಂಗಳು ಈಪ್ರಕಾರದಿಂದೇ ಹೇಳಲ್ಪಟ್ಟಿತು. ಹೀಗೆಂದು ಹೇಳಲ್ಪಟ್ಟಂತಾ ಇವು ತಾವೇ ಕರ್ಮಂಗಳು. ಪಂಚಭೂತಂಗಳ ಕ್ರಿಯಾಭೇದಂಗಳ ನಿಲುಕಡೆಗಳು, ಪೀತಂ=ಪೃಥ್ವೀತತ್ವವೆಂಬುದು ತಾನು ಹಳದೀವರ್ಣದ ಕಾಂತಿಯಿಂದಿಹುದು, ಸ್ವೇತಂ=ಅಪ್ಪುತತ್ವವೆಂಬುದು ತಾನು ಧವಳವರ್ಣದ ಕಾಂತಿಯಿಂದಿಹುದು, ರಕ್ತಂ=ಅಗ್ನಿತತ್ವವೆಂಬುದು ತಾನು ಶೋಣವರ್ಣದ ಕಾಂತಿಯಿಂದಿಹುದು, ಹರಿತಂ=ವಾಯುತತ್ವವೆಂಬುದು ತಾನು ಪಚ್ಚೆವರ್ಣದ ಕಾಂತಿಯಿಂದಿಹುದು, ಕೃಷ್ಣ=ಆಕಾಶತತ್ವವೆಂಬುದು ತಾನು ಕಾಡಿಗೆವರ್ಣದ ಕಾಂತಿಯಿಂದಿಹುದು, ಏವಂ=ಈ ಪ್ರಕಾರದಿಂದ, ಪೃಥ್ವ್ಯಾದಿ ಧರಣೀತತ್ವವೇ ಮೊದಲಾದ ಪಂಚಭೂತಾನಿ=ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಐದುತತ್ವಂಗಳ, ವರ್ಣ=ಕಾಯ ಕಾಂತಿಗಳ, ಭೇದ=ನಿಲುಕಡೆಗಳನ್ನು, ಪ್ರ=ವಿಶೇಷವಾಗಿ, ಕೀರ್ತಿತಾಃ=ಹೇಳಲ್ಪಟ್ಟಿತು, ಹೀಗೆಂದು ಹೇಳಲ್ಪಟ್ಟಂತಾ ಇವು ತಾವೇ ವರ್ಣಂಗಳು, ಪಂಚಭೂತಂಗಳ ಕಾಯ ಕಾಂತಿಗಳ ನಿಲುಕಡೆಗಳು, ಪೃಥ್ವೀ=ಧರಣೀತತ್ವಕ್ಕೆ, ಅಜನೇ

ಅಧಿಷ್ಠಾನ ಕರ್ತೃವಾಗಿಪ್ಪನು. ಅಪ್ಪುತತ್ವಕ್ಕೆ ನಾರಾಯಣನೇ ಅಧಿಷ್ಠಾನಕರ್ತೃವಾಗಿಪ್ಪನು. ಹದಿನೆಂಟು ಧಾನ್ಯಂಗಳೇ ಆಹುತಿಯಾಗುಳ್ಳ ಅಗ್ನಿತತ್ವಕ್ಕೆ ಶ್ರೀರುದ್ರಮೂರ್ತಿಯೇ ಅಧಿಷ್ಠಾನಾಯಕನಾಗಿಪ್ಪನು. ವಾಯುತತ್ವಕ್ಕೆ ಈಶ್ವರಮೂರ್ತಿಯೇ ಅಧಿದೇವತೆಯಾಗಿಪ್ಪನು. ಅಂಬರತತ್ವಕ್ಕೆ ಸದಾಶಿವ ಮೂರ್ತಿಯೇ ಅಧಿಷ್ಟನಾಯಕನಾಗಿಪ್ಪನು. ಲೋಕೋತ್ಪತ್ತಿಯಮಾಡುವಂತಾ ಅಜನು, ಲೋಕದಸ್ಥಿತಿ ಭೋಗವ ನಡಸುವಂತಾ ನಾರಾಯಣನು ಲೋಕದ ಸಹ್ಮಾರಕೃತ್ಯವ ನಡೆಸುವಂತಾ ರುದ್ರಮೂರ್ತಿಯು ಲೋಕಧ ತಿರೋಭಾವಕೃತ್ಯವ ನಡೆಸುವಂತಾ ಈಶ್ವರಮೂರ್ತಿಯು ಲೋಕದ ಅನುಗ್ರಹಕೃತ್ಯವ ನಡೆಸುವಂತಾ ಸದಾಶಿವಮೂರ್ತಿಯು, ಭೂವ್ಯಾದಿ ಧರಣೀತತ್ವವೇ ಮೊದಲಾದ ಪಂಚಭೂತಂಗಳಿಗೆ ಅಧಿಷ್ಠಾನ ಕರ್ತೃಗಳಾಗಿರ್ಪರೆಂದು ಈಪ್ರಕಾರದಿಂದ ಹೇಳಲ್ಪಟ್ಟಿತು. ಪೀತಾದಿ ಹಳದಿವರ್ಣವೇ ಮೊದಲಾದ, ವರ್ಣ=ಪಂಚವರ್ನಗಳ ಸ್ವರೂಪವನ್ನು, ಕುರುಹುಮಾತ್ರವಾಗಿ ನಿರೂಪಿಸಲ್ಪಟ್ಟಿತು. ಇದಕ್ಕೆ ಮುಂದೆ ವಿಸ್ತಾರವಾಗಿ ನಿರೂಪಿಸುತಿಹರು :—ಸರ್ವಾಧಾರಮಯವಾದ ಧರಣೀತತ್ವಕ್ಕೆ ಶಬ್ದ ಅಯ ಶಕಟ ಮುಸಲಾದಿಗಳ ಸಂಘಟನೆಯಿಂದ ಹುಟ್ಟುವಂತಾ ಗಡಗಡಯೆಂಬ ಶಬ್ದವು ಸ್ಪರ್ಶೆಯಲ್ಲಿ ಮುಟ್ಟದರಲ್ಲಿ ಬಿರುಸಾಗಿ ತಟ್ಟುವಂತಾ ಕಠಿನ ಸ್ಪರ್ಶನವು ಸಾಕಾರವಾದರೂಪು ಸ್ವಾದರಸವು, ಅದು ಹ್ಯಾಗೆಮ್ಯಾ, ಪೃಥ್ವೀ ಯೆಂಬುದು ಕೇವಲ ಮಣ್ಣು, ಅದಕ್ಕೆ ನೀವು ಸ್ವಾದರಸ ಉಂಟೆಂದು ಹೇಳುತ್ತಿದ್ದೀರಿ. ಅದು ಹ್ಯಾಗೆ ತಿಳಿಯಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಆ ಪೃಥ್ವಿಯಲ್ಲಿ ಸ್ವಾದರಸವಿಲ್ಲದಿದ್ದರೆ ಆ ಪೃಥ್ವಿಯಲ್ಲಿ ಬೆಳೆದ ಹದಿನೆಂಟು ಧಾನ್ಯಾದಿಗಳಿಗೆ ಸ್ವಾದರಸ ವೇದಿಸೀತೆ? ವೇದಿಸಲರಿಯದು. ಮತ್ತಂತುಮಲ್ಲದೆ ಲೋಕದಲ್ಲಿ ಕೆಲವು ಗರ್ಭಿಣಿ ಸ್ತ್ರೀಯರುಗಳು ಶುದ್ಧಮೃತ್ತಿಕೆಯೆಂದು ಸುರೆಯಮಣ್ಣು ತರಿಸಿಕ್ಕೊಂಡು ಮೆಲ್ಲುತ್ತಿಹರು ಎಂಬುದು ಸರಿ. ಮತ್ತಂತುಮಲ್ಲದೆ ಹಿಂದಕ್ಕೆ ಪಾತಾಳ ಲೋಕದಲ್ಲಿ ತಮಂದಾಸುರನೆಂಬ ದೈತ್ಯನ ಸ್ತ್ರೀಯಳು ಗರ್ಭಿಣಿಯಾದ ಕಾಲದಲ್ಲಿ ಭೂಲೋಕದ ಮಣ್ಣಂಬಯಸಿ, ತನ್ನ ಗಂಡನಿಗೆ ಹೇಳಲು, ಆ ತಮಂದಾಸುರನು ಭೂಲೋಕಕ್ಕೆ ಬಂದುನೋಡಿ ಚಿತ್ರವಿಚಿತ್ರವಾದೀ ಭೂಲೋಕದ ಮಣ್ಣಂ ಕಂಡು, ಇದರೊಳಗೆ ಯಾವಾವುದು ತೆಗದು

ಕ್ಕೊಂಡುಹೋಗಲಿ, ಯಾವದು ಬಿಟ್ಟುಹೋಗಲಿ ಎಂಬ ಶಂಕೆಯಿಂದ ಕೆಲವು ಭೂಮಿಯನ್ನು ಒಂದಾನೊಂದು ತಟ್ಟಿಸುರಳಿ ಮರಿಯಾದೆಯ ಲ್ಲಿ ಸುರುಳಿಗೊಂಡುಹೋಗಿ ಕೊಟ್ಟನು. ಆ ಪೃಥ್ವಿಯಲ್ಲಿಯೇ ಸ್ವಾದೆರಸವಿಲ್ಲದೆ ಇರ್ದಡೆ ಆಯುಕಳು ತರಿಸಿಕ್ಕೊಂಡು ತಿಂದಾಳೇ ? ತಿನ್ನಳು, ಅದುಕಾರಣವಾಗಿ ಪೃಥ್ವಿಗೆ ಸ್ವಾದೆರಸ ಉಂಟೆಂದು ತಿಳಿದುಕೊಂಬುದು. ತತ್ವಜ್ಞಾನಿಗಳು ಗಂಧವೆಂದು ಹೇಳುತ್ತಿದ್ದೀರಿ, ಸದ್ಗಂಧವು ಅದುಹ್ಯಾಗೆ ? ಪೃಥ್ವೀ ಎಂಬುದು ಕೆಲವು ಮಣ್ಣು, ಅದಕ್ಕೆ ಸದ್ಗಂಧವುಂಟೆಂದು ಹೇಳುತ್ತಿದ್ದೀರಿ, ಅದು ಹ್ಯಾಗೆ ತಿಳಿಯಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಆ ಪೃಥ್ವಿಯಲ್ಲಿಯೇ ಸುಗಂಧವಿಲ್ಲದಿದ್ದರೆ ಆ ಪೃಥ್ವಿಯಲ್ಲಿ ಬೆಳೆದ ಕೆಲವು ಪತ್ರ ಪ್ರಸೂನಾದಿಗಳಿಗೆ ಸದ್ಗಂಧವೇದಿಸೀತೆ? ವೇದಿಸಲರಿಯದು. ಮತ್ತಂತುಮಲ್ಲದೆ ಪೃಥ್ವಿಯಲ್ಲಿ ಕುಮಂಜನವೆಂದು ಒಂದುಪ್ರಕಾರವಾದ ಧೂಪಹುಟ್ಟುವದುಂಟು, ಮತ್ತು ಒಂದು ದೃಷ್ಟೋಪಮಾನವುಂಟು. ಅದು ಹ್ಯಾಗೆಂದೊಡೆ—ಬೇಸಿಗೆ ನಾಲ್ಕುತಿಂಗಳು ಚಂಡಸೂರ್ಯನ ತಾಪಾಗ್ನಿಯಿಂದ ದಹನವಾದ ಭೂಮಿಮೇಲೆ ಮುಂಗಾರುಕಾಲದ ಮೇಘವು ವೃಷ್ಟಿಸುರಿಯಲು ಆ ಭೂಮಿ ವಾಸನೆಯೆಂಬುದು ತಾನು ಕಿಗ್ಗಾಳಿಯಲ್ಲಿ ಹೋಗುವಂತ ಆತ್ಮರುಗಳ ಘ್ರಾಣಕ್ಕೆ ಒಂದಾನೊಂದು ಕುಮಂಜನದ ವಾಸನೆಯೋಪಾದಿಯಲ್ಲಿ ಸೊಗಸಾಗಿ ತೀಡುತಿಹುದು. ಆ ಪೃಥ್ವಿಯಲ್ಲಿ ಸುಗಂಧವಿಲ್ಲದಿದ್ದರೆ ಅದು ಹ್ಯಾಗೆ ಸೊಗಸಾಗಿ ತಟ್ಟೀತೇ ? ತಟ್ಟಲರಿಯದು. ಅದುಕಾರಣವಾಗಿ ಪೃಥ್ವಿಯಲ್ಲಿ ಸದ್ಗಂಧವುಂಟೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು ಎಂಬುದೀಗ ಈ ಐದು ಪೃಥ್ವೀತತ್ವಕ್ಕೆ ಅಸಾಧಾರಣ ಗುಣಗಳಾಗಿರುತಿಹವು. ಕಠಿಣತ್ವವೇ ಧರ್ಮಪಿಂಡ ಬ್ರಹ್ಮಾಂಡಗಳಲ್ಲಿ ಬಿರುಸಾಗಿ ತಟ್ಟುವಂತಾದ್ದೇ ಅದರ ಸ್ವಭಾವವು. ಅದು ಹ್ಯಾಗೆಂದೊಡೆ, ಪಿಂಡದಲ್ಲಿ ಉಂಗುರ, ಉಡುದಾರ, ಘಂಟೆ, ಚವುಕಳಿ, ಕಡಗ, ಕಂಠಮಾಲೆ, ಉತ್ರೀಸರ, ಬಿಲ್ಲೀಸರ, ಹಸ್ತಕಡಗ, ಹವಿಸ್ಮಾರತಾಯಿತ, ವಜ್ರದಪದಕ ಮೊದಲಾದ ದಿವ್ಯಾಭರಣಂಗಳಂ ಧರಿಸಿದಲ್ಲಿ ತಟ್ಟುವುದು. ಇತ್ತ ಬ್ರಹ್ಮಾಂಡದಲ್ಲಿ ಭಂಡಿಓರಿಯು, ಗೊರಸುಚಾಪೆ, ಉಜ್ಜಗಂಬಳಿ, ಮೇಲೆ ಪವಡಿಸಿದಲ್ಲಿ ಅಂಗಕ್ಕೆ ಬಿರುಸಾಗಿ ತಟ್ಟುವಂಥಾದ್ದೇ ಅದರ ಸ್ವಭಾವವು. ಧಾರಣಾದಿಕರ್ಮ ಸಮಸ್ತ ಚರಾಚರ ಪ್ರಾಣಿಗಳ ಭಾರಣೆಯನೆಲ್ಲ ಮಹಿ

ಸಿಕೊಂಡಿರುವಂತಾದ್ದೇ ಅದು ಮಾಡುವ ಉದ್ಯೋಗವು. ತದಂಗಪೀತ ವರ್ಣ, ತತ್=ಆ ಪೃಥ್ವಿಯು ಅಂಗದೇಹವಾಯಿತಾದೊಡೆ, ಪೀತವರ್ಣಂ= ಹಳದಿವರ್ಣದ ಕಾಂತಿಯಿಂದಿಹುದು. ಅದು ಹ್ಯಾಗ್ಯೆಯ್ಯಾ? ಪೃಥ್ವಿಯೆಂಬುದು ಕೆಲವು ಸ್ಥಾನದಲ್ಲಿ ಕರಿಯಮಣ್ಣಾಗಿ, ಕೆಲವುಸ್ಥಾನದಲ್ಲಿ ಕೆಂಪುಮಣ್ಣಾಗಿ, ಕೆಲವುಸ್ಥಾನದಲ್ಲಿ ಬಿಳಿಯಮಣ್ಣಾಗಿ ನಾನಾ ಬಣ್ಣದೊಡನೆ ಕೂಡಿರುತ್ತದೆ. ಅದಕ್ಕೆ ಹಳದಿವರ್ಣ ಒಂದನ್ನೇ ಪ್ರಮಾಣಿಸಿ ಹೇಳುತ್ತಿದ್ದೀರಿ. ಅದು ಹ್ಯಾಗೆ ತಿಳಿಯಬೇಕೆಲೆಸ್ವಾಮಿ ಯೆಂದು ಬೆಸಗೊಂಡೊಡೆ, ಅದು ಆಯಾಯ ಸ್ಥಾನಭೇದದಿಂದ ಆಯಾಯ ಬಣ್ಣವಾಗಿರುವುದಲ್ಲದೆ ಅದಕ್ಕೆ ಹಳದೀ ವರ್ಣವೊಂದೇ ಸಹಜ. ಅದು ಹ್ಯಾಗೆಂದೊಡೆ: (ಅಂಡಂಹಿರಣ್ಮಯಾಕಾರಂ) ಎಂದು ಹೇಳುತ್ತಿಹುದಾದಕಾರಣ ಮೊದಲು ಈ ಬ್ರಹ್ಮಾಂಡ ಹುಟ್ಟುವಾಗಲೂ ಸಹಸ್ರಬಣ್ಣವೆಲ್ಲ, ಸುವರ್ಣಮಯವಾದಂತಾದ್ದು. ಮತ್ತಂತುಮಲ್ಲದೆ ಈಗಲಾದರೀ ದ್ವೀಪಾಂತರದಲ್ಲದೆ ಕೆಲವು ಕೆಲವು ದ್ವೀಪಾಂತರಗಳಲ್ಲಿ ಸುವರ್ಣದ ಮಣ್ಣೆಂದು ಹುಟ್ಟುತ್ತಿಹುದು. ಈ ದ್ವೀಪಾಂತರದಲ್ಲಿಯಾದರೂ ಜಾಲಗಾರರು ಉದಕದಲ್ಲಿ ಮಣ್ಣುಜಾಲಿಸಿದಲ್ಲಿ ಅವರ ಕೂಲಿಮಾತ್ರವಾಗಿ ಹಾಗ ಬೇಳೆ ತೂಕದ ಚಿನ್ನ ಹುಟ್ಟುವದುಂಟು. ಮತ್ತು ಒಂದು ದೃಷ್ಟಾಂತಸಮಾನವುಂಟು. ಅದು ಹ್ಯಾಗೆಂದೊಡೆ, ಲೋಕದಲ್ಲಿ ಆತ್ಮರುಗಳಿಗೆ ಏನಾದರೂ ಒಂದು ರಾಜಭಯ ಚೋರಭಯಂಗಳು ಬಂದಡಸಿದಲ್ಲಿ ತಮ್ಮಲ್ಲಿಹ ಪಂಚಲೋಹಂಗಳನ್ನೂ ಸುವರ್ಣವನ್ನೂ ಭೂಮರೆಯು ಮಾಡಿಹೋಗಿ ಕಾಲಾಂತರದಮೇಲೆ ಬಂದು ತೆಗೆದು ನೋಡಿದಲ್ಲಿ ಅಯಃಕಾಂತಾದಿ ಪಂಚಲೋಹಂಗಳೆಲ್ಲಾ ಕಸನೆಟ್ಟು ಕೆಟ್ಟಿರುವವು. ಆ ಸುವರ್ಣದಂತೇಳುಬಣ್ಣದ ಕೀಳು ಚಿನ್ನವಾದರೂ ಒಂದುಬಣ್ಣ ಎರಡುಬಣ್ಣ ಹೆಚ್ಚಿರುವುದು. ಆ ಪೃಥ್ವಿಯೇ ಹಳದಿಬಣ್ಣವಲ್ಲದಿದ್ದರೆ ಅದು ಹಾಗೆ ಒಂದುಬಣ್ಣ ಎರಡು ಬಣ್ಣ ಹೆಚ್ಚೀತೆ? ಹೆಚ್ಚಲರಿಯದು. ಅದುಕಾರಣವಾಗಿ ಆ ಪೃಥ್ವಿಯು ದೇಹವಾಯಿತ್ತಾದೊಡೆ ಪೀತವರ್ಣ ಹಳದಿವರ್ಣ ಕಾಂತಿಯಿಂದಿರುತಿಹುದೆಂದು ತಿಳಿದುಕೊಂಬುದು. ತತ್ವಜ್ಞಾನಿಗಳು ಅಧಿದೇವತೆ ಬ್ರಹ್ಮನು, ಅದಕ್ಕಧಿಷ್ಠಾನ ಕರ್ತೃವೇ ಅಜನು, ಆ ಅಜನು ಧರಣೀತತ್ವಕ್ಕೇನು ಕಾರಣ ಅಧಿಷ್ಠಾನಕರ್ತೃವಾಗಿರುತಿಹನೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ, ಪೃಥ್ವಿ ಒಂದುವೇಳೆ ಹೆಚ್ಚೀತೆ, ಕಟಾಹದ ಅಂಚು ಪರಿಯಂತರ

ಬೆಳೆದುಕೊಂಡು ಹೋದೀತು, ಒಂದುವೇಳೆ ತಂಗೀತೆ ? ಪಾತಾಳಲೋಕಕ್ಕೆ ಇಳಿದು ಹೋದೀತು, ಅಂತು ಹೆಚ್ಚದಹಾಗೆ ತಗ್ಗದಹಾಗೆ ಪರಶಿವನಪ್ಪಣೆಯಿಂದ ಅಜನೇ ಅಧಿಷ್ಠಾಯಕನಾಗಿ ಕಾಯ್ದುಕೊಂಡಿರುತ್ತಿಹನು ಎಂದು ತಿಳಿದುಕೊಂಬುದು. ತತ್ವಜ್ಞಾನಿಗಳು ಅಪ್ಪುವಿಂಗೆ ಸರ್ವಪಾಪ ಪ್ರಕ್ಷಾಳನ ರೂಪನಾಮದಕ ತತ್ವಕ್ಕೆ ಶಬ್ದ ಇಳಿಜಾರಿನಲ್ಲಿ ಚರಿಸುವಾಗ ಪುಟ್ಟುವಂತ ಬುಳುಬುಳು, ಚೆಳಚಳ, ಬೋರ್ಜೋರು ಯೆಂಬ ಶಬ್ದವು, ಸ್ಪರ್ಶ=ಮುಟ್ಟದರೆ ತಣ್ಣಗೆ ತಟ್ಟುವಂತಾ ಶೈತ್ಯಸ್ಪರ್ಶನವು ರೂಪು=ನೀಲಾದಿ ಚಿತ್ರವರ್ಣದರೂಪು, ರಸ=ಸ್ವಾದರಸವು, ಅದು ಹ್ಯಾಗೈಯ್ಯಾ, ಅಪ್ಪುವೆಂಬುವದು ಕೆಲವು ಸ್ಥಾನದಲ್ಲಿ ಕ್ಷಾರವಾರಿಯಾಗಿಯೂ ಕೆಲವುಸ್ಥಾನದಲ್ಲಿ ವಗರುಜಲವಾಗಿಯೂ ಕೆಲವುಸ್ಥಾನದಲ್ಲಿ ವಿಷೋದಕವಾಗಿಯೂ ನಾನಾರುಚಿಯೊಡನೆ ಕೂಡಿರುತ್ತದೆ. ಅದಕ್ಕೆ ನೀವು ಸ್ವಾದರಸಬಂದೆನ್ನೇ ಪ್ರಮಾಣಿಸಿ ಹೇಳುತ್ತಿದ್ದೀರಿ. ಅದು ಹ್ಯಾಗೆ ತಿಳಿದುಕೊಳ್ಳಬೇಕು, ಎಲೈ ಸ್ವಾಮಿಯೆಂದು ಬೆಸಗೊಂಡೊಡೆ—ಅದು ಆಯಾಯ ಭೂಮಿಯಮೇಲೆ ಬಿದ್ದ ಆಯಾಯ ಮಣ್ಣಿನ ಸಂಪರ್ಕದಿಂದ ಆಯಾಯ ರುಚಿಯಾಗಿರುವುದಲ್ಲದೆ ಅದಕ್ಕೆ ಸ್ವಾದರಸವೊಂದೇ ಸಹಜ. ಅದು ಹ್ಯಾಗೆಂದೊಡೆ—ದೊಡ್ಡದೊಡ್ಡ ತಟಾಕಂಗಳಲ್ಲಿರ್ಪ ಉದಕಂಗಳನ್ನೂ ದೊಡ್ಡದೊಡ್ಡ ನದಿಗಳಲ್ಲಿರ್ಪುದಕವನ್ನೂ ಕೈಯಲ್ಲಿ ತೆಗದುಕೊಂಡು ಸ್ವೀಕರಿಸಿದೊಡೆ, ಅದು ಸ್ವಾದಮಯವಾಗಿರುತ್ತಿಹವು. ಮತ್ತಂತುಮಲ್ಲದೆ ಆಕಾಶದಿಂದ ಬೀಳುವ ಮೇಘಜಲವನ್ನು ಅಂಗೈಯಲ್ಲಿ ಆಂತುಕೊಂಡು ಸ್ವೀಕರಿಸಿದೊಡೆ ಅವು ಮಹಾ ಸ್ವಾದಮಯವಾಗಿರುತ್ತಿಹವು. ಅಪ್ಪುವೇ ಸ್ವಾದರಸವಲ್ಲದಿದ್ದೊಡೆ ಅದು ಹ್ಯಾಗೆ ಸ್ವಾದಮಯವಾಗಿದೆ ಇರಲರಿಯದು. ಅದುಕಾರಣವಾಗಿ ಅಪ್ಪುವಿಂಗೆ ಸ್ವಾದರಸವುಂಟೆಂದು ತಿಳಿದುಕೊಳ್ಳುವುದು. ತತ್ವಜ್ಞಾನಿಗಳು ಚತುರ್ವಿಧಗುಣವು ಅಪ್ಪುತತ್ವಕ್ಕೆ ಅಸಾಧಾರಣಗುಣಂಗಳಾಗಿಪ್ಪವು. ದ್ರವಿಸುವದೇ ಧರ್ಮ, ಪಿಂಡಬ್ರಹ್ಮಾಡಂಗಳಲ್ಲಿ ಬೆವರು ಬಿಂದುಮಯವಾಗಿ ಚರಿಸುವದೇ ಅದರ ಸ್ವಭಾವವು, ಅದು ಹ್ಯಾಗೆಂದೊಡೆ—ಪಿಂಡದಲ್ಲಿ ಎದೆಬದಿ, ಕಕ್ಷ ವಕ್ಷಸ್ಥಳಂಗಳಲ್ಲಿ ಬ್ರಹ್ಮಾಂಡದಲ್ಲಿ ಬೆಟ್ಟದ ತಪ್ಪಲು, ಹಳ್ಳದತಡಿ ಕೆರೆಹಿಂದಿಕ್ಕಿನಲ್ಲಿ ಬೆಮರು ಬಿಂದುಮಯವಾಗಿ ಪ್ರಜ್ವಲಿಸಿ ಚರಿಸುವಂತಾದ್ದೇ ಅದರ ಸ್ವಭಾವವು ಎಂಬುದೀಗ ಪಿಂಡೀಕರಣ ಕರ್ಮ

ಹುಡಿಹುಟ್ಟು ಹುಡಿಮಣ್ಣು, ಧೂಳಿಪಾಂಸಾದಿಗಳಿಗೆ ತನ್ನ ದ್ರವವನ್ನು ಕೊಟ್ಟು ಮುದ್ದೆಯನ್ನು ಕಟ್ಟುವ ಕರಣಮಾಡುವುದೇ ಅದು ಮಾಡುವ ಉದ್ಯೋಗವು. ತತ್=ಆ ಅಪ್ಪುವಿನ, ಅಂಗ=ದೇಹವಾಯಿತ್ತಾದೊಡೆ, ಶ್ವೇತವರ್ಣ=ಧವಳವರ್ಣ ಕಾಂತಿಯಿಂದಿಹುದು. ಅದು ಹ್ಯಾಗೆಯ್ಯ ಅಪ್ಪುವೆಂಬುವಂತಾದ್ದು ? ಹಳದಿ, ಹಸುರು, ಕರಿದು, ಕೆಂಪು, ಬಿಳಿದು ಮೊದಲಾದ ನಾನಾ ಬಣ್ಣದೊಡನೆ ಕೂಡಿರುತ್ತದೆ. ಅದಕ್ಕೆ ಧವಳವರ್ನವೊಂದೇನೇ ಪ್ರಮಾಣಿಸಿಕೊಳ್ಳುತ್ತಿದ್ದೀರಿ. ಅದು ಹ್ಯಾಗೆ ತಿಳಿಯಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅದಾಯಾಯ ಭೂಮಿಯಮೇಲೆ ಬಿದ್ದಲ್ಲಿ ಆಯಾಯ ಮಣ್ಣಿನ ಸಂಪರ್ಕದಿಂದ ಆಯಾಯ ಬಣ್ಣವಾಗಿರಿವುದಲ್ಲದೆ, ಅದಕ್ಕೆ ಧವಳವರ್ನವೊಂದೇ ಸಹಜ. ಅದು ಹ್ಯಾಗೆಂದೊಡೆ—ಗಟ್ಟ ಬೆಟ್ಟದಮೇಲೆ ಹತ್ತಿನಿಂತುಕೊಂಡು ದೊಡ್ಡದೊಡ್ಡ ತಟಾಕಂಗಳನ್ನು ದೊಡ್ಡದೊಡ್ಡ ನದಿಗಳನ್ನು ನಿರೀಕ್ಷಣೆ ಮಾಡಿದಲ್ಲಿ ಅವು ಒಂದಾನೊಂದು ಮಡಿಯ ಸೀರೆಯ ಹಾಸಿದೋಪಾದಿಯಲ್ಲಿ, ಬೆಳ್ಳಕ್ಕಿ ಹಿಂಡಿನೋಪಾದಿಯಲ್ಲಿ, ಶುದ್ಧ ಧವಳಮಯವಾಗಿ ಕಾಣಬರುತಿಹುದು. ಮತ್ತಂತುಮಲ್ಲದೆ ಉಕ್ಕುಡುತೆ ಉದಕವ ಕೈಯಲ್ಲಿ ತೆಗದುಕೊಂಡು ಮೇಲಕ್ಕೆತ್ತಿ ಚಿಮ್ಮಿದಲ್ಲಿ ಆ ಉದಕದ ಹನಿಗಳು ಒಂದಾನೊಂದು ಮೌಕ್ತಿಕದಮಣಿಯೋಪಾದಿಯಲ್ಲಿ ಬೆಳ್ಳಿಗುಂಡಿನೋಪಾದಿಯಲ್ಲಿ ಶುದ್ಧ ಧವಳವರ್ನಮಯವಾಗಿ ಕಾಣಬರುತಿಹುದು ಎಂಬುದುಸರಿ. ಮತ್ತಂತುಮಲ್ಲದೆ ಆ ಉದಕವೇ ಗಟ್ಟಗೊಂಡಾಗ ಪಾರಿಶಿಲೆ, ಶಂಖ, ಮೌಕ್ತಿಕಾದಿಗಳೆಲ್ಲವೂ ಧವಳಮಯವಾಗಿ ಇರುತಿಹುದು ಎಂಬುದರ್ಥವು. ಮತ್ತಂತುಮಲ್ಲದೆ ಆತ್ಮರುಗಳು ತಮ್ಮಲ್ಲಿದ್ದಂತ ಮಲಿನಾಂಬರವನ್ನು ಹಳ್ಳ ಹೊಳೆ ಕೆರೆ ಭಾವಿಗಳಿದ್ದ ಸ್ಥಾನಕ್ಕೆ ತೆಗೆದುಕೊಂಡು ಹೋಗಿ ಚೆಂದವಾಗಿ ತೊಳೆದುತೊಳೆದು ಪ್ರಕ್ಷಾಳಿಸಿದಲ್ಲಿ ಅದರ ಮುನ್ನಿನ ಮಲಿನವೆಲ್ಲವೂ ಹೋಗಿ, ಒಂದಾನೊಂದು ಕಾಯೆಭಾಗದೋಪಾದಿಯಲ್ಲಿ ಶುದ್ಧ ಧವಳವರ್ನದ ಕಾಂತಿಯಿಂದಲೇ ಕಾಣಬರುತಿಹುದು. ಆ ಅಪ್ಪುವಿಂಗೆ ಶ್ವೇತವರ್ಣವಿಲ್ಲದಿದ್ದೊಡೆ ಅವು ಹ್ಯಾಗೆ ಧವಳಮಯವಾಗಿ ಕಾಣಬಂದಾವೇ ಕಾಣಬಾರವು. ಅದುಕಾರಣವಾಗಿ ಅಪ್ಪುವಿನ ದೇಹವು ಧವಳವರ್ನದ ಕಾಂತಿಯಿಂದಿಹುದೆಂಬೇ ತಿಳಿದುಕೊಂಬುವುದು. ತತ್ವಜ್ಞಾನಿಗಳು ಅಧಿದೇವತೆ ಅಪ್ಪುವಿಂಗೆ ಅಧಿಷ್ಠಾನಕ

ತರ್ುವೇ ನಾರಾಯಣನು, ಆ ನಾರಾಯಣನು ಅಪ್ಪುತತ್ವಕ್ಕೆ ಏನುಕಾರಣ ಅಧಿಷ್ಠಾಯಕನಾಗಿರುವನೆಂದ್ಯ್ಯಾಎಂದೆ ೞಡೆ ಅಪ್ಪು ಒಂದುವೇಳೆ ಹೆಚ್ಚೀತೆ? ಪ್ರಳಯಕಾಲದ ಜಲವಾಗಿ ಲೋಕವನೆಲ್ಲಾ ಮುಳುಗಿಸಿಕೊಂಡೀತು, ಒಂದುವೇಳೆ ತಗ್ಗೀತೆ ಆತ್ಮರುಗಳ ಪಾಪ್ಯಪ್ರಕ್ಷಾಳನಕ್ಕೆ ಬಾರದೆಹೋದೀತು, ಅಂತು ಹೆಚ್ಚದೆಹಾಗೆಯೂ ತಗ್ಗದೆಹಾಗೆಯೂ, ಆ ಅಪ್ಪುತತ್ವಕ್ಕೆ ಪರಶಿವನೆಪ್ಪಣೆಯಿಂದ ನಾರಾಯಣನೇ ಅಧಿಷ್ಠಾಯಕನಾಗಿ ಕಾಯ್ದುಕೊಂಡಿರುತಿಹನು ಎಂದು ತಿಳಿದುಕೊಳ್ಳುವುದು. ತತ್ವಜ್ಞಾನಿಗಳು ಅಗ್ನಿಗೆ ಸರ್ವದಾಹಕ ಪಚನರೂಪವಾದ ಧನಂಜಯತತ್ವಕ್ಕೆ, ಶಬ್ದ=ಕಾಷ್ಠಕಾಂತಾರ ಮಂದಿರ ತೃಣಪುಂಜಂಗಳನಾವರಿಸಿ ಸುಡುವಲ್ಲಿ ಘುಟ್ಟುವಂತ ಛಿಟಲ್ ಘಟಲ್ ಭುಗಿಲ್ ಚಟಚಟ ಪಟಪಟ ದೆಳದೆಳ ದೆಗದೆಗ ಎಂಬ ಶಬ್ದವು, ಸ್ಪರ್ಶ=ಉಷ್ಣಸ್ಪರ್ಶವು, ರೂಪು=ಪ್ರಭಾ ವರ್ನದರೂಪು, ಈ ತ್ರಿವಿಧವೂ ಗುಣ. ಅಗ್ನಿತತ್ವಕ್ಕೆ ಅಸಾಧಾರಣಗುಣಂಗಳಾಗಿಪ್ಪವು, ಉಷ್ಣಿಸುವದೇ ಪಿಂಡಬ್ರಹ್ಮಾಂಡಂಗಳಲ್ಲಿ ಶಕಮಯವಾಗಿರುವದೇ ಧರ್ಮ ಅದರಸ್ವಭಾವವು. ಅದುಹ್ಯಾಗೆಂದೊಡೆ—ಪಿಂಡದಲ್ಲಿ ಎದೆಬದಿ ಕಕ್ಷವಕ್ಷ ಸ್ಥಳಂಗಳಲ್ಲಿ ಬ್ರಹ್ಮಾಂಡದಲ್ಲಿ ತೃಣಾಲಯ, ಕಾಷ್ಠಾಲಯ, ಶಿವಾಲಯ, ಗವಿ, ಗುಹೆ, ಬಿಲದ್ವಾರ, ತುರುವುಂದೇ ಕುರಿಮಂದೆ ಕಳ್ಳಿ ಚಾಟುಗಳಲ್ಲಿ ಬೆಚ್ಚಗೆ ತಟ್ಟುವಂತಾದ್ದೇ ಅದರ ಸ್ವಭಾವವು. ಪಚನಾದಿ ಕರ್ಮ ಇದಿರಿಟ್ಟ ತರಗೆಲೆ ತೃಣಕಾಷ್ಠಗಳನ್ನು ಸುಟ್ಟು ಬೂದಿಯಂ ಮಾಡಿಬಿಡುವಂತಾದ್ದು. ಮತ್ತಂತುಮಲ್ಲದೆ ಹದಿನೆಂತು ಧಾನ್ಯಗಳನ್ನು ಪಾಕಪ್ರಯತ್ನವ ಮಾಡಿಕೊಡುವಂತಾದ್ದೇ ಅದು ಮಾಡುವ ಉದ್ಯೋಗವು. ತತ್=ಆ ಅಗ್ನಿಯ, ಅಂಗ=ದೇಹವು, ರಕ್ತವರ್ಣ=ಶೋಣವರ್ನದಕಾಂತಿಯಿಂದಿಹುದು, ಅದು ಹ್ಯಾಗೆಯ್ಯಾ ಅಗ್ನಿಯೆಂಬುದು ಹಳದಿ ಹಸುರು ಕೆಂಪು ಕರಿದು ಬಿಳಿದು ಮೊದಲಾದ ನಾನಾಬಣ್ಣದೊಡನೆ ಕೂಡಿರುತ್ತದೆ. ಅದಕ್ಕೆ ಶೋಣವರ್ನವೊಂದನ್ನೇ ಪ್ರಮಾಣಿಸಿ ಹೇಳುತ್ತಿದ್ದೀರಿ. ಅದು ಹ್ಯಾಗೆ ತಿಳಿಯಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ: ಅದು ಆಯಾಯ ದ್ರವ್ಯಂಗಳ ಸಂಪರ್ಕದಿಂದ ಆಯಾಯ ಬಣ್ಣವಾಗಿರುವದಲ್ಲದೆ ಅದಕ್ಕೆ ಶೋಣವರ್ನವೊಂದೇ ಸಹಜ. ಅದು ಹ್ಯಾಗೆಂದೊಡೆ—ದೊಡ್ಡದೊಡ್ಡ ತರಿಯ ಕೆಂಡಗಳಂ ಮಾಡಿಸಿ, ಯೇಳಂಕಣದ ಕಾವಳದ ಮಾಳಿಗೆಮನೆಯ

ಮಧ್ಯದಲ್ಲಿ ಮಡಗಿಟ್ಟು ದೂರದಿಂದ ನಿಂತು ನೋಡಿದಲ್ಲಿ ಅದು ಒಂದಾನೊಂದು ಮಾಣಿಕ್ಯದ ದೀಪ್ತಿಯೋಪಾದಿಯಲ್ಲಿ ಗಣಗಣನೆ ಹೊಳದು ತೋರುತಿಹುದು. ಅಗ್ನಿಯೇ ಶೋಣವರ್ಣವಲ್ಲದಿದ್ದರೆ ಅದು ಹ್ಯಾಗೆ ಗಣಗಣನೇ ಹೊಳದು ತೋರೀತೇ ? ತೋರಲರಿಯದು. ಅದುಕಾರಣವಾಗಿ ಆ ಅಗ್ನಿಯ ದೇಹವಾಯಿತ್ತಾದೊಡೆ ರಕ್ತವರ್ಣದ ಕಾಂತಿಯಿಂದಿಹುದೆಂದು ತಿಳಿದುಕೊಂಬುವುದು. ತತ್ವಜ್ಞಾನಿಗಳು ಅಧಿದೇವತೆ ಅದಕ್ಕೆ ಅಧಿಷ್ಠಾನಕರ್ತೃವೇ ಶ್ರೀರುದ್ರಮೂರ್ತಿಯು, ಆ ಅಗ್ನಿತತ್ವಕ್ಕೆ ರುದ್ರಮೂರ್ತಿ ಯೇನುಕಾರಣ ಅಧಿಷ್ಠಾನಕರ್ತೃವಾಗಿಪ್ಪನಯ್ಯಾ ಸ್ವಾಮಿಯೆಂದು ಬೆಸಗೊಂಡೊಡೆ : ಅಗ್ನಿಯೊಂದುವೇಳೆ ಹೆಚ್ಚೀತೆ, ಪ್ರಳಯ ಕಾಲಾಗ್ನಿಯಾಗಿ ಲೋಕವೆಲ್ಲ ಸುಟ್ಟು ಬೂದಿಯಂಮಾಡಿಬಿಟ್ಟೀತು. ಒಂದುವೇಳೆ ತಗ್ಗೀತೆ ? ಆತ್ಮರುಗಳ ಪಾಕಪ್ರಯತ್ನಕ್ಕೆ ಬಾರದೆ ಹೋದೀತು, ಅಂತು ಹೆಚ್ಚದೆಹಾಗೆ ತಗ್ಗದೆಹಾಗೆ ಪರಶಿವನ ಪ್ಪಣೆಯಿಂದ ಶ್ರೀರುದ್ರಮೂರ್ತಿಯೇ ಅಧಿಷ್ಠಾಯಕನಾಗಿ ಕಾಯಿದುಕೊಂಡಿರುತಿಹನು. ವಾಯುವಿಂಗೆ ಸರ್ವಚಾಂಚಲ್ಯ ಮಯವಾದ ಸವಿಾರತತ್ವಕ್ಕೆ ಶಬ್ದ=ತರು ಭಿತ್ತಿ ಶಿಲಾದಿಗಳಮೇಲೆ ಬೀಸಿದಲ್ಲಿ ಹುಟ್ಟುವಂತ ಬಿಸ್ಸೆಂಬ ಶಬ್ದವು, ಅನುಷ್ಣ=ಶೀತಸ್ಪರ್ಶನವು, ಈ ಎರಡು ವಾಯುತತ್ವಕ್ಕೆ ಅಸಾಧಾರಣಗುಣಂಗಳಾಗಿಪ್ಪವು. ಚರಿಸುವದೇ ಧರ್ಮ, ಉತ್ತರ ದಕ್ಷಿಣ ಪೂರ್ವ ಪಶ್ಚಿಮ ಊರ್ಧ್ವಪಾತಾಳಗಳತ್ತ ಶೈತ್ಯ ಸೌರಭ್ಯ ಮಾಂದ್ಯದೊಡನೆ ಕೂಡಿ ಸ್ವಾತ್ಮಹಿತವಾಗಿ ಚರಿಸುವುದೇ ಅದರ ಸ್ವಭಾವಸ್ಥಿತಿಯು, ಇದರ ಕರ್ಮ ಒಂದಾನೊಂದು ಸ್ವಸ್ಥಾನದಲ್ಲಿಪ್ಪ ವಸ್ತುಗಳನ್ನು ವರ್ತುಲಾಕಾರದಿಂದ ಹೊತ್ತುಕೊಂಡುಹೋಗಿ ಪರಯಲ್ಲೆ ಪರಮಂಡಲ ಪರಸ್ಥಾನಕ್ಕೆ ಹಾರಿಸಿಬಿಡುವಂತಾದ್ದೇ ಅದರ ಉದ್ಯೋಗವು. ತದಂಗ ಹರಿತವರ್ಣ, ತತ್=ವಾಯುವಿನ, ಅಂಗ=ದೇಹವಾಯಿತ್ತಾದೊಡೆ, ಹರಿತವರ್ಣ=ಪಚ್ಚೆವರ್ಣದಕಾಂತಿಯಿಂದಿರುತಿಹುದು. ಅದು ಹ್ಯಾಗೆಂದೊಡೆ—ವಾಯುವೆಂಬುದು ಕೇವಲ ನಿರಾಕಾರವಾದಂತಾದ್ದು, ಅದಕ್ಕೆ ಹಸುರುವರ್ಣವುಂಟೆಂದು ಪ್ರಮಾಣಿಸಿ ಹೇಳುತಿದ್ದೀರಿ. ಅದು ಹ್ಯಾಗೆ ತಿಳಿಯಬೇಕೆರೆ ಸ್ವಾಮಿಯೆಂದು ಬೆಸಗೊಂಡೊಡೆ—ಅದು ಒಂದಾನೊಂದು ಉಪಮಾನದಿಂದ ತಿಳಿದುಕೊಳ್ಳಬೇಕು. ಅದೆಂತೆಂದೊಡೆ—ಆತ್ಮರುಗಳು ಭೂಮಿಯನ್ನು ಹಚ್ಚೊ

ತ್ತಿ ಪಡದು ಹಸನುಮಾಡಿ ತಮ್ಮೊಳ್ಳಿಹ ಹದಿನೆಂಟು ಧಾನ್ಯಾದಿಗಳನ್ನು ಭೂಮರೆಯ ಮಾಡಿದಲ್ಲಿ ಆ ಧಾನ್ಯಾದಿಗಳ ಮೊಳಕೆಗಳು ಆ ಭೂಮಿ ಯ ಮರೆಯಲ್ಲಿ ಇರುವ ಪರಿಯಂತರವೂ ಒಂದಾನೊಂದು ಬೆಳ್ಳಿಯ ಸಲಾಕೆಯೋಪಾದಿಯಲ್ಲಿ ಧವಳವರ್ನದ ಕಾಂತಿಯಿಂದಿರುತಿಹವು. ಬಹಿ ರ್ಗತವಾದಬಳಿಕ ಹಚ್ಚೊತ್ತಿ ಹಸುರಾಕಾರವಾಗಿರುತಿಹವು. ಮತ್ತಂ ತುಮಲ್ಲದೆ ಕೆಲವು ಕೂಷ್ಮಾಂಡಫಲ ಮುಂತಾದ ಫಲವಸ್ತುಗಳು ಭೂ ಮಿಯು ಹೊಂದಿದಷ್ಟೆಲ್ಲಾ ಬಿಳಿದಾಗಿ ಗಾಳಿಯ ಸಂಚಾರದಲ್ಲಿದ್ದುದೆಲ್ಲಾ ಹಚ್ಚೊತ್ತಿ ಹಸುರಾಗಿ ಕಾಣಬರುತಿಹವು. ವಾಯುವೇ ಹಸುರುವ ರ್ನವಲ್ಲದಿರ್ದೊಡೆ ಅವೆಲ್ಲ ಹ್ಯಾಗೆ ಹಚ್ಚೊತ್ತಿ ಹಸುರಾಗಿ ಕಾಣಬಂದಾ ವೆ? ಕಾಣಬಾರವು. ಅದುಕಾರಣವಾಗಿ ವಾಯುವಿನ ದೇಹವಾಮಿ ತ್ತಾದೊಡೆ ಪಚ್ಚೆವರ್ನದ ಕಾಂತಿಯಿಂದಿಪ್ಪುದೆಂದು ತಿಳಿದುಕೊಂಬುವು ದು. ತತ್ವಜ್ಞಾನಿಗಳು ಅಧಿದೇವತೆ, ಅಧಿಷ್ಠಾನಕರ್ತುವೇ ಈಶ್ವರ ನು, ಆ ಈಶ್ವರ ಮೂರ್ತಿಯು ವಾಯುತತ್ವಕ್ಕೇನುಕಾರಣಾಧಿಷ್ಠಾ ಯಕನಾಗಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ವಾಯು ಒಂದು ವೇಳೆ ಹೆಚ್ಚೀತೆ? ಭೂಮಿಯು ಒಂದಾನೊಂದು ತಟ್ಟೆಸುರುಳಿ ಮರ್ಯಾ ದೆಯಲ್ಲಿ ಸುರುಳಿಕೊಂಡುಹೋಗಿ ಸಮುದ್ರಗ್ರಾಸ್ಯವ ಮಾಡಿಬಿಟ್ಟೀತು. ಒಂದುವೇಳೆ ತಗ್ಗೀತೆ ಆತ್ಮರುಗಳು ಶ್ವಾಸನಿಶ್ವಾಸಕ್ಕೆ ಬಾರದಹೋ ದೀತು. ಅಂತು ಹೆಚ್ಚದಹಾಗೆ ತಗ್ಗದಹಾಗೆ ಪರಶಿವನಪ್ಪಣೆಯಿಂದ ಈಶ್ವರಮೂರ್ತಿಯೇ ಅಧಿಷ್ಠಾಯಕನಾಗಿ ಕಾಯ್ದುಕೊಂಡಿರುತಿಹನು. ಆಕಾಶಕ್ಕೆ ಸರ್ವಾಕಾಶಪ್ರದಮಾದ ವ್ಯೋಮತತ್ವಕ್ಕೆ ಶಬ್ದವೊಂದೇ ಗುಣ, ಗಡಗಡವೆಂಬ ಶಬ್ದವೊಂದೇ ಅದಕ್ಕಸಾಧಾರಣಗುಣವಾಗಿರುತಿ ಹುದು, ಬಯಲಾಗಿರುವುದೇ ಧರ್ಮ, ಎಲ್ಲಿನೋಡಿದರಲ್ಲಿ ನಿರಾಕಾರಮ ಯವಾಗಿರುವುದೇ ಅದರ ಸ್ವಭಾವವು. ಸುಳಿವುದಕ್ಕೆ ತೆರಪುಗೊಡುವು ದೇ ಸಮಸ್ತ ಚರಾಚರಪ್ರಾಣಿಗಳು ಮುಂದುಮುಂದಕ್ಕೆ ಸಂಚರಿಸುವು ದಕ್ಕೆ ತೆರಪುಗೊಡುವುದೇ ಇಂಬುಗೊಟ್ಟುಕೊಂಡಿರುವುದೇ ಕರ್ಮವು. ಅದು ಮಾಡುವಂತ ಉದ್ಯೋಗವು. ತತ್=ಆಕಾಶದ, ಅಂಗ=ದೇಹ ವಾಮಿತ್ತಾದೊಡೆ, ಕೃಷ್ಣವರ್ನ=ಕಾಡಿಗೆವರ್ನಕಾಂತಿಯಿಂದಿರುತಿಹು ದು, ಅದುಹ್ಯಾಗೆಯ್ಯ—ಆಕಾಶಕ್ಕೆ ಒಂಭೈನೂರು ವರ್ನವುಂಟೆಂದು ಸಕಲವೇದ ಶಾಸ್ತ್ರಾಗಮ ಪುರಾಣಂಗಳು ಹೇಳುತಿರುವುವು. ಅದಕ್ಕೆ

ನೀವು ಕಾಡಿಗೆವರ್ಣವೆಂದೆನ್ನೇ ಪ್ರಮಾಣಿಸಿ ಹೇಳುತಿದ್ದೀರಿ ; ಅದು ಹ್ಯಾಗೆ ತಿಳಿದುಕೊಳ್ಳಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅದು ಆಯಾಯ ಮೇಘಂಗಳ ಸಂಪರ್ಕದಿಂದ ಆಯಾಯ ವರ್ಣವಾಗಿರುವುದೆ ಲ್ಲದೆ, ಅದಕ್ಕೆ ಕಾಡಿಗೆವರ್ಣವೆಂದೇ ಸಹಜ. ಅದು ಹ್ಯಾಗೆಂದೊಡೆ—ಬೇಸಿಗೆ ನಾಲ್ಕುತಿಂಗಳು ಧೂಳು ಧೂಮಾದಿಗಳು ಮುಸಿಗಿಕೊಂಡು ಆಕಾಶದ ನಿರ್ಮಲತ್ವವು ಕಾಣಬಾರದು. ಮಳೆಗಾಲ ನಾಲ್ಕುತಿಂಗಳು ಮೇಘ ಮಂಜುಗಳು ಮುಸುಗಿಗೊಂಡು ಒಂದಾನೊಂದು ಬೇಸಿಗೆಯಲ್ಲ ದ ಮಳೆಗಾಲವಲ್ಲದ ಶರತ್ಕಾಲದ ದಿವಸದಲ್ಲಿ ಆಕಾಶವನ್ನು ನಿರೀಕ್ಷಣೆ ಯ ಮಾಡಿದ್ದುಂಟಾದರೆ ಅದು ಒಂದಾನೊಂದು ಅಯಃಕಾಂತದ ಮು ದ್ದೆಯೋಪಾದಿಯಲ್ಲಿಯೂ, ನೀಲದ ಗುಳಿಗೆಯೋಪಾದಿಯಲ್ಲಿಯೂ, ಕಾಡಿಗೆಯೋಪಾದಿಯಲ್ಲಿಯೂ, ಕರಿಕಂಬಳಿಯೋಪಾದಿಯಲ್ಲಿಯೂ, ಕ ಣ್ಣಿಗೆ ಕಪ್ಪಾಗಿ ಕಾಣಬರುತಿಹುದು. ಆ ಆಕಾಶವೇ ಕಾಡಿಗೆವರ್ಣವಲ್ಲದಿ ದ್ದರೆ ಹ್ಯಾಗೆ ಕಪ್ಪಾಗಿ ಕಂಡೀತೆ ? ಕಾಣಲರಿಯದು. ಅದುಕಾರಣ ವಾಗಿ ಆಕಾಶದ ದೇಹವಾಯಿತ್ತಾದೊಡೆ ಕಾಡಿಗೆವರ್ಣದ ಕಾಂತಿಯಿಂದಿ ಹುದೆಂದೇ ತಿಳಿದುಕೊಂಬುವುದು. ತತ್ವಜ್ಞಾನಿಗಳು ಅಧಿದೇವತೆ ಅದ ಕ್ಕೆ ಅಧಿಷ್ಠಾನಕರ್ತೃವೇ ಸದಾಶಿವನು. ಆ ಸದಾಶಿವಮೂರ್ತಿಯು ಆಕಾಶತತ್ವಕ್ಕೆ ಏನುಕಾರಣ ಅಧಿಷ್ಠಾನಕರ್ತೃವಾಗಿಹನೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಆ ಆಕಾಶ ಒಂದುವೇಳೆ ಹೆಚ್ಚೀತೆ ? ಕಟಾ ಹದ ಹಂಚನೊಡದುಕೊಂಡಾಚೆಗೆ ಹೋದೀತು, ಒಂದುವೇಳೆ ತಗ್ಗೀ ತೆ ? ಭೂಮಿಯಮೇಲೆ ಕುಸಿದುಬಿದ್ದೀತು. ಅಂತು ಹೆಚ್ಚದಹಾಗೆ ತಗ್ಗದಹಾಗೆ ಪರಶಿವನಪ್ಪಣೆಯಿಂದ ಸದಾಶಿವಮೂರ್ತಿಯೇ ಅಧಿಷ್ಠಾ ಯಕನಾಗಿ ಕಾಯ್ದುಕೊಂಡಿರುತಿಹನು. ಹೀಗೆಂದು ತಿಳಿದುಕೊಂಬು ವುದು. ತತ್ವಜ್ಞಾನಿಗಳು ಹೀಗೆಂದು ಹೇಳಲ್ಪಟ್ಟಂತ ಇದುತಾನೇ ಪಂ ಚಭೂತದುತ್ಪತ್ತಿ ಭೇದವು. ಸದಾಶಿವ ಸದ್ಯೋಜಾತಾಂತ್ಯಮಾದ್ಯೈ ದುವದನಂಗಳಿಂದ ಈ ಪೃಥ್ವ್ಯಾದಿ ಪಂಚಭೂತಂಗಳು ಸೃಷ್ಟಿಯಾ ದಂತ ಹಸಿಗೆಯ ವಿಚಾರವು ಎಂಬುದೀಗ ಪಂಚಭೂತದುತ್ಪತ್ತಿಯ ಭೇದವೆಂಬ ಶಬ್ದಕರ್ಥವು.

ಪಂಚಮಹಾಭೂತದ ಕಟ್ಟು ೬ಕ್ಕೆ ಮಂಗಳಮಹಾ.

## ಜ ಗ ದು ತ್ಪ ತ್ತಿ .

ಇನ್ನು ಸದ್ಗುರುದೇವನು ತಚ್ಛಿಷ್ಯಂಗೆ ಜಗದುತ್ಪತ್ತಿಯನ್ನು ನಿರೂಪಿಸುತಿಹರು. ಅದೆಂತೆಂದೊಡೆ—ಪಂಚಭೂತದ ಹಸಿಗೆಯನ್ನು ನಿರೂಪಿಸಿದ ತದನಂತರದಲ್ಲಿ ಇನ್ನು ಜಗದುತ್ಪತ್ತಿಗೆ ಮೂಲಕಾರಣನಾಗಿರುವನೇ ಸದಾಶಿವಮೂರ್ತಿಯು. ಅದುಹ್ಯಾಗೆಂದೊಡೆ—ಮೊದಲು ನಿಃಕಲಬ್ರಹ್ಮವು, ಆ ನಿಃಕಲಬ್ರಹ್ಮದಿಂದ ಜ್ಞಾನಚಿತ್ತು, ಆ ಚಿತ್ತಿನಿಂದಚಿನ್ನಾದ, ಚಿದ್ಬಿಂದು, ಚಿತ್ಕಳೆಗಳು ಪುಟ್ಟಿದವು. ಆ ಚಿನ್ನಾದ, ಚಿದ್ಬಿಂದು, ಚಿಕ್ಕಳೆ, ಮೂಲಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು ಅಖಂಡಗೋಳಕಾಕಾರ ತೇಜೋಮೂರ್ತಿಯುಳ್ಳ ಮಹಾಲಿಂಗವಾಯಿತು. ಆ ಮಹಾಲಿಂಗದಿಂದ ಒಂದಾನೊಂದು ಬೀಜದಲ್ಲಿ ವೃಕ್ಷೋತ್ಪತ್ತಿಯಾದ ಹಾಂಗೆ ಪಂಚಮುಖವನುಳ್ಳ ಸದಾಶಿವಮೂರ್ತಿಯಾದನು. ಆ ಸದಾಶಿವನ ಸದ್ಯೋಜಾತಾದೀಶಾನಾಂತ್ಯಮಾದ್ಯೈದು ವದನಂಗಳಿಂದ ಪುಟ್ಟಿದ ಪೃಥ್ವ್ಯಾದಿ ಐದುತತ್ವಂಗಳೇಕೀಕರಿಸಿ, ಚತುರ್ದಶಭುವನ ಚರಾಚರಪ್ರಾಣಿಗಳ ಸಮೂಹವನುಳ್ಳ ವಿಶ್ವೋತ್ಪತ್ತಿಯಾದಕಾರಣ ಜಗದುತ್ಪತ್ತಿಗೆ ಮೂಲಕಾರಣವಾಗಿರುವಂತಾದ್ದೇ ಸದಾಶಿವಮೂರ್ತಿಯು. ಆ ವಿಚಾರವನ್ನು ಮುಂದೆ ಗ್ರಥೋಕ್ತವಾಗಿ ನಿರೂಪಿಸುತಿಹರು. ಅದುಹ್ಯಾಗೆಂದೊಡೆ—ಸದಾಶಿವನ ಸದ್ಯೋಜಾತ ಮುಖದಲ್ಲಿ ಪುಟ್ಟಿದ ಪೃಥ್ವೀ, ವಾಮದೇವಮುಖದಲ್ಲಿ ಪುಟ್ಟಿದ ಅಪ್ಪು, ಆ ಸದಾಶಿವಮೂರ್ತಿಯ ಅಘೋರಮುಖದಲ್ಲಿ ಪುಟ್ಟಿದ ಅಗ್ನಿಯು, ತತ್ಪುರುಷಮುಖದಲ್ಲಿ ಪುಟ್ಟಿದ ವಾಯು, ಈಶಾನ್ಯಮುಖದಲ್ಲಿ ಪುಟ್ಟಿದ ಆಕಾಶವು, ನಯನಮಧ್ಯದಲ್ಲಿ ಪುಟ್ಟಿದ ಸೂರ್ಯನು, ಮನೋಮಧ್ಯದಲ್ಲಿ ಪುಟ್ಟಿದ ಚಂದ್ರನು, ಗೋಪ್ಯಮುಖದಲ್ಲಿ ಪುಟ್ಟಿದಾತ್ಮನು, ಈ ಅಷ್ಟತನುಗಳೊಳಗೆ ಪಂಚಭೂತಯುಕ್ತವಾದುದೇ ಬ್ರಹ್ಮಾಂಡವು. ಆ ಬ್ರಹ್ಮಾಂಡದೊಳಗೆ ಹಗಲು ನಾಲ್ಕುಝಾಮದಲ್ಲಿಯೂ ಆದಿತ್ಯನು ಬೆಳಗುತಿಹನು. ಇರುಳು ನಾಲ್ಕುಝಾಮದಲ್ಲಿಯೂ ಶಶಿಯು ಬೆಳಗುತಿಹನು. ಆತ್ಮನಾಯಿತ್ತಾದೊಡೆ ಆ ಬ್ರಹ್ಮಾಂಡದೊಳಗಿರುವ ಸಮಸ್ತ ಚರಾಚರಪ್ರಾಣಿಗಳಿಗೆ ದಿಟ್ಟಮುಷ್ಟಿ ಚೈತನ್ಯ ಸ್ವರೂಪನಾಗಿರುವನು. ಸದಾಶಿವನ ಅಂಶಂಗಳಾದ ಅಷ್ಟತನುಗಳು ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿಹರು. ಪೃಥ್ವಿ=ಸರ್ವಾಧಾರಮಯವಾದ ಧರಣೀತತ್ವವು, ಅಪ್ಪು=

ಸರ್ವಪಾನ್ಯ ಪ್ರಕ್ಷಾಳನರೂಪವಾದ ಉದಕತತ್ವವು, ಅಗ್ನಿ=ಸರ್ವದಾಹಕ ಪಚನರೂಪವಾದ ಧನಂಜಯತತ್ವವು, ವಾಯು=ಸರ್ವಚಾಂಚಲ್ಯವುಳ್ಳುವಾದ ಸಮೀರತತ್ವವು, ಆಕಾಶ=ಸರ್ವಾವಕಾಶಪ್ರದವಾದ ಅಂಬರತತ್ವವು, ಸೂರ್ಯನು=ದಿವಾಪತಿಯಾದ ಆದಿತ್ಯನು, ಚಂದ್ರ=ನಿಶಾಪತಿಯಾದ ಶಶಿಯು, ಆತ್ಮ=ಸರ್ವಚೈತನ್ಯಸ್ವರೂಪವಾದಾತ್ಮನು ಎನಿಸಿಕೊಂಬ ಇವುತಾವೇ ಸದಾಶಿವನ ಎಂಟಂಗವೇ ಜಗತ್ತಾಗಿಹವು. ಚತುರ್ದಶಭುವನ ಚರಾಚರಪ್ರಾಣಿಗಳ ಸಮೂಹವನುಳ್ಳ ವಿಶ್ವಸ್ವರೂಪವಾಗಿರುತಿಹವು. ಅವಾವೆಂದೊಡೆ—ಅವು ತಾವೆಂತಾವೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಚತುರ್ದಶಭುವನಂಗಳು ಎಂಬಲ್ಲಿ (ಶ್ಲೋ ॥ ಅತಳಂ ವಿತಳಂಚೈವ ಸುತಲಂಚತಲಾತಲಂ । ಮಹಾತಳಂರಸಾಖ್ಯಂಚ ಪಾತಾಳಂಚೇತಿಸಪ್ತಕಂ ॥) ಎಂದು ಅತಳ, ವಿತಳ, ಸುತಲ, ತಲಾತಲ, ಮಹಾತಳ, ರಸಾತಲ, ಪಾತಾಳವೆಂಬ ಕೆಳಗೇಳು ಲೋಕಂಗಳು, (ಶ್ಲೋ ॥ ಭೂಲೋಕಂಚಭುವರ್ಲೋಕಂಸುವರ್ಲೋಕಂತಥಾಕ್ರಮಾತ್ । ಮಹಾಜನತಪಂಸತ್ಯ ಲೋಕೋಹ್ಯೇತೇಚತುರ್ದಶ॥) ಎಂದು ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹಾಲೋಕ, ಜನಲೋಕ, ತಪೋಲೋಕ, ಸತ್ಯಲೋಕವೆಂದು ಯೇಲೇಳು ಲೋಕಂಗಳು. ಇಂತು ಈ ಹದಿನಾಲ್ಕು ಲೋಕಂಗಳನ್ನು ಆದಿಯಲ್ಲಿ ಪರಮೇಶ್ವರನಪ್ಪಣೆಯಿಂ ದಜನೇಸೃಷ್ಟಿಯ ಮಾಡಿದನು. ಎಂಬುದೀಗ ಸಪ್ತ ಸಮುದ್ರಂಗಳು (ಶ್ಲೋ ॥ ಲವಣೇಕ್ಷು ಸುರಾಸರ್ಪಿ ದಧಿದುಗ್ಧಜಲಾಸ್ಸ್ಮೃತಾಃ॥) ಎಂದು ಲವಣ, ಇಕ್ಷು, ಸುರ, ಸರ್ಪಿ, ದಧಿ, ದುಗ್ಧ, ಜಲವೆಂಬ ಏಳಂಬುಧಿಗಳು. ಸಪ್ತದ್ವೀಪಂಗಳು ಅವಾವೆಂದೊಡೆ—(ಶ್ಲೋ ॥ ಜಂಬುಪ್ಲಕ್ಷಶಾಲ್ಮಲೀನಃ ಕೃಶಃಕ್ರೌಂಚಸ್ತಥೈವಚ । ಶಾಕಪುಷ್ಕರನಾಮಾನ ದ್ವೀಪಾಸ್ಸ್ವಭ್ಯಂತರಾಃಕ್ರಮಾತ್ ॥) ಎಂದು ಜಂಬುದ್ವೀಪ, ಪ್ಲಕ್ಷದ್ವೀಪ, ಶಾಲ್ಮಲಿದ್ವೀಪ, ಕೃಶದ್ವೀಪ, ಕ್ರೌಂಚದ್ವೀಪ, ಶಾಕದ್ವೀಪ, ಪುಷ್ಕರದ್ವೀಪವೆಂದು ಯೇಳುದ್ವೀಪಾಂತರಗಳು. ಸಪ್ತಕುಲ ಪರ್ವತಂಗಳು ಎಂಬಲ್ಲಿ (ಶ್ಲೋ ॥ ಜಟರಾದ್ರಿರ್ಹೇಮಕೂಟ ರರುಣಾಶ್ಶೃಂಗಪರ್ವತೌ । ಪಾರ್ಯಾದ್ರೀರಜತಾದ್ರಿಶ್ಚ ಶಿತಾಖ್ಯಸ್ಸಪ್ತಪರ್ವತಾಃ ॥) ಎಂದು ಜಟರಾದ್ರಿ, ಹೇಮಕೂಟ, ಅರುಣಪರ್ವತ, ಶೃಂಗಪರ್ವತ, ಪಾರ್ಯಾದ್ರಿ, ರಜತಾದ್ರಿ, ಶಿತಾದ್ರಿ, ಯೆಂಬ ಯೇಳು ಕುಲಗಿರಿಗಳು. ಸಮಸ್ತ=ಬ

ಹಳವಾದ ನವಗ್ರಹಗಳು ಎಂಬಲ್ಲಿ (ಶ್ಲೋ ॥ ಆದಿತ್ಯರ್ವಂಗಳಸ್ಸೋ ಮೊ ಬುಧಶ್ಚೈವಬೃಹಸ್ಪತಿಃ । ಶುಕ್ರಶ್ಶನಿರಿತಿಪ್ರೋಕ್ತಃ ರಾಹುಃಕೇತುಃಪ್ರಕೀರ್ತಿತಾಃ ॥) ಸೂರ್ಯ, ಚಂದ್ರ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತುಗಳೆಂಬ ಒಂಭತ್ತು ಗ್ರಹಂಗಳು. ಹನ್ನೆರಡುರಾಶಿಗಳು ಎಂಬಲ್ಲಿ (ಶ್ಲೋ ॥ ಮೇಷೋವೃಷಾಚಮಿಥುನಂ ಕರ್ಕಟಸ್ಸಿಹ್ಮಕನ್ಯಕೆ । ತುಲಾವೃಶ್ಚಿಕಧನುಷೀ ಮಕರೋಕುಂಭಮೀನಕಾ ॥) ಎಂದು ಮೇಷ, ವೃಷಭ, ಮಿಥುನ, ಕರ್ಕಾಟಕ, ಕನ್ಯಾ, ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ, ಹನ್ನೆರಡು ರಾಶಿಗಳು. ತಾರಾಪಥಗಳೆಂಬಲ್ಲಿ (ಶ್ಲೋ ॥ ಅಶ್ವಿನೀಭರಣೀಚೈವ ಕೃತ್ತಿಕಾರೋಹಿಣೀತಥಾ । ಮೃಗಶೀರ್ಷಾರಿದ್ರಾಚೈವ ಪುನರ್ವಸುಪುಷ್ಯಾತಥಾ ॥ ಆಶ್ಲೇಷಾಚಮಖಾಪ್ಯೆಬ್ಬಾ ಚೋತ್ತರಾಹಸ್ತಮೇವಚ । ಚಿತ್ತ್ರಸ್ವಾತಿವಿಶಾಖಂಚ ಅನೂರಾಧಾಜ್ಯೇಷ್ಠಾಚಸಾ ॥ ಮೂಲಪೂರ್ವಾಷಾಢಶ್ಚೈವ ಉತ್ತರಶ್ರವಣಸ್ತಥಾ । ಧನಿಷ್ಠಾ ಶತಭಿಕ್ಪೂರ್ವಾಭಾದ್ರವೃಕ್ಷಂತಥೈವಚ ॥ ಉತ್ತರಾಭಾದ್ರಭಂಚೈವ ರೇವತೀಚಇತಿಸ್ಮೃತಾ । ಸಪ್ತವಿಂಶಂತಿನಕ್ಷತ್ರ ಮಿತ್ಯೇತೆವೃಕ್ಷಮೇವಚ॥) ಎಂದು ಇಪ್ಪತ್ತೇಳು ನಕ್ಷತ್ರಂಗಳೇ ಆದಿಯಾದ ಅರವತ್ತಾರುಕೋಟಿನಕ್ಷತ್ರಂಗಳು ಚರಿಸುವುದಕ್ಕೆ ಮಾರ್ಗವಾಗುಳ್ಳ ಆಕಾಶಮಂಡಲವನ್ನು ಗರ್ಭೀಕರಿಸಿಕೊಂಡು ಕವಳೀಕರಿಸಿಕೊಂಡು ಬ್ರಹ್ಮಾಂಡವೆಂದೆನಿಸಿತು. ಅಜಾಂಡವೆಂದು ಹೇಳಿಸಿಕೊಂಡಿತು. ಇದಕ್ಕಜಾಂಡವೆಂಬ ಅಭಿಧಾನವು ಏನುಕಾರಣಕ್ಕೆ ಬಂದಿತೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಬ್ರಹ್ಮನೇ ನಿರ್ಮಾಣವ ಮಾಡಿದಕಾರಣದಿಂದ ಈ ಬ್ರಹ್ಮಾಂಡವೆಂದು ಹೇಳಿಸಿಕೊಂಡಿತು. ಮತ್ತಂತುಮಲ್ಲದೆ ಪರಬ್ರಹ್ಮದಪ್ಪಣೆಯಿಂದ ಅಜನೇ ಪಡೆದು ರಚನೆಯ ಮಾಡಿದಕಾರಣದಿಂದಲೂ ಇದಕ್ಕಜಾಂಡವೆಂಬ ನಾಮವು ಪ್ರಸಿದ್ಧವಾಯಿತು. ಹೀಗೆಂದು ಹೇಳುವಂತಾ ಇದುತಾನೇ ಜಗದುತ್ಪತ್ಯದ ಭೇದ ಸದಾಶಿವನ ಸದ್ಯೋಜಾತಾದೀಶಾನಾಂತ್ಯವಾದ ಐದುವದನಂಗಳಿಂದೆ ಪುಟ್ಟಿದ ಪೃಥ್ವ್ಯಾದಿ ಪಂಚಭೂತಂಗಳೇ ಯೇಕೀಕರಿಸಿ ಚತುರ್ದಶ ಭುವನ ಚರಾಚರಪ್ರಾಣಿಗಳನುಳ್ಳ ವಿಶ್ವೋತ್ಪತ್ತಿಯಾದಂತ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ವಿಶ್ವೋತ್ಪತ್ತಿಯ ಸ್ಥಲ ೩ಕ್ಕೆ ಮಂಗಳಮಹಾ.

## ಪಿಂಡಸಂಗ್ರಹ.

ಇನ್ನು ಸದ್ಗುರುದೇವನು ಮುಮುಕ್ಷುವಾದ ಶಿಷ್ಯಂಗೆ ಪಿಂಡಸಂಗ್ರಹದ ಹಸಿಗೆಯನ್ನು ನಿರೂಪಿಸುತಿಹರು. ಅದೆಂತೆಂದೊಡೆ—ಪಿಂಡಸಂಗ್ರಹವು ಚತುರ್ದಶ ಭುವನಂಗಳೊಡನೆ ಕೂಡಿದ ಬ್ರಹ್ಮಾಂಡದಲ್ಲಿ ಎಂಭತ್ತುನಾಲ್ಕುಲಕ್ಷ ಪ್ರಕಾರವಾದ ಪಿಂಡಂಗಳ ಸಮೂಹವನ್ನುಂಟಾದೆಂತಾ ವಿಚಾರವನ್ನು ನಿರೂಪಿಸುತಿಹರು. ಮತ್ತಂತುಮಲ್ಲದೆ ಸ್ಥೂಲಬ್ರಹ್ಮಾಂಡದೊಳಗುಳ್ಳ ಗುಣಂಗಳೆಲ್ಲವೂ ಪಿಂಡದಲ್ಲಿಯೇ ಸೂಕ್ಷ್ಮರೂಪಿನಿಂದ ಅಡಗಿರುವಂತಾ ವಿಚಾರವನ್ನು ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಬ್ರಹ್ಮಾದಿಸ್ತಂಭಾತ್ಯಮಾದ ಪಿಂಡವೂ ಶಿವಾದ್ಯವನಿಪರ್ಯಂತಮಾದ ಅಜಾಂಡವೂ ಈ ಎರಡು ಒಂದೇ ಸ್ವರೂಪವಾಗಿರುತಿಹವು. ಅದು ಹ್ಯಾಗೆಂದೊಡೆ—ಪಿಂಡದ ಹೆಚ್ಚಿಲ್ಲ, ಬ್ರಹ್ಮಾಂಡ ಕಡಮೆಯಿಲ್ಲ, ಬ್ರಹ್ಮಾಂಡದ ಹೆಚ್ಚಿಲ್ಲ, ಪಿಂಡಾಂಡ ಕಡಮೆಯಿಲ್ಲ. ಅದು ಹ್ಯಾಗೆಂದೊಡೆ-ಪಿಂಡವು ಪಂಚಭೂತ ಪಂಚವಿಂಶತಿ ತತ್ವಾತ್ಮಕವಾದೆಂತಾದ್ದು. ಬ್ರಹ್ಮಾಂಡವು ಪಂಚಭೂತ ಪಂಚವಿಂಶತಿ ತತ್ವಾತ್ಮಕವಾದೆಂತಾದ್ದು. ಮತ್ತಂತುಮಲ್ಲದೆ ಪಿಂಡಕ್ಕೆ ಈಹೊತ್ತನ್ನೋದಕಂಗಳು ಯಥೇಚ್ಛವಾಗಿ ತೆಗದುಕೊಂಡಲ್ಲಿ ಈ ಹೊತ್ತಿಗೆ ಸಾಕುಯೆನಬಲ್ಲ, ನಾಳೇದಿವಸಕ್ಕೆ ತೆಗದುಕೊಳ್ಳಬೇಕೆಂಬ ಅಪೇಕ್ಷೆವುಂಟಾಗಿಹುದು. ಬ್ರಹ್ಮಾಂಡಕ್ಕೂ ಈ ಕಾಲ ಮಳೆಬೆಳೆಗಳು ಸಂತೃಪ್ತಿಯಾದಲ್ಲಿ ಈ ವರ್ಷಕ್ಕೆ ಸಾಕೆನಲಿಲ್ಲ, ಮುಂದಣವರುಷಕ್ಕೂ ಮಳೆ ಬೆಳೆಗಳಾಗಬೇಕೆಂಬ ಕಾಂಕ್ಷೆವುಂಟಾಗಿಹುದು. ಅದುಕಾರಣವಾಗಿ ಈ ಪಿಂಡ ಬ್ರಹ್ಮಾಂಡಗಳೆರಡಕ್ಕೂ ಆಶೆಯೊಂದೆಯಾದಕಾರಣ ಬ್ರಹ್ಮಾದಿ ಸ್ತಂಭಾತ್ಯಮಾದ ಪಿಂಡವೂ ಶಿವಾದ್ಯವನಿಪರ್ಯಂತಮಾದ ಅಜಾಂಡವೂ ಈ ಎರಡು ಒಂದೇ ಸ್ವರೂಪವಾಗಿಪ್ಪವು. ಹೀಗೆಂದು ಶೃತಿವಾಕ್ಯ ಹೇಳುತಿಹುದಾದಕಾರಣ ಸ್ಥೂಲ ಒಂದುಕೋಟಿ ಯೋಜನದಟ್ಟ, ನೂರುಕೋಟಿಯೋಜನದುದ್ದ, ಪಂಚಶತಕೋಟಿ ವಿಸ್ತೀರ್ಣ, ಒಂದು ಅರ್ಬುದಯೋಜನ ಸ್ಥೂಲಾಯುಮಾನವಾದ ಬ್ರಹ್ಮಾಂಡದೊಳಗುಂಟಾದ ಗುಣಂಗಳ ತತ್ವಂಗಳ ಆಶ್ರಯವು ಪಿಂಡದಲ್ಲಿ ಒಂದು ಮಾರು ಮೂರುವರೆಮೊಳ ತೊಂಭತ್ತಾರುಅಂಗುಲ ಪರಿಪ್ರಮಾಣವನ್ನುಳ್ಳ ಮನುಜ ದೇಹದೊಳಗೆಸೂಕ್ಷ್ಮರೂಪಿನಿಂದ ಪರಮಾಣುಸ್ವರೂಪಿನಿಂದ ಸಂಗ್ರಹಮಾಗಿ ಆ ಲೋಕದಲ್ಲಿ ಅಕ್ಷರ ಅಡಗಿದೆಹಾಗೆಯೂ, ಅಕ್ಷರದಲ್ಲಿ

ಅರ್ಥವೆಡಗಿರುವ ಹಾಗೆಯೂ, ಹೂಗಲಭಾಜನದಲ್ಲಿ ಸಕಲ ಸಾಧನದ್ರ
ವ್ಯಂಗಳಡಗಿರುವಹಾಗೆಯೂ, ಅಂಗಿ ಅರೆಚಾಪೆಗಳಲ್ಲವೆಯುವಂಗಳಡಗಿ
ರುವಹಾಗೆಯೂ, ಕಣಜಪಣಕಾದಿಗಳಲ್ಲಿ ಹದಿನೆಂಟು ಧಾನ್ಯಾದಿಗಳು ಅ
ಡಗಿರುವಹಾಗೆಯೂ, ಬತ್ತಳಿಕೆಯಲ್ಲಂಬುಗಳು ಅಡಗಿರುವಹಾಗೆಯೂ,
ಕೋರಿಶೆಟ್ಟಿಯ ಹೆಗಳ ಹಸುವಿಯಲ್ಲಿ ಗಂಧಕ ದ್ರವ್ಯಂಗಳಡಗಿರುವಹಾ
ಗೆ ಅಡಗಲ್ಪಟ್ಟವಾಗಿ ತೋರ್ಪುದು. ಪಿಂಡಮರ್‍ಯಾದೆಯಲ್ಲಿ ನೋಡಿದರೆ
ಕಾಣಬಾರದು. ಶಾಸ್ತ್ರಜ್ಞಾನಕ್ಕೆ ಅಷ್ಟಿಷ್ಟುಮಾತ್ರ ಕಾಣಬರುವುದು.
ಸ್ವಾತ್ಮಜ್ಞಾನಕ್ಕೆ ಪ್ರತ್ಯಕ್ಷವಾಗಿ ಕಾಣಬರುತಿಹುದು. ಆ ಅರಿಯಬರು
ವ ವಿಚಾರವು ಹ್ಯಾಗೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಶರೀರಂಗಳಿ
ಗೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಐದು ತತ್ವಂಗಳುಂಟಾ
ಗಿಪ್ಪವು. ಬ್ರಹ್ಮಾಂಡಗಳಿಗೆಯು ಪೃಥ್ವಿ, ಅಪ್ಪು, ತೇಜ, ವಾಯು, ಆಕಾ
ಶವೆಂಬೈದು ತತ್ವಂಗಳುಂಟಾಗಿರುತಿಹವು. ಮತ್ತಂತುಮಲ್ಲದೆ ಶರೀರಂಗ
ಳು ಪಂಚಭೂತ ಪಂಚವಿಂಶತಿ ತತ್ವಯುಕ್ತವಾದಂತಾದ್ದು, ಅಜಾಂಡಗ
ಳು ಪಂಚಭೂತ ಪಂಚವಿಂಶತಿ ತತ್ವಯುಕ್ತವಾದಂತಾದ್ದು, ಹೀಗೆಂದು
ಶೃತಿವಾಕ್ಯ ಹೇಳುತಿಹುದಾದಕಾರಣ ಆ ಪ್ರಸಿದ್ಧವಾದ ಪಂಚ=ಐದು
ಪ್ರಕಾರವಾದ, ಮಹತ್=ದೊಡ್ಡಿತ್ತಾದ, ಭೂತಂಗಳ=ತತ್ವಂಗಳ, ಪಂ
ಚಾಂಶಿತಮಂ=ಪಂಚಪಂಚಾಂಶಿತಂಗಳ ಸ್ವರೂಪವನ್ನು, ಪಂಚಾಕೃತಿಯ
ನ್ನೈದುತಿರಲು ಒಂದೊಂದುತತ್ವಂಗಳು ಒಂದೊಂದುತತ್ವಂಗಳಲ್ಲಿ ಕೂ
ಡಿ ಇಪ್ಪತ್ತೈದು ತತ್ವಂಗಳ ಸ್ವರೂಪವನ್ನು ಐದುತಿರಲು ದೇಹವಾಯಿ
ತು. ಒಂದು ಮೊರೆಮೂರುವರೆಮೊಳ ಎಂಟುಗೇಣು ತೊಂಭತ್ತಾರಂಗು
ಲ ಪ್ರಮಾಣವನುಳ್ಳ ಶರೀರವು ಆತ್ಮಂಗೆ ಸಂಬಂಧವಾಯಿತು ಎಂಬುದು
ಸರಿ. ಮತ್ತಂತುಮಲ್ಲದೆ ಐದು ತತ್ವಯುಕ್ತವಾದ ಶರೀರವು ಆತ್ಮಂ
ಗೆ ವ್ಯಕ್ತಿಕರವಾಯಿತು. ಆ ಪ್ರಸಿದ್ಧವಾದ ಭೂತಂಗಳು ಐದು ತ
ತ್ವಂಗಳು ಆವಾವೆಂದೊಡೆ, ಅವುತಾವೆಂತಾವೆಲೆ ಸ್ವಾಮಿಯೆಂದು ಬೆಸ
ಗೊಂಡೊಡೆ—ಸರ್ವಾಧಾರಮಯವಾದ ಧರಣೀತತ್ವವು, ಸರ್ವಪಾನ್ಯ
ಪ್ರಕ್ಷಾಳನರೂಪವಾದ ಉದಕತತ್ವವು, ಸರ್ವದಾಹಕ ಪಾಚಕರೂಪ
ವಾದ ಧನಂಜಯತತ್ವವು, ಸರ್ವಚಾಂಚಲ್ಯಮಯವಾದ ಸಮೀರತತ್ವ
ವು ಸರ್ವಾವಕಾಶಪ್ರದವಾದಂಬರತತ್ವವು ಈ ಪ್ರಕಾರದಿಂದ ಹೇಳಲ್ಪ
ಟ್ಟಂತಾ ಇವುತಾವೇ ಐದುಪ್ರಕಾರವಾದ ತತ್ವಂಗಳ ಅಭಿಧಾನಂಗಳು.

ಈ ಪಂಚಮಹಾಭೂತಂಗಳ ಅಂಶಿಕ ಸಾಂಪ್ರದಾಯವಾದ ತತ್ವಂಗಳು ಆವಾವೆಂದೊಡೆ ಅವುತಾವೆಂತಾವೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಆ ವಿಚಾರವನ್ನು ಮುಂದೆ ಗ್ರಂಥೋಕ್ತವಾಗಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಅಸ್ಥಿ=ಶಲ್ಯವು, ಮಾಂಸ=ಪಲಲವು, ತ್ವಕ್ಕು=ನಾಡಿ, ನರಗಳು, ರೋಮ=ನವಿರುಗಳೆಂದು, ಏವಂ=ಈಪ್ರಕಾರದಿಂದ, ಅಂತು=ಹಾಗೆ, ಪಂಚಕಂ=ಈ ಐದು, ಕ್ಷಿತಿ=ಪೃಥ್ವಿಯು, ಪಂಚಗುಣಾಃ=ಈ ಐದು ಗುಣಂಗಳು, ಪ್ರೋಕ್ತಾಃ=ಹೇಳಲ್ಪಟ್ಟವು, ಸಃ=ಆ ಗುಣವು, ಅಂಶಃ=ಪೃಥ್ವ್ಯಂಶಗುಣಂಗಳೆಂದು, ಪ್ರ=ವಿಶೇಷವಾಗಿ, ಕೀರ್ತಿತಃ=ಹೇಳಲ್ಪಟ್ಟಿತು, ಇದಕ್ಕೆ ಮುಂದೆ ವಿಸ್ತಾರವಾಗಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ದೇಹಕ್ಕಾಸ್ಪದವಾಗಿ ಸರ್ವಾಂಗದಲ್ಲಿ ಕಠಿಣಮಯವಾಗಿರುವಂತ ಶಲ್ಯಾದಿಗಳು ಸರ್ವಾಂಗದಲ್ಲಿ ತೊಡಂಚಿತೊಡಂಬೆಯಾಗಿ ಮುದ್ದೆಮುದ್ದೆಯಾಗಿ ಗೊಂಚಗೊಂಚಲಾಗಿರುವಂತ ಪಲಲಂಗಳು ಒಂದಾನೊಂದು ಹುರುಳಿ ಸ್ವಾಲೆಯೋಪಾದಿಯಲ್ಲಿ ಅರೆಪಾದದಿಂದ ಹಿಡಿದು ನಡುನೆತ್ತಿಪರಿಯಂತರವು ಮೇಲುಹೊದಿಕೆಯಾಗಿ ಹೊದಿಸಿಕೊಂಡಿರುವಂತತ್ವಕ್ಕೂ, ಅಸ್ಥಿಗಳ ಸಂದುಗಳವಾರೆಯಾಗದಹಾಗೆ ಬಗ್ಗದಹಾಗೆ ಒಂದಾನೊಂದು ಬೀವಗಟ್ಟನ ಮರಿಯಾದೆಯಲ್ಲಿ ಸರ್ವಾಂಗವನು ಬಂಧಿಸಿಕೊಂಡಿರುವಂತ ನರಗಳು, ಬಹಿರ್ವಳಯದಲ್ಲಿ ಅಲಂಕಾರವಾಗಿರುವಂತ ಎಂಟುಕೋಟಿನವಿರುಗಳು, ಈ ಐದು ಪೃಥ್ವಿಯಿಂದ ಆದವು. ಇವು ಪೃಥ್ವಿಯಿಂದ ಹುಟ್ಟಿದ ಗುಣಂಗಳೆಂದು ಹ್ಯಾಗೆ ತಿಳಿಯಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಪೃಥ್ವಿಯು ಕಠಿಣಮಯವಾದಂತಾದ್ದು, ಈ ಗುಣಂಗಳು ಕಠಿಣಸ್ವರೂಪವಾದಂತಾವು, ಅದುಕಾರಣವಾಗಿ ಈ ಐದು ಪೃಥ್ವಿಯಿಂದ ಹುಟ್ಟಿದ ಗುಣಂಗಳೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು. ಲಾಲಾ=ಕಫವು, ಮೂತ್ರ=ಅಂಗದ ದುರ್ಜಲವು, ಪಿತ್ತ=ಪಿತ್ತವು, ಶುಕ್ಲ=ವೀರ್ಯವು, ಶೋಣಿತ=ರಕ್ತವು, ಏವಂ=ಈ ಪ್ರಕಾರದಿಂದ, ಅಪಾಂ=ಅಪ್ಪುವಿನ, ಪಂಚಗುಣಾಃ=ಐದು ಗುಣಗಳು, ಪ್ರೋಕ್ತಾಃ=ಹೇಳಲ್ಪಟ್ಟವು. ಆತ್ಮ ಹಸಿಗೆಯಬಲ್ಲಂತ ತತ್ವಜ್ಞಾನಿಗಳು ತಿಳಿದುಕೊಂಬುವುದು. ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಕೆಮ್ಮಿ ಕೆಕ್ಕರಿಸಿ ಉಗುಳಿದಲ್ಲಿ ಒಂದಾನೊಂದು ಅತ್ತಿಯ ತೊಳೆಯೋಪಾದಿಯಲ್ಲಿ

ಎರಟಿ, ತೊರಟಿ, ಗಲ್ಲೆಗಲ್ಲೆ, ಮುದ್ದೆಮುದ್ದೆಯಾಗಿ ಬಿದ್ದುಹೋಗುವಂತಾ ಕಫವು ಅದು ಶರೀರದಲ್ಲಿ ಆರುಮಾನ ಪ್ರಮಾಣದಿಂದಿಹುದು. ಒಂದಾನೊಂದು ಹರಿದಾಸನ ಬಗಲುಗಳ ತಿತ್ತಿಯೋಪಾದಿಯಲ್ಲಿ ಒಂದು ದಿವಸಕ್ಕೆ ಹತ್ತೆಂಟುವೇಳೆ ಬಿದ್ದುಹೋಗುವಂತಾ ದುರ್ಜಲವು ಅದು ಶರೀರದಲ್ಲಿ ಮಿತವಿಲ್ಲದೆ ಇರುತಿಹುದು. ತಲೆತಿರಿಗಿ ಕಣ್ಣು ಕತ್ತಲೆಗೂಡಿಸಿ ಸರ್ವಾಂಗವೆಲ್ಲಾ ಬೆವೆತು ವಾಂತಿಯಾದಲ್ಲಿ ಹಳದಿ, ಹಸುರು, ಕಪ್ಪು, ಕೆಂಪು, ಬಿಳಿದಿನೊಡನೆಕೂಡಿ ಬಿದ್ದುಹೋಗುವಂತಾದ್ದು. ಅದು ದೇಹದಲ್ಲಿ ಮೂರುಮಾನ ಪ್ರಮಾಣದಿಂದಿಹುದು. ಸರ್ವಾಂಗದಲ್ಲಿಯೂ ಕಾಂತಿವೆತ್ತಾಗಿ ಧೈರ್ಯಮಯವಾಗಿರುವಂತಾ ಜನನ ಧೃತಿಯು ಅದು ಶರೀರದಲ್ಲಿ ಒಂದುಸೊಲಿಗೆ ಪ್ರಮಾಣದಿಂದಿಹುದು. ಸರ್ವಾಂಗದಲ್ಲಿಯೂ ತ್ರಾಣಮಯವಾಗಿ ಕಳಾಸ್ವರೂಪಿನಿಂದಿರುವಂತಾ ಶೋಣಿತವು ಅದು ದೇಹದಲ್ಲಿ ಆರುಬಳ್ಳಪ್ರಮಾಣದಿಂದಿರುತಿಹುದು. ಈ ಐದು ಅಪ್ಪುವಿನಿಂದಲೇ ಆದವು. ಇವು ಅಪ್ಪುವಿನಿಂದ ಹುಟ್ಟಿದ ಗುಣಂಗಳೆಂದು ಹ್ಯಾಗೆ ತಿಳಿದುಕೊಳ್ಳಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅಪ್ಪು ಮೃದುಮಯವಾದಂತಾದ್ದು, ಈ ಗುಣಗಳು ಮೃದುಸ್ವರೂಪವಾದಂತಾವು, ಅದುಕಾರಣವಾಗಿ ಈ ಅಪ್ಪುವಿನಿಂದ ಹುಟ್ಟಿದ ಗುಣಂಗಳೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಕ್ಷುಧಾ=ಹಸಿವು, ತೃಷೆ=ನೀರಡಿಕೆಯು, ತಥಾ=ಹಾಗೆ, ನಿದ್ರೆ=ದೇಹದ ಅತಿಜಾಡ್ಯೆಯು, ಆಲಸ್ಯ=ದೇಹದ ತಂದ್ರತ್ವವು, ಸಂಗ=ಸ್ತ್ರೀಗೋಷ್ಠಿಯು, ಏವಂ=ಈ ಪ್ರಕಾರದಿಂದೇ, ಅಗ್ನೇಃ=ತೇಜಸ್ತತ್ವದ, ಪಂಚಗುಣಾಃ=ಐದು ಗುಣಂಗಳು, ಪ್ರೋಕ್ತಾಃ=ಹೇಳಲ್ಪಟ್ಟವು, ತೇ=ಆ ಗುಣಗಳು, ಅಂಶಾಃ=ಅಗ್ನ್ಯಂಶ ಗುಣಂಗಳೆಂದು, ಪ್ರ=ವಿಶೇಷವಾಗಿ, ಕೀರ್ತಿತಾಃ=ಹೇಳಲ್ಪಟ್ಟವು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿಹರು. ಕ್ಷುಧೆ=ದೇವಾನ್ನ, ದಿವ್ಯಾನ್ನ, ದಧ್ಯನ್ನ, ದುಗ್ಧಾನ್ನ, ಹರಿದ್ರಾನ್ನ, ಮುಗ್ಧಾನ್ನ, ಗುಡಾನ್ನ, ಘೃತಾನ್ನ ಮೊದಲಾದ ಮೃಷ್ಟಾನ್ನಂಗಳು ತೆಗದುಕೊಳ್ಳಬೇಕೆಂಬ ಉದರಾಗ್ನಿಯಾತುರವು, ತೃಷೆ=ಶೀತಳ, ಶಿವದಾನ, ಎಳೆಯಗ್ಗಣಿ, ಕಬ್ಬಿನಹಾಲು, ಪಾನಕ, ಪನ್ನೀರು ಮೊದಲಾದ ಪಾನ್ಯದ್ರವ್ಯಂಗಳನ್ನು ತೆಗದುಕೊಳ್ಳಬೇಕೆಂಬ ನೀರಡಿಕೆಯು, ನಿದ್ರೆ=ಬೆಕ್ಕುಕಂಡ ಇಲಿಯೋಪಾದಿಯಲ್ಲಿ ಅನ್ಯೋದಕಂಗಳನ್ನು ಯಥೇಚ್ಛವಾಗಿ ತೆಗದುಕೊಂ

ಡು ಬಂದಾನೊಂದು ಹೂಡಿಬಿಟ್ಟ ಕುಂಟೆಯ ದಿಂಡಿನಹಾಗೆಯೂ, ತರಿದು ಕೆಡವಿದ ಸ್ಥಾಣುವಿನಹಾಗೆಯೂ, ಚೌಳಪೇರ ಕೆಡಹಿದ ಕೋಣನ ಹಾಗೆಯೂ, ತುರುಕರವುನೆಯ ಹೆಣದಹಾಗೆಯೂ, ದಿವಾಕಾಲ ನಿಶಾಕಾಲಂಗಳಲ್ಲಿ ವಡಗೆಡದು ಮಲಗಿರುವಂತಾ ದೇಹದತಿಜಾಯಿಸುವು, ಆಲಸ್ಯ=ನಿದ್ರೆ ತೀರಿ ಎದ್ದು ಕುಳಿತುಕೊಂಡು ಒಂದಾನೊಂದು ಎರೆಕೊಂಡ ಹಾವಿನ ಹಾಗೆಯೂ, ಎಡಬಲಕೆ ಮೈಯಿ ಕೈ ವಡೆಮುರಿಯಲ್ಪಟ್ಟ ದೇಹದ ತಂದ್ರತ್ವವು, ಆಹಾರದಿಂ ನಿದ್ರೆ, ನಿದ್ರೆಯಿಂ ಕರಣಂಗಳುಪಟಲಗಳು, ಕರಣಂಗಳುಪಟಲದಿಂದ ಮನ್ಮಥವಿಕಾರ ವೆಗ್ಗಳಿಸಿ ತರ್ಜನೆ ವಿಡಂಬನೆ, ಘರ್ಷಣ, ತಾಡನೆ, ಆಲಿಂಗನೆ, ತರ್ಕ, ಚುಂಬನಾದಿಗಳಿಂದ ರತಿಸಂಗ ಸುಖವ ಸುಖಿಸುವಂತಾ ಸ್ತ್ರೀಗೋಷ್ಠಿಯು ಈ ಐದು ಅಗ್ನಿಯಿಂದಲೇ ಆದವು. ಇವು ಅಗ್ನಿಯಿಂದ ಹುಟ್ಟದ ಗುಣಂಗಳೆಂದು ಹ್ಯಾಗೆ ತಿಳಿಯಬೇಕೆಲೆಸ್ವಾಮಿಯೆಂದು ಬೆಸಗೊಂಡೊಡೆ—ಆ ಅಗ್ನಿಯು ಉಷ್ಣಮಯವಾದಂತಾದ್ದು, ಈ ಗುಣಂಗಳು ಉಷ್ಣಸ್ವರೂಪವಾದಂತಾವು; ಅದುಕಾರಣವಾಗಿ ಈ ಐದು ಅಗ್ನಿತತ್ವದಿಂದ ಪುಟ್ಟಿದ ಗುಣಂಗಳೆಂದೇ ತಿಳಿದುಕೊಳ್ಳುವದು ತತ್ವಜ್ಞಾನಿಗಳು. ಧಾವನಂ=ಪರಿವ, ವಲ್ಗನಂ=ಪಾರುವ, ಏವಂ=ಈಪ್ರಕಾರದಿಂದ, ಕುಂಚನಂಚ=ಸುಳಿವ, ಪ್ರಚಾರಣಂ=ಕೂಡುವ, ವಿಯೋಗಃ=ಅಗಲುವ, ಇತಿ=ಈಪ್ರಕಾರದಿಂದೇ, ವಿ=ವಿಶೇಷವಾಗಿ, ಜ್ಞೇಯಂ=ತಿಳಿದುಕೊಳ್ಳುವದು, ವಾಯೋಃ=ವಾರುತನ, ಪಂಚಗುಣಾಃ=ಐದು ಗುಣಂಗಳು, ಸ್ಮೃತಾಃ=ಹೇಳಲ್ಪಟ್ಟವು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಪರಿವ=ಒಬ್ಬಾನೊಬ್ಬ ವಾಯುವಿಕಾರಿಯಾದ ಪುರುಷನು ದಟ್ಟ ಚೆಲ್ಲಣವನ್ನುಟ್ಟುಕೊಂಡು ನಾಮ ಮೊದಲಾದ ತಿಲಕವನಿಟ್ಟುಕೊಂಡು, ಸರ್ವಾಂಗಕ್ಕೆ ಗೀರ್ಗಂಧವಂ ಪೂಸಿಕೊಂಡು, ಕಾಲಲ್ಲಿ ಬಿಗಿಬಾರೆಕ್ಕಡವ ಮೆಟ್ಟುಕೊಂಡು ಕೈಯಲ್ಲಿ ಹರಿಗೆ ಕತ್ತಿಯಂ ಪಿಡಿದುಕೊಂಡು ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮವೆಂಬ ನಾಲ್ಕು ದಿಕ್ಕಿನೊಳಗೆ ತನ್ನ ಮನಬಂದಕಡೆಗೆ ನಿಬ್ಬೆರಗಿಟ್ಟುಕೊಂಡೋಡುತಿಹನು. ಹಾರುವ ಹಾಗೆ ಓಡುವಂತಾ ಸ್ಥಾನದಲ್ಲಿ ಸಣ್ಣಸಣ್ಣ ತಗ್ಗು ತಿಟ್ಟು ಗುಲ್ಮ ಲತೆಗಳಂ ಕಂಡಲ್ಲಿ ಒಂದಾನೊಂದು ತುರಂಗದೋಪಾದಿಯಲ್ಲಿ ಕುಪ್ಪಕುಪ್ಪಳಿಸಿ ನೆಗವುತ್ತಿಹನು. ಸುಳಿವ=ಮುಂದೆ ಸಮನಾದ ಭೂಮಿಯುಕಂಡರೆ

ಒಂದಾನೊಂದು ಗೋಲತಿರಗುವ ಘೋಟಕನೋಪಾದಿಯಲ್ಲಿ ಬೈಸುಬೈ ಸೆಂಬ ಶಬ್ದರವಸದೊಡನೆ ಕೂಡಿ ವೃತ್ತಾಕಾರವಾಗಿ ಸುತ್ತುತಿಹನು, ಕೂಡುವ=ಮುಂದೆಹೋಗುವ ಆತ್ಮರುಗಳ ಓಡಿಹೋಗಿ ಕೂಡಿಕೊಳ್ಳ ಬೇಕೆನುತಿಹನು, ಅಗಲುವ=ಅಲ್ಲಿಯ ಮನಸ್ಸು ಸಮಾಧಾನವಾಗದೆ ಇ ದ್ದಲ್ಲಿ ಒಂದಾನೊಂದು ಹೇರಂಡಬೀಜ ಕಡೆಗಣಕೆ ಸಿಡಿದಹಾಗೆಯೂ, ಗ ಜ್ಜುಗ ಸಿಡಿದಹಾಗೆಯೂ, ಕೈಯೊಳಗಣ ಕಡಲೆಯು ಹಾರುವಡದಹಾಗ ಯೂ,ಅಲ್ಲಿಂದಲೂ ಬಿಟ್ಟು ಮುಂದಕ್ಕೆ ಏರಿ ಸಾರಿಹೋಗುತ್ತಿಹನು. ಈ ಐದು ವಾಯುವಿನಿಂದಲೇ ಆದವು. ಮಾರುತನಿಂದ ಹುಟ್ಟಿದ ಗುಣಂಗಳೆಂ ದು ಹ್ಯಾಗೆ ತಿಳಿದುಕೊಳ್ಳಬೇಕೆಲೆಸ್ವಾಮಿ ಎಂದು ಬೆಸಗೊಂಡೊಡೆ— ವಾಯುವು ಚಾಂಚಲ್ಯಮಯವಾದಂತಾದ್ದು, ಈ ಗುಣಂಗಳು ಚಂಚಲ ಸ್ವರೂಪವಾದಂತಾವು, ಅದುಕಾರಣವಾಗಿ ಈ ಐದು ವಾಯುವಿನಿಂದ ಹುಟ್ಟಿದ ಗುಣಂಗಳೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು. ರಾ ಗ=ಬಯಕೆಯು, ದ್ವೇಷ=ಸಿಟ್ಟು, ಭಯ=ಭೀತಿಯು, ಲಜ್ಜೆ=ಅಭಿಮಾ ನವು, ಮೋಹ=ಮಮಕಾರವು, ಏವಂ=ಈ ಪ್ರಕಾರದಿಂದ, ಯಥಾ=ಹ್ಯಾ ಗೆ, ಮುಂದೆ ನಾಲ್ಕು ತತ್ವಂಗಳಿಗೆ ಐದೈದು ಗುಣಂಗಳುಂಟಾಗಿಪ್ಪವೋ, ತಥಾ=ಹಾಗೆ, ನಭಸಃ=ಆಕಾಶಕ್ಕೆ, ಪಂಚಗುಣಾಃ=ಐದು ಗುಣಂಗ ಳುಂಟಾಗಿಪ್ಪವೆಂದು, ಪ್ರೋಕ್ತಾಃ=ಹೇಳಲ್ಪಟ್ಟವು, ತೇ=ಆ ಗುಣಗಳು, ಅಂಶಾಃ=ಆಕಾಶದಂಶ ಗುಣಂಗಳಾಗಿಪ್ಪವೆಂದು, ಪ್ರಕೀರ್ತಿತಾಃ=ಹೇಳ ಲ್ಪಟ್ಟವು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿ ಹರು. ಅದು ಹ್ಯಾಗೆಂದೊಡೆ—ಒಬ್ಬಾನೊಬ್ಬ ಯಾಚಕನು ಆವುದಾ ನೊಂದು ವಸ್ತುವನ್ನು ಕಣ್ಣಿನಲ್ಲಿಕಂಡು ಮನದಲ್ಲಿ ಇಚ್ಛೈಸಿ ಬಾಯಿ ತೆರದು ಬೇಡುವಂತಾ ಬಯಕೆಯೇ ರಾಗವು. ದ್ವೇಷ=ಆ ವಸ್ತುವ ನ್ನು ಕೊಟ್ಟರೆ ಸಂತೋಷವಾಗಿ ಕೊಡದೆ ಇದ್ದರೆ ನಾನು ಒಂದು ವ ಸ್ತುವನ್ನು ಬೇಡಿದೆನು, ಅವನು ಕೊಡದೆ ಹೋದನು, ನಾನೇ ಒಂದು ಹೊನ್ನಂಬಿನಹಾಗೆಯೂ, ಅವನೇ ಒಂದು ನೀರಿನಹಾಗೆಯೂ, ಹಂಚಿ ಗೆ ಹಲ್ಲತೆರದಂತಾಯಿತು, ಬೆಟ್ಟಕ್ಕೆ ಲೊಟಕೆಯ ಹಾಕಿದಂತಾಯಿತು, ಹೊನ್ನಂಬ ತಿಪ್ಪೆಯಲ್ಲಿಚ್ಛೈಹಾಂಗಾಯಿತು, ನಿಸ್ಸೈಶ್ವರ್ಯವು ದೇವೇಂ ದ್ರನೈಶ್ವರ್ಯವು ನೀರಿನಲ್ಲಿ ನೆರದೋದಹಾಂಗೆ ಹೋಗಲಿ. ನಾರಾಯಣ ನ ದ್ವಾರಾವತೀ ಪಟ್ಟಣವು ನೀರಿನಲ್ಲಿ ನೆರದೋದಹಾಂಗೆ ಹೋಗಲಿ.

ಧೂಳು ಹೊಯ್ದು ಶಪಿಸುವಂತಾದ್ದೇ ದ್ವೇಷವು. ಭಯವು (ಶ್ಲೋ॥ ದೇಹಭಗ್ನಗತಿರ್ಮಂದಂ ಸ್ವರಹೀನಂಮಹಾಭಯಂ । ಮರಣಂಯಾಂತಿ ಚಿಹ್ನಾನಿ ದಾನಸನ್ನಿಧಿಯಾಚಕಾಃ॥) ಒಬ್ಬನೊಬ್ಬ ಯಾಚಕ ಪುರುಷನು ದಾನವಂ ಕೊಡುವಂತಾ ದಾತನ ಎಡೆಗೈಯ್ದುವಲ್ಲಿ ಬೀಳಲ್ಪಟ್ಟಂತಾ ದೇಹವುಳ್ಳವನಾಗಿ ತಾ ನಡೆಯುದಿಗಿದಾತನಮುಂದೆ ನಡಿಯಲಮ್ಮದವನಾಗುತ್ತಾ ಮರಣವನ್ನೈದುವ ಆತ್ಮನ ಕುರುಹುಳ್ಳಾತನಾಗಿ ಅತ್ಯಂತ ಭೀತಿಯೊಡನೆಹೋಗಿ ಅಪ್ಪಾ! ಉಂಬುವದಕ್ಕಿಲ್ಲ, ಉಡುವದಕ್ಕಿಲ್ಲ, ಸಾಲಬಂತು, ಸೋಲಬಂತು, ಮದುವೆಯಾಗಬೇಕು, ಮುಂಜಿಯಾಗಬೇಕು, ಹೊನ್ನಕೊಡಿ, ವರಹವ ಕೊಡಿಎಂದು ಕೇಳಿದಲ್ಲಿ ಅವರು ನಿನಗೇನಾಯ್ತೋ, ಕುಂಟೆಯು ದಿಂಡಿನಹಾಗಿದ್ದೀ, ಗಾಣದೆಕಣೆಯಾಗಿದ್ದೀ, ಶೀಳಿದರೆ ಇಬ್ಬರಾದಿಯಲ್ಲೋ, ಒಬ್ಬರ ಮನೆಯಲ್ಲಿ ಬ್ಯಾಸಾಯ ಮಾಡಬಾರದೇ, ಸಂಬಳಕ್ಕಿರಬಾರದೇ, ಕೊಟ್ಟಣವ ಕುಟ್ಟಿ ಕೂಲಿಯ ತರಬಾರದೆ, ನಿನ್ನ ಸರಿಯ ಗಂಡಸರಮುಂದೆ ಕಾಶೆವಿಾಸೆಯ ಪತ್ತಿಕೊಂಡುಬಂದು ಹ್ಯಾಗೆ ಕೇಳುತ್ತಿದ್ದೀಯೋ ಎಂದು ಹೀನಮಾನವೆತ್ತಿ ನುಡಿದಲ್ಲಿ ತಲೆಯಕುತ್ತಿ ನೆಲನ ಬರೆಯಲ್ಪಟ್ಟಂತಾ ಅಭಿಮಾನವೇ ಲಜ್ಜೆಯು. ಮೋಹ=ಅಷ್ಟರೊಳಗೆ ಆ ಪುರುಷನಿಗೆ ವಿಚಾರ ತಲೆದೋರಿ ತನ್ನಿಚ್ಛೆ, ಬಡಪ್ರಾಣಿ, ಆಳುದ್ದ ಶರೀರವ ಗೇಣುದ್ದ ಮಾಡಿಕೊಂಡುಬಂದು ಕೇಳಿದನು, ದೇಹಿ ಎಂದಲ್ಲಿ ನಾಸ್ತಿ ಎನಬಾರದೆಂದು ಏನಾದರಬಿಟ್ಟಿಷ್ಟುಮಾತ್ರವ ಕೊಟ್ಟು ಸತ್ಕರಿಸಿ ಕಳುಹಿದಲ್ಲಿ ತಾನುಂಡುಟ್ಟು ಪರಿಣಮಿಸದೆ ದಾನ ಧರ್ಮವ ಮಾಡದೆ ತನ್ನ ಸತಿಸುತಾದಿಗಳಿಗೂಕೊಡದೆ ಒಂದುಗಂಟು ಹಾಕುವಲ್ಲಿ ಒಂಭತ್ತು ಗಂಟುಹಾಕಿ ಅತ್ಯಂತ ಮಮತೆಯಿಂದೆ ಬಚ್ಚಿಟ್ಟು ಮಡಗಿಕೊಂಡಿರುವದೇ ಮೋಹ. ಈ ಐದು ಅಂಬರತತ್ವದಿಂದಲೇ ಹುಟ್ಟಿದ ಗುಣಂಗಳು. ಇವು ಅಂಬರತತ್ವದಿಂದ ಹುಟ್ಟಿದ ಗುಣಂಗಳೆಂದು ಹ್ಯಾಗೆ ತಿಳಿದುಕೊಳ್ಳಬೇಕೆಲೆಸ್ವಾಮಿ ಎಂದು ಬೆಸಗೊಂಡೊಡೆ—ಆಕಾಶದಲ್ಲಿ ತೋರಿದ ಮೇಘ ಮಂಜು ಮೊದಲಾದ ಗುಣಗಳು ಆಗತೋರಿ ಬೇಗ ಅಡಗುತಿಹವು. ಈ ಗುಣಂಗಳು ಆತ್ಮಾಕಾಶದ ಮಧ್ಯದಲ್ಲಿ ಆಗತೋರಿ ಬೇಗ ಅಡಗುತಿಹವಾದಕಾರಣ ಈ ಐದು ಆತ್ಮಾಕಾಶದಿಂದ ಹುಟ್ಟಿದ ಗುಣಂಗಳೆಂದೇ ತಿಳಿದುಕೊಳ್ಳುವುದು ತತ್ವಜ್ಞಾನಿಗಳು. ಈಪ್ರಕಾರದಿಂದ, ಪಂಚ=ಐದುಪ್ರಕಾರವಾದ, ಮಹತ್=

ದೊಡ್ಡದಾದ, ಭೂತಂಗಳಿಂದ=ತತ್ವಗಳಿಂದ, ಪಂಚವಿಂಶತಿಗುಣಾಃ=ಇ ಪ್ಪತ್ತೈದು ತತ್ವಂಗಳಾದವು, ಪಂಚಮುಖ ಭೂತಂಗಳಿಗೆ ವಿಭೇದ ಗುಣಂಗಳುಂಟು, ತಾರತಮ್ಯವಾಗಿ ಹೆಚ್ಚುಕಡಮೆಯಾಗಿರುವಂತಾ ಗುಣಗಳುಂಟು. ಅವು ಯಾವಾವೆಂದೊಡೆ—ಅವು ತಾವೆಂತಾವೆಲೆಸ್ವಾಮಿ ಎಂದು ಬೆಸಗೊಂಡೊಡೆ: ಸರ್ವಾಧಾರಮಪ್ಪಂತಾದ ಧರಣೀತತ್ವಕ್ಕೆ ಇಪ್ಪತ್ತೈದು ಗುಣವು ಪಂಚವಿಂಶತಿ ತತ್ವಂಗಳೇ ಪ್ರಸಿದ್ಧವಾಗಿರುತಿಹವು, ತಾವೇತಾವೆಲೆಸ್ವಾಮಿ ಎಂದು ಬೆಸಗೊಂಡೊಡೆ—ಪೃಥ್ವಿಗೆ ಆಯ ಶಕಟ ಮುಸಲಾದಿಗಳ ಸಂಘಟನೆಯಿಂದ ಹುಟ್ಟುವಂತಾ ಗಡಗಡ ಎಂಬ ಶಬ್ದವುಂಟು. ಆ ಶಬ್ದಗುಣವಿದ್ದಲ್ಲಿ ಆಕಾಶತತ್ವವುಂಟು. ಆ ಆಕಾಶತತ್ವವಿದ್ದಲ್ಲಿ ಆಕಾಶತತ್ವ ಸಂಬಂಧವಾದ ರಾಗಾದಿ ಐದುಗುಣಂಗಳುಂಟು; ಮತ್ತಮಾ ಪೃಥ್ವಿಗೆ ಮುಟ್ಟಿದರೆ ಬಿರಸಾಗಿ ತಟ್ಟುವಂತಾ ಕಠಿಣ ಸ್ಪರ್ಶನವುಂಟು. ಸ್ಪರ್ಶನಗುಣವಿದ್ದಲ್ಲಿ ವಾಯುತತ್ವವುಂಟು. ವಾಯುತತ್ವವಿದ್ದಲ್ಲಿ ಆ ವಾಯುತತ್ವ ಸಂಬಂಧವಾದ ಧಾವನಾದಿ ಐದು ಗುಣಂಗಳುಂಟು. ಮತ್ತಮಾ ಪೃಥ್ವಿಗೆ ಸಾಕಾರವಾದ ರೂಪುಂಟು. ಆ ರೂಪುಗುಣವಿದ್ದಲ್ಲಿ ಅಗ್ನಿತತ್ವವುಂಟು. ಅಗ್ನಿತತ್ವವಿದ್ದಲ್ಲಿ ಆ ಅಗ್ನಿತತ್ವ ಸಂಬಂಧವಾದ ಕ್ಷುಧಾದಿ ಐದು ಗುಣಂಗಳುಂಟು. ಮತ್ತಮಾ ಪೃಥ್ವಿಗೆ ಮಧುರ ರಸವುಂಟು. ರಸಗುಣವಿದ್ದಲ್ಲಿ ಅಪ್ಪುತತ್ವವುಂಟು. ಆ ಅಪ್ಪುತತ್ವವಿದ್ದಲ್ಲಿ ಅಪ್ಪುತತ್ವ ಸಂಬಂಧವಾದ ಶ್ಲೇಷ್ಮಾದಿ ಐದು ಗುಣಂಗಳುಂಟು. ಮತ್ತಮಾ ಪೃಥ್ವಿಗೆ ಸದ್ಗಂಧವುಂಟು. ಗಂಧಗುಣವಿದ್ದಲ್ಲಿ ಮೂಲಪೃಥ್ವೀತತ್ವವುಂಟು. ಮೂಲಪೃಥ್ವೀತತ್ವವಿದ್ದಲ್ಲಿ ಆ ಮೂಲ ಪೃಥ್ವೀತತ್ವ ಸಂಬಂಧವಾದ ಶಲ್ಯಾದಿ ಐದು ಗುಣಂಗಳುಂಟು. ಅಂತು ಐದು ಗುಣಂಗಳು ಪಂಚವಿಂಶತಿ ಗುಣಂಗಳೆಂದೇ ಧರಣೀತತ್ವಕ್ಕೆ ಪ್ರಸಿದ್ಧವಾಗಿರುತಿಹವು. ಸರ್ವಪಾನ್ಯಪ್ರಕ್ಷಾಳನರೂಪಮಾದುದಕತತ್ವಕ್ಕೆ ವಿಶಂತಿ ಗುಣಗಳೇ ಪ್ರಸಿದ್ಧವಾಗಿರುತಿಹವು. ಅವಾವೆಂದೊಡೆ—ಅಪ್ಪುವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದವುಂಟು. ಶಬ್ದಗುಣವಿದ್ದಲ್ಲಿ ಆಕಾಶತತ್ವವುಂಟು. ಆಕಾಶತತ್ವವಿದ್ದಲ್ಲಿ ಆಕಾಶತತ್ವಸಂಬಂಧವಾದ ರಾಗಾದ್ಯೈದು ಗುಣಂಗಳುಂಟು. ಮತ್ತಮಾ ಅಪ್ಪುವಿಂಗೆ ಶೈತ್ಯಸ್ಪರ್ಶನವುಂಟು. ವಾಯುತತ್ವವಿದ್ದಲ್ಲಿ ಆ ವಾಯುತತ್ವ ಸಂಬಂಧವಾದ ಧಾವನ್ಯೈದುಗುಣಂ

ಗಳುಂಟು. ಮತ್ತಮಾ ಅಪ್ಪುವಿಂಗೆ ನೀಲಾದಿ ವಿಚಿತ್ರವರ್ಣದ ರೂಪುಂಟು. ರೂಪುಗುಣವಿದ್ದಲ್ಲಿ ಅಗ್ನಿತತ್ವವುಂಟು. ಅಗ್ನಿತತ್ವವಿದ್ದಲ್ಲಿ ಆ ಅಗ್ನಿತತ್ವ ಸಂಬಂಧವಾದ ಕ್ಷುಧಾದ್ಯೈದುಗುಣಂಗಳುಂಟು. ಮತ್ತಮಾ ಅಪ್ಪುವಿಂಗೆ ಸ್ವಾದರಸವುಂಟು. ಆ ಸ್ವಾದರಸಗುಣವಿದ್ದಲ್ಲಿ ಮೂಲ ಅಪ್ಪುತತ್ವವುಂಟು. ಮೂಲ ಅಪ್ಪುತತ್ವವಿದ್ದಲ್ಲಿ ಆ ಮೂಲ ಅಪ್ಪುತತ್ವ ಸಂಬಂಧವಾದ ಶ್ಲೇಷ್ಮಾದ್ಯೈದುಗುಣಂಗಳುಂಟು. ಮತ್ತಮಾ ಅಪ್ಪುವಿಂಗೆ, ಹೈಗ, ಗುಗ್ಗುಳ, ಜಾಲ, ಹಾಲಮಡ್ಡಿ, ಲೋಬಾನ, ಕುಮುಂಜನ ಮೊದಲಾದ ಧೂಪಂಗಳ ಭಾವನೆವನೆಕೊಟ್ಟಲ್ಲಿ, ಮೊಲ್ಲೆ, ಮಲ್ಲಿಗೆ, ಇರವಂತಿಗೆ, ಶಾವಂತಿಗೆ, ಸಂಪಿಗೆ, ಜಾಜಿ, ಪಾದ್ರಿ, ಪಾರಿಜಾತ ಮೊದಲಾದ ಪುಷ್ಪಂಗಳನ್ನು ಲಾವಂಚ ಮುಡಿವಾಳದ ಬೇರುಗಳಂ ಹಾಕಿದಲ್ಲಿ ಸದ್ಗಂಧ ಹುಟ್ಟುವುದಲ್ಲದೆ ಅದಕ್ಕೆ ಸ್ವಾಯವಾದ ಗಂಧಗುಣವಿಲ್ಲ. ಗಂಧಗುಣವಿಲ್ಲದಿದ್ದಲ್ಲಿ ಪೃಥ್ವೀತತ್ವವಿಲ್ಲ. ಪೃಥ್ವೀತತ್ವವಿಲ್ಲದಿದ್ದಲ್ಲಿ ಆ ಪೃಥ್ವೀತತ್ವ ಸಂಬಂಧವಾದ ಶಲ್ಯಾದ್ಯೈದು ಗುಣಂಗಳಿಲ್ಲ. ಅಂತೈದು ಗುಣ ಕಡಮೆಯಾದಲ್ಲಿ ಮುಂದೆ ಅಪ್ಪುತತ್ವಕ್ಕೆ ನಾಲ್ಕೈದುಗಳು ವಿಂಶತಿ ಗುಣಂಗಳೇ ಪ್ರಸಿದ್ಧವಾಗಿರುತಿಹವು. ಸರ್ವದಾಹಕ ಪಾಚಕರೂಪವಾದ ಧನಂಜಯತತ್ವಕ್ಕೆ ಹದಿನೈದುಗುಣವು ಪಂಚದಶ ಗುಣಂಗಳೇ ಪ್ರಸಿದ್ಧವಾಗಿರುತಿಹವು. ಅವಾವೆಂದೊಡೆ—ಅಗ್ನಿಗೆ ತೃಣಪುಂಜಗಳನಾವರಿಸಿ ಸುಡುವಲ್ಲಿ ಹುಟ್ಟುವ ಪಟಲ್, ಪಟಪಟ, ಭುಗಿಲ್, ಚಟಚಟ, ಧಗಧಗ, ಥಳಥಳ ಎಂಬ ಶಬ್ದವುಂಟು. ಆ ಶಬ್ದಗುಣವಿದ್ದಲ್ಲಿ ಆಕಾಶತತ್ವವುಂಟು. ಆಕಾಶತತ್ವವಿದ್ದಲ್ಲಿ ಆಕಾಶತತ್ವ ಸಂಬಂಧವಾದ ರಾಗಾದ್ಯೈದುಗುಣಂಗಳುಂಟು. ಮತ್ತಮಾ ಅಗ್ನಿಗೆ ಉಷ್ಣಸ್ಪರ್ಶನವುಂಟು. ಸ್ಪರ್ಶಗುಣವಿದ್ದಲ್ಲಿ ವಾಯುತತ್ವವುಂಟು. ವಾಯುತತ್ವವಿದ್ದಲ್ಲಿ ವಾಯುತತ್ವ ಸಂಬಂಧವಾದ ಧಾವನಾದ್ಯೈದು ಗುಣಂಗಳುಂಟು. ಮತ್ತಮಾ ಅಗ್ನಿಗೆ ಪ್ರಭಾವರ್ಣದ ರೂಪುಂಟು. ರೂಪುಗುಣವಿದ್ದಲ್ಲಿ ಮೂಲ ಅಗ್ನಿತತ್ವವುಂಟು. ಮೂಲ ಅಗ್ನಿತತ್ವವಿದ್ದಲ್ಲಿ ಆ ಮೂಲ ಅಗ್ನಿತತ್ವ ಸಂಬಂಧವಾದ ಕ್ಷುಧಾದ್ಯೈದು ಗುಣಂಗಳುಂಟು. ಮತ್ತಮಾ ಅಗ್ನಿಗೆ ಹಸಿಯ ಕಾಷ್ಠಂಗಳಂ ಹಾಕಿದಲ್ಲಿ ರಸ ಹುಟ್ಟುವುದಲ್ಲದೆ ಅದಕ್ಕೆ ಸ್ವಾಯವಾದ ರಸಗುಣವಿಲ್ಲ. ರಸಗುಣವಿಲ್ಲದಿದ್ದಲ್ಲಿ ಅಪ್ಪುತತ್ವವಿಲ್ಲ. ಅಪ್ಪುತತ್ವವಿಲ್ಲದಿದ್ದಲ್ಲಿ ಅಪ್ಪುತತ್ವ ಸಂಬಂಧ

ವಾದ ಶ್ಲೇಷ್ಮಾದ್ಯೈದು ಗುಣಂಗಳಿಲ್ಲ. ಮತ್ತಮಾ ಅಗ್ನಿಗೆ ಹೈಗ, ಗುಗ್ಗುಳ, ಜಾಲ, ಹಾಲಮಡ್ಡಿ ಮೊದಲಾದ ಧೂಪಂಗಳಂ ಹಾಕಿದಲ್ಲಿ ಶ್ರೀಗಂಧದಚಕ್ಕೆ ಮೊದಲಾದ ಪರಿಮಳ ದ್ರವ್ಯಂಗಳಂ ಹಾಕಿದಲ್ಲಿ ಸದ್ಗಂಧ ಹುಟ್ಟುವುದಲ್ಲದೆ ಅದಕ್ಕೆ ಸ್ವಯವಾದ ಗಂಧವಿಲ್ಲ. ಗಂಧಗುಣವಿಲ್ಲದಿದ್ದಲ್ಲಿ ಪೃಥ್ವೀತತ್ವವಿಲ್ಲ. ಪೃಥ್ವೀತತ್ವವಿಲ್ಲದಿದ್ದಲ್ಲಿ ಆ ಪೃಥ್ವೀತತ್ವ ಸಂಬಂಧವಾದ ಶಲ್ಯಾದ್ಯೈದು ಗುಣಂಗಳಿಲ್ಲ. ದಶವಿಧಗುಣ ಕಡಮೆಯಾಗಿ ಹೋಗಲು, ಮುಂದೆ ಮೂರೈದುಗಳು ಪಂಚದಶ ಗುಣಂಗಳೇ ಅಗ್ನಿತತ್ವಕ್ಕೆ ಪ್ರಸಿದ್ಧವಾಗಿರುತಿಹವು. ಸರ್ವಚಾಂಚಲ್ಯಮಯವಾದ ಸಮೀರತತ್ವಕ್ಕೆ ಹತ್ತುಗುಣ, ದಶವಿಧಗುಣಂಗಳೇ ಪ್ರಸಿದ್ಧವಾಗಿರುತಿಹವು. ಅವಾವೆಂದೊಡೆ—ವಾಯುವಿಂಗೆ ತರು, ಭಿತ್ತಿ, ಶಿಲಾದಿಗಳಮೇಲೆ ಬೀಸಿದಲ್ಲಿ ಹುಟ್ಟುವಂತಾ ಭಿಸ್ಸೆಂಬ ಶಬ್ದವುಂಟು. ಶಬ್ದಗುಣವಿದ್ದಲ್ಲಿ ಆಕಾಶತತ್ವವುಂಟು. ಆಕಾಶತತ್ವವಿದ್ದಲ್ಲಿ ಆಕಾಶತತ್ವ ಸಂಬಂಧವಾದ ರಾಗಾದ್ಯೈದು ಗುಣಂಗಳುಂಟು. ಮತ್ತಮಾ ವಾಯುವಿಂಗೆ ಅನುಷ್ಣಸೀತ ಸ್ಪರ್ಶನವುಂಟು. ಸ್ಪರ್ಶನಗುಣವಿದ್ದಲ್ಲಿ ಮೂಲವಾಯುತತ್ವವುಂಟು. ಮೂಲ ವಾಯುತತ್ವವಿದ್ದಲ್ಲಿ ಆ ಮೂಲ ವಾಯುತತ್ವ ಸಂಬಂಧವಾದ ಧಾವನಾದ್ಯೈದು ಗುಣಂಗಳುಂಟು. ಮತ್ತಮಾ ವಾಯುವಿಂಗೆ ಸಾಕಾರವಾದ ರೂಪಿಲ್ಲ. ರೂಪು ಗುಣವಿಲ್ಲದೆ ಇದ್ದಲ್ಲಿ ಅಗ್ನಿತತ್ವವಿಲ್ಲ. ಅಗ್ನಿತತ್ವವಿಲ್ಲದಿದ್ದಲ್ಲಿ ಆ ಅಗ್ನಿತತ್ವ ಸಂಬಂಧವಾದ ಕ್ಷುದಾದ್ಯೈದು ಗುಣಂಗಳಿಲ್ಲ. ಮತ್ತಮಾ ವಾಯುವಿಂಗೆ ದೊಡ್ಡದೊಡ್ಡ ನದಿಗಳಮೇಲೆ ದೊಡ್ಡದೊಡ್ಡ ತಟಾಕಾದಿಗಳಮೇಲೆ ಬೀಸಿಬಂದು ತಟ್ಟಿದಲ್ಲಿ ತುಂತುರುಮನಿ ದ್ರವಹುಟ್ಟುವುದಲ್ಲದೆ ಅದಕ್ಕೆ ಸ್ವಯವಾದ ರಸವಿಲ್ಲ. ರಸಗುಣವಿಲ್ಲದಿದ್ದಲ್ಲಿ ಅಪ್ಪುತತ್ವವಿಲ್ಲ. ಅಪ್ಪುತತ್ವವಿಲ್ಲದಿದ್ದಲ್ಲಿ ಆ ಅಪ್ಪುತತ್ವ ಸಂಬಂಧವಾದ ಶ್ಲೇಷ್ಮಾದ್ಯೈದು ಗುಣಂಗಳಿಲ್ಲ. ಮತ್ತಮಾ ವಾಯುವಿಂಗೆ ದೊಡ್ಡದೊಡ್ಡ ವನಾಂತರಗಳಮೇಲೆ ಪರಿಮಳದಿಂಗಡಿ ಪುಷ್ಪಂಗಳಲ್ಲಿರುವಂತಾ ತೋಟದಮೇಲೆ ಬೀಸಿಬಂದು ತಟ್ಟಿದಲ್ಲಿ ಸದ್ಗಂಧ ಹುಟ್ಟುವುದಲ್ಲದೆ ಅದಕ್ಕೆ ಸ್ವಯವಾದ ಗಂಧವಿಲ್ಲ. ಗಂಧಗುಣವಿಲ್ಲದಿದ್ದಲ್ಲಿ ಪೃಥ್ವೀತತ್ವವಿಲ್ಲ. ಪೃಥ್ವೀತತ್ವವಿಲ್ಲದಿದ್ದಲ್ಲಿ ಆ ಪೃಥ್ವೀತತ್ವ ಸಂಬಂಧವಾದ ಕಠಿಣಾದ್ಯೈದು ಗುಣಂಗಳಿಲ್ಲ. ಪಂಚದಶ ಗುಣಂಗಳು ಕಡಮೆಯಾಗಿಹೋಗಲು ಮುಂದೆ ವಾಯುತತ್ವಕ್ಕೆ ದಶವಿಧ

ಗುಣಂಗಳೇ ಪ್ರಸಿದ್ಧವಾಗಿರುತಿಹವು. ಆಕಾಶಕ್ಕೆ ಸರ್ವಾವಕಾಶಪ್ರದ ವಾದ ಅಂಬರತತ್ವಕ್ಕೆ ಐದುಗುಣ, ಪಂಚವಿಧ ಗುಣಂಗಳೇ ಪ್ರಸಿದ್ಧ ವಾಗಿರುತಿಹವು. ಅವಾವೆಂದೊಡೆ—ಆಕಾಶಕ್ಕೆ ಗಡಗಡವೆಂಬ ಶಬ್ದ ವುಂಟು. ಶಬ್ದಗುಣವಿದ್ದಲ್ಲಿ ಮೂಲಾಕಾಶತತ್ವವುಂಟು. ಮೂಲಾ ಕಾಶತತ್ವವಿದ್ದಲ್ಲಿ ಆ ಮೂಲಾಕಾಶ ಸಂಬಂಧವಾದ ರಾಗಾದ್ಯೈದು ಗು ಣಂಗಳುಂಟು. ಮತ್ತವಾ ಆಕಾಶಕ್ಕೆ ಸ್ಪರ್ಶವಿಲ್ಲ. ಸ್ಪರ್ಶಗುಣವಿಲ್ಲ ದಿದ್ದಲ್ಲಿ ವಾಯುತತ್ವವಿಲ್ಲ. ಆ ವಾಯುತತ್ವವಿಲ್ಲದಿದ್ದಲ್ಲಿ ಆ ವಾಯುತ ತ್ವಸಂಬಂಧವಾದ ಧಾವನಾದ್ಯೈದು ಗುಣಂಗಳಿಲ್ಲ. ಮತ್ತವಾ ಆಕಾ ಶಕ್ಕೆ ಸಾಕಾರವಾದ ರೂಪಿಲ್ಲ. ರೂಪು ಗುಣವಿಲ್ಲದಿದ್ದಲ್ಲಿ ಅಗ್ನಿತತ್ವವಿ ಲ್ಲ. ಆ ಅಗ್ನಿತತ್ವವಿಲ್ಲದಿದ್ದಲ್ಲಿ ಅಗ್ನಿತತ್ವ ಸಂಬಂಧವಾದ ಕ್ಷುದಾದ್ಯೈ ದು ಗುಣಂಗಳಿಲ್ಲ. ಮತ್ತವಾ ಆಕಾಶಕ್ಕೆ ರಸವಿಲ್ಲ. ರಸಗುಣವಿಲ್ಲದಿ ದ್ದಲ್ಲಿ ಅಪ್ಪುತತ್ವವಿಲ್ಲ. ಅಪ್ಪುತತ್ವವಿಲ್ಲದಿದ್ದಲ್ಲಿ ಆ ಅಪ್ಪುತತ್ವ ಸಂಬಂ ಧವಾದ ಶ್ಲೇಷ್ಮಾದ್ಯೈದು ಗುಣಂಗಳಿಲ್ಲ. ಮತ್ತವಾ ಆಕಾಶಕ್ಕೆ ಸ ದ್ಗಂಧವಿಲ್ಲ. ಗಂಧಗುಣವಿಲ್ಲದಿದ್ದಲ್ಲಿ ಪೃಥ್ವೀತತ್ವವಿಲ್ಲ. ಪೃಥ್ವೀತತ್ವ ವಿಲ್ಲದಿದ್ದಲ್ಲಿ ಆ ಪೃಥ್ವೀತತ್ವ ಸಂಬಂಧವಾದ ಶಲ್ಯಾದ್ಯೈದು ಗುಣಂಗ ಳಿಲ್ಲ. ವಿಂಶತಿ ಗುಣಂಗಳು ಕಡಮೆಯಾಗಿಹೋಗಲು ಮುಂದಾಕಾಶತ ತ್ವಕ್ಕೆ ಪಂಚವಿಧಗುಣಂಗಳೇ ಪ್ರಸಿದ್ಧವಾಗಿರುತಿಹವು. ಈ ಪ್ರಕಾರ ದಿಂದ ಹೇಳಲ್ಪಟ್ಟಂತಾ ವಿಭೇದಗುಣಂಗಳು ಹೆಚ್ಚು ಕಡಮೆಯಾಗಿ ತಾರತಮ್ಯವಾಗಿರುವಗುಣಂಗಳು. ತತ್ವಂಗಳು ಕೂಡಲಾಗಿ ಎಪ್ಪ ತ್ತೈದು ಗುಣಂಗಳಾದವು. ಎಪ್ಪತ್ತೈದು ತತ್ವಂಗಳೇ ಗಣಿತಕ್ಕೆ ಬಾದವು. ಹೀಗೆಂಬ ಹೇಳುವಂತಾ ಇದುತಾನೇ ಪಿಂಡಸಂಗ್ರಹದ ಭೇದವು ಚತುರ್ದಶ ಭುವನಂಗಳೊಡನೆ ಕೂಡಿದ ಬ್ರಹ್ಮಾಂಡದಲ್ಲಿ ಎಂ ಭತ್ತುನಾಲ್ಕುಲಕ್ಷ ಪ್ರಕಾರವಾದ ಪಿಂಡಗಳ ಸಮೂಹವು ಉಂಟಾದಂ ತಾ ವಿಚಾರವು ಎಂಬುದು ಸರಿ. ಮತ್ತಂತಮಲ್ಲದೆ ಸ್ಥೂಲ ಬ್ರಹ್ಮಾಂ ಡದೊಳಗುಳ್ಳ ಗುಣಂಗಳಾಶ್ರಯವೆಲ್ಲವೂ ಪಿಂಡದಲ್ಲಿ ಅತಿಸೂಕ್ಷ್ಮರೂಪಿ ನಿಂದ ಅಡಗಿರ್ಪುವಂತಾ ಹಸಿಗೆಯ ವಿಚಾರವು ಎಂಬುದೀಗ ಪಿಂಡಸಂಗ್ರ ಹವೆಂಬ ಶಬ್ದಕರ್ಥವು.

ಅಂತು ಸ್ಥಲ ೪ಕ್ಕೆ ಮಂಗಳಮಹಾ.



## ಪಂಚಭೂತಗಳ ಸ್ವರೂಪವು.

ಅನ್ನು ಸದ್ಗುರುದೇವನು ತಚ್ಛಿಷ್ಯನಿಗೆ ಐದು ಪ್ರಕಾರವಾದ ಭೂತಂಗಳ ಸ್ವರೂಪವನ್ನು ನಿರೂಪಿಸುತಿಹರು. ಅದೆಂತೆಂದೊಡೆ— ಇನ್ನು ತದನಂತರದಲ್ಲಿ ಪಂಚ=ಐದುಪ್ರಕಾರವಾದ, ಮಹತ್=ದೊಡ್ಡಿತಾದ, ಭೂತಂಗಳ=ತತ್ವಂಗಳ, ಪಂಚೀಕೃತಿಗಳು=ಪಂಚಪಂಚೀಕೃತಿಗಳು, ಆವಾವೆಂದೊಡೆ—ಅವುತಾವೆಂತಾವೆಲೆಸ್ವಾಮಿಯೆಂದು ಬೆಸಗೊಂಡೊಡೆ—ಪರಮೇಶ್ವರಾಗಮದೊಳಗಣ ಶಾಖಾಗನುಪೇ ವಿಜಯಭೈರವಿ ವೆಂಬುವದೊಂದು ಶಿವಾಗಮವು. ಆ ಆಗಮದೊಳಗೆ ಗ್ರಂಥೋಕ್ತವಾಗಿ ನಿರೂಪಿಸುತಿಹರು. ಆ ಆಗಮದೊಳಗಣ ತತ್ವಪಟಲವೆಂಬುವದೊಂದುಪಟಲವುಂಟು. ಆ ಪಟಲದೊಳಗಣವಾಕ್ಯವನ್ನೇ ಗ್ರಂಥೋಕ್ತವಾಗಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಚಿತ್ತಂಚ=ಚಿತ್ತವೆಂಬುವದೊಂದು ಕರಣವು, ಪ್ರಾಣವಾಯುಃ=ಪ್ರಾಣವಾಯುವೆಂಬುವದೊಂದು ಮಾರುತನು, ನಾಸಿಕಂ=ನಾಸಿಕವೆಂಬುವದೊಂದು ಜ್ಞಾನೇಂದ್ರಿಯವು, ಗಂಧ=ಗಂಧವಿಷಯವೆಂಬುವದೊಂದು ತನ್ಮಾತ್ರೆಯು, ಏವಂ=ಈಪ್ರಕಾರದಿಂದೇ, ಪಾಯುಃ=ಗುದವೆಂಬುವದೊಂದು ಕರ್ಮೇಂದ್ರಿಯವು, ಪಂಚವಿಧಂ=ಐದುತೆರನೆಂದು, ಪ್ರೋಕ್ತಂ=ಹೇಳಲ್ಪಟ್ಟಿತು, ಇತ್ಯೈತೆ=ಇವಾಯಿತಾದೊಡೆ, ಭೂಮಿಪಂಚಕಃ=ಪೃಥ್ವಿಯ ಪಂಚಕೃತಿಗಳು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು, ಧರಣಿಯೇ ಪಾಯುವೇಂದ್ರಿಯವು, ಗುದವೆನಿಸಿಕೊಂಬುವದೊಂದು ಕರ್ಮೇಂದ್ರಿಯವು, ಅದು ಹ್ಯಾಗೆಂದೊಡೆ ಪೃಥ್ವಿಯದೊಂದಂಶವು ತನ್ನ ಮೂಲಪೃಥ್ವಿಯಲ್ಲಿ ಬೆರೆಯಲು ಆ ಮೂಲಪೃಥ್ವಿಯಲ್ಲಿಯೇ ಬೆರೆದ ಪೃಥ್ವಿಯಂಶಗುಣದಿಂದೇ ಗುದವೆನಿಸಿಕೊಂಬುವದೊಂದುಕರ್ಮೇಂದ್ರಿಯವು ಪುಟ್ಟಿತು. ಅದುತಾನೇ ಪೃಥ್ವೀತತ್ವದೊಳಗಣ ಪೃಥ್ವೀತತ್ವವೆಂದೇ ತಿಳಿದುಕೊಂಬುವದು. ಪೃಥ್ವಿಯಲ್ಲಿ ಯುದಕತತ್ವವೇ ಗಂಧವೆನಿಸಿಕೊಂಬುವದೊಂದು ತನ್ಮಾತ್ರೆಯು. ಅದು ಹ್ಯಾಗೆಂದೊಡೆ—ಅಪ್ಪುವಿನೊಂದಂಶವು ಪೃಥ್ವಿಯಲ್ಲಿ ಬೆರೆಯಲು ಆ ಪೃಥ್ವಿಯಲ್ಲಿ ಬೆರೆದಪ್ಪುವಿನಂಶ ಗುಣದಿಂದೇ ಗಂಧವಿಷಯವೆನಿಸಿಕೊಂಬುವದೊಂದು ತನ್ಮಾತ್ರೆಯು ಪುಟ್ಟಿತು. ಅದುತಾನೇ ಪೃಥ್ವೀತತ್ವದೊಳಗಣ ಅಪ್ಪುತತ್ವವೆಂದೇ ತಿಳಿದುಕೊಂಬುವರು ತತ್ವಜ್ಞಾನಿಗಳು. ಧರಣಿಯೊಳಗಣ ತೇಜಸ್ತತ್ವವೇ ಘ್ರಾಣೇಂ

ದ್ರಿಯವು. ನಾಸಿಕವೆಂಬುವದೊಂದು ಜ್ಞಾನೇಂದ್ರಿಯವು ಪುಟ್ಟಿತು. ಅದು ಹ್ಯಾಗೆಂದೊಡೆ—ಅಗ್ನಿಯದೊಂದಂಶವು ಪೃಥ್ವಿಯಲ್ಲಿ ಬೆರೆಯಲು ಆ ಪೃಥ್ವಿಯಲ್ಲಿ ಬೆರದ ಅಗ್ನ್ಯಂಶಗುಣದಿಂದೇ ನಾಸಿಕವೆಂಬುವದೊಂದು ಜ್ಞಾನೇಂದ್ರಿಯವು ಪುಟ್ಟಿತು. ಅದುತಾನೇ ಪೃಥ್ವೀತತ್ವದೊಳಗಣ ಅಗ್ನಿತತ್ವವೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಧರಣಿಯೊಳಗಣ ಮಾರುತನೇ ಪ್ರಾಣವಾಯು, ಪ್ರಾಣವೆನಿಸಿಕೊಂಬುವದೊಂದು ಮಾರುತನು. ಅದು ಹ್ಯಾಗೆಂದೊಡೆ—ವಾಯುವಿನದೊಂದಂಶವು ಪೃಥ್ವಿಯಲ್ಲಿ ಬೆರೆಯಲು, ಆ ಪೃಥ್ವಿಯಲ್ಲಿಬೆರೆದ ವಾಯುವಿನಂಶಗುಣದಿಂದೇ ಪ್ರಾಣವಾಯುವೆನಿಸಿಕೊಂಬುವದೊಂದು ಮಾರುತನು ಪುಟ್ಟಿತು. ಅದುತಾನೇ ಪೃಥ್ವೀತತ್ವದೊಳಗಣ ವಾಯುತತ್ವವೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಧರಣಿಯೊಳಗಣ ಅಂಬರತತ್ವವು, ಚಿತ್ತಂ=ಚಿತ್ತವೆಂಬುವದೊಂದು ಕರಣವು ಪುಟ್ಟಿತು ಅದು ಹ್ಯಾಗೆಂದೊಡೆ—ಆಕಾಶದೊಂದಂಶವು ಪೃಥ್ವಿಯಲ್ಲಿ ಬೆರೆಯಲು. ಆ ಪೃಥ್ವಿಯಲ್ಲಿ ಬೆರದ ಅಂಬರದಂಶಗುಣದಿಂದೇ ಚಿತ್ತವೆಂಬುವದೊಂದು ಕರಣವುಪುಟ್ಟಿತು. ಅದುತಾನೇ ಪೃಥ್ವೀತತ್ವದೊಳಗಣ ಆಕಾಶತತ್ವವೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ ಧರಣೀತತ್ವದೊಳಗಣ ಪಂಚಭೂತಂಗಳು. ಅದು ಹ್ಯಾಗೆಂದೊಡೆ—ಪಂಚಭೂತಂಗಳಂಶಗುಣಂಗಳು ಒಂದೊಂದು ಪೃಥ್ವಿಯಲ್ಲಿ ಬೆರೆಯಲು, ಆ ಪೃಥ್ವಿಯಲ್ಲಿಬೆರೆದ ಪಂಚಭೂತಂಗಳಂಶಗುಣದಿಂದೇ ಈ ಪಂಚತತ್ವಂಗಳು ಪುಟ್ಟಿದವು. ಇವುತಾವೇ ಪೃಥ್ವೀತತ್ವದೊಳಗಣ ಪಂಚಭೂತಂಗಳೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಬುದ್ಧಿಃ=ಬುದ್ಧಿಯೆಂಬುವದೊಂದುಕರಣವು, ಅಪಾನವಾಯುಃ=ಅಪಾನವಾಯುವೆಂಬ ಒಂದು ಮಾರುತನು, ಜಿಹ್ವಾ=ಜಿಹ್ವೆಯೆಂಬುವದೊಂದು ಜ್ಞಾನೇಂದ್ರಿಯವು, ರಸಃ=ರಸವೆಂಬುವದೊಂದು ವಿಷಯವು, ಏವಂ=ಈ ಪ್ರಕಾರದಿಂದೇ, ಗುಹ್ಯಂ=ಗುಹ್ಯವೆನಿಸಿಕೊಂಬುವದೊಂದು ಕರ್ಮೇಂದ್ರಿಯವು,ಪಂಚವಿಧಃ=ಐದುತೆರನೆಂದು, ಪ್ರೋಕ್ತಃ=ಹೇಳಲ್ಪಟ್ಟಿತು, ಇತ್ಯೇತ=ಇವಾಯಿತ್ತಾದೊಡೆ, ಜಲಪಂಚಕಂ=ಅಪ್ಪುವಿನ ಪಂಚೀಕೃತಿಗಳು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು. ಅಪ್ಪುತತ್ವದೊಳಗಣ ಧರಣಿಯೇ ಗುಹ್ಯೇಂದ್ರಿಯ ಗೋಪ್ಯವೆಂಬುವದೊಂದು ಕರ್ಮೇಂದ್ರಿಯವು. ಅದು

ಹ್ಯಾಗೆಂದೊಡೆ—ಪೃಥ್ವಿಯದೊಂದಂಶವು ಅಪ್ಪುವಿನಲ್ಲಿಬೆರೆಯಲು ಆ ಅಪ್ಪುವಿನಲ್ಲಿಬೆರೆದ ಪೃಥ್ವ್ಯಂಶಗುಣದಿಂದೇ ಗುಹ್ಯವೆಂಬುವದೊಂದು ಕರ್ಮೇಂದ್ರಿಯವುಪುಟ್ಟಿತು. ಅದುತಾನೇ ಅಪ್ಪುತತ್ವದೊಳಗಣ ಪೃಥ್ವೀತತ್ವವೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಇದೇರೀತಿಯಲ್ಲಿ ಮುಂದೆ ನಾಲ್ಕುತತ್ವಂಗಳನ್ನು ತಿಳಿದುಕೊಂಬುವದು. ಈ ಪ್ರಕಾರದಿಂದಹೇಳಲ್ಪಟ್ಟಂತಾ ಇವುತಾವೇ ಉದಕದ ಪಂಚೀಕೃತಿಗಳು. ಅವೆಂತೆಂದೊಡೆ—ಪಂಚಭೂತಗಳಂಶಗುಣಂಗಳು ಒಂದು ಅಪ್ಪುವಿನಲ್ಲಿಬೆರೆಯಲು ಆ ಅಪ್ಪುವಿನಲ್ಲಿಬೆರೆದ ಪಂಚಭೂತಂಗಳಂಶಗುಣದಿಂದೇ ಈ ಪಂಚಭೂತಂಗಳು ಪುಟ್ಟಿದವು. ಇವುತಾವೇ ಅಪ್ಪುತತ್ವದೊಳಗಣ ಪಂಚಭೂತಂಗಳೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಅಹಂಕಾರಃ=ಅಹಂಕಾರವೆಂಬುವದೊಂದು ಕರಣ, ವ್ಯಾನವಾಯುಃ=ವ್ಯಾನವಾಯುವೆಂಬುವದೊಂದು ಮರುತನು, ನೇತ್ರಂ=ನಯನವೆಂಬುವದೊಂದು ಜ್ಞಾನೇಂದ್ರಿಯವು, ರೂಪಂ=ರೂಪುವೆನಿಸಿಕೊಂಬುವದೊಂದು ವಿಷಯವು, ತಥಾ=ಹಾಗೆ, ಏವಂ=ಈ ಪ್ರಕಾರದಿಂದೆ, ಪಾದೌ=ಚರಣವೆನಿಸಿಕೊಂಬುವದೊಂದು ಕರ್ಮೇಂದ್ರಿಯವು, ಪಂಚವಿಧಃ=ಐದುತೆರನೆಂದು, ಪ್ರೋಕ್ತಃ=ಹೇಳಲ್ಪಟ್ಟಿತು, ಇತ್ಯೇತೇ=ಇವಾಯಿತ್ತಾದೊಡೆ, ಅಗ್ನಿಪಂಚಕಃ=ಪಾವಕನ ಪಂಚೀಕೃತಿಗಳು ಇದಕ್ಕೆ ಮುಂದೆ ವ್ಯಾಖ್ಯಾನವಾಗಿನಿರೂಪಿಸುತಿಹರು- ಅಗ್ನಿಯಲ್ಲಿಯಪೃಥ್ವಿ ಪಾದೇಂದ್ರಿಯವು, ಅಗ್ನಿಯಲ್ಲಿಯಅಪ್ಪು ರೂಪು, ಅಗ್ನಿಯಲ್ಲಿಯಅಗ್ನಿ ನೇತ್ರೇಂದ್ರಿಯವು, ಅಗ್ನಿಯಲ್ಲಿಯವಾಯು ವ್ಯಾನವಾಯು, ಅಗ್ನಿಯಲ್ಲಿಯಆಕಾಶ ಅಹಂಕಾರವು, ಇವುತಾವೇ ಅಗ್ನಿಪಂಚೀಕೃತಿಗಳು ತೇಜಸ್ತತ್ವದೊಳಗಣ ಪಂಚಭೂತಂಗಳು. ಅದು ಹ್ಯಾಗೆಂದೊಡೆ—ಪಂಚಭೂತಂಗಳಂಶಗುಣಂಗಳುಬಂದು ಒಂದಗ್ನಿಯಲ್ಲಿ ಬೆರೆಯಲು, ಆ ಅಗ್ನಿಯಲ್ಲಿಬೆರೆದ ಪಂಚಭೂತಂಗಳಂಶಗುಣದಿಂದೇ ಈ ಪಂಚತತ್ವಂಗಳು ಪುಟ್ಟಿದವು. ಇವುತಾವೇ ಅಗ್ನಿತತ್ವದೊಳಗಣ ಪಂಚಭೂತಂಗಳೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಮನಃ=ಮನವೆಂಬುವದೊಂದು ಕರಣವು, ಉದಾನಃ=ಉದಾನವೆಂಬುವದೊಂದು ಮರುತನು, ಚರ್ಮ=ತ್ವಕ್ಕೆಂಬುವದೊಂದು ಜ್ಞಾನೇಂದ್ರಿಯವು, ಸ್ಪರ್ಶಃ=ಸ್ಪರ್ಶನವಿಷಯವೆಂಬುವದೊಂದು ತನ್ಮಾತ್ರೆಯು, ತಥಾ=ಹಾಗೆ, ಏವಂ= ಈ ಪ್ರಕಾರದಿಂದೇ, ಪಾಣಿಃ=ಹಸ್ತವೆಂಬುವದೊಂದು ಕರ್ಮೇಂದ್ರಿಯವು,

ಪಂಚವಿಧಃ=ಐದುತೆರನೆಂದು, ಪ್ರೋಕ್ತಃ=ಹೇಳಲ್ಪಟ್ಟತು, ಇತ್ಯೇತೇ=ಇವಾಯಿತ್ತಾದೊಡೆ, ವಾಯುಪಂಚಕಂ=ಮಾರುತನ ಪಂಚೀಕೃತಿಗಳು, ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು. ವಾಯುವಿನಲ್ಲಿಯಪೃಥ್ವಿ ಪ್ರಾಣೇಂದ್ರಿಯವು, ವಾಯುವಿನಲ್ಲಿಯಅಪ್ಪು ಸ್ಪರ್ಶನ, ವಾಯುವಿನಲ್ಲಿಯಅಗ್ನಿ ತ್ವಗೇಂದ್ರಿಯವು, ವಾಯುವಿನಲ್ಲಿಯವಾಯು ಉದಾನವಾಯು, ವಾಯುವಿನಲ್ಲಿಯಆಕಾಶ ಮನಸ್ಸು ಇವುತಾನೇ ವಾಯುವಿನ ಪಂಚೀಕೃತಿಗಳು. ಮಾರುತನೊಳಗಣ ಪಂಚಭೂತಂಗಳು ಅದು ಹ್ಯಾಗೆಂದೊಡೆ—ಪಂಚಭೂತಂಗಳಂಶಗುಣಂಗಳುಬಂದು ಒಂದು ವಾಯುವಿನೊಳು ಬೆರೆಯಲು ಆ ವಾಯುವಿನಲ್ಲಿಬೆರದ ಪಂಚಭೂತಂಗಳಂಶಗುಣದಿಂದ ಪಂಚತತ್ವಂಗಳು ಪುಟ್ಟಿದವು. ಇವುತಾನೇ ವಾಯುತತ್ವದೊಳಗಣ ಪಂಚಭೂತಂಗಳೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಜ್ಞಾನಂ=ಜ್ಞಾನವೆಂಬುವದೊಂದುಕರಣವು, ಸಮಾನವಾಯು=ಸಮಾನವಾಯುವೆಂಬುವದೊಂದುಮರುತನು, ಶ್ರೋತ್ರಂ=ಶ್ರವಣವೆನಿಸಿಕೊಳ್ಳುವದೊಂದು ಜ್ಞಾನೇಂದ್ರಿಯವು, ಶಬ್ದ=ವಿಷಯವೆನಿಸಿಕೊಂಬುವದೊಂದು ತನ್ಮಾತ್ರೆಯು, ತಥಾ=ಹಾಗೆ, ಏವಂ=ಈ ಪ್ರಕಾರದಿಂದ, ವಾಕ್ಯ=ವಾಕ್ಕೆಂಬುವದೊಂದು ಕರ್ಮೇಂದ್ರಿಯವು, ಪಂಚವಿಧಃ=ಐದುತೆರನೆಂದು, ಪ್ರೋಕ್ತಃ=ಹೇಳಲ್ಪಟ್ಟತು, ಇತ್ಯೇತೇ=ಇವಾಯಿತ್ತಾದೊಡೆ, ವ್ಯೋಮಪಂಚಕಃ=ಆಕಾಶದ ಪಂಚೀಕೃತಿಗಳು, ಇವಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಪೃಥ್ವಿಯದೊಂದಂಶವು ಬಂದಾಕಾಶದಲ್ಲಿಬೆರೆಯಲು ಆ ಆಕಾಶದಲ್ಲಿಬೆರೆದ ಪೃಥ್ವ್ಯಂಶಗುಣದಿಂದೇ ವಾಕ್ಕೆಂಬುವದೊಂದು ಕರ್ಮೇಂದ್ರಿಯವು ಪುಟ್ಟಿತು. ಅದುತಾನೇ ಆಕಾಶತತ್ವದೊಳಗಣ ವಾಯುತತ್ವವೆಂದು ತಿಳಿದುಕೊಂಬುವದು. ಅಪ್ಪುವಿನದೊಂದಂಶವು ಆಕಾಶದಲ್ಲಿ ಬೆರೆಯಲು, ಆಕಾಶದಲ್ಲಿಬೆರೆದ ಅಪ್ಪುವಿನಂಶಗುಣದಿಂದೇ ಶಬ್ದವೆಂಬುವದೊಂದು ತನ್ಮಾತ್ರೆಯು ಪುಟ್ಟಿತು. ಅದುತಾನೇ ಅಂಬರತತ್ವದೊಳಗಣ ಅಪ್ಪುತತ್ವವೆಂದೇ ತಿಳಿಯುವದು. ಅಗ್ನಿಯದೊಂದಂಶವು ಆಕಾಶದಲ್ಲಿ ಬೆರೆಯಲು, ಆ ಆಕಾಶದಲ್ಲಿಬೆರೆದ ಅಗ್ನ್ಯಂಶಗುಣದಿಂದೇ ಶ್ರವಣವೆಂಬುವದೊಂದು ಜ್ಞಾನೇಂದ್ರಿಯವು ಪುಟ್ಟಿತು. ಅದುತಾನೇ ಆಕಾಶತತ್ವದೊಳಗಣ ಅಗ್ನಿತತ್ವವೆಂದೇ ತಿಳಿದುಕೊಂಬುವದು. ವಾಯುವಿನದೊಂದಂಶವು ಆಕಾಶದಲ್ಲಿ ಬೆರೆಯಲು

ಆ ಆಕಾಶದಲ್ಲಿ ಬೆರೆದ ವಾಯುವಿನಂಶಗುಣದಿಂದೇ,ಸಮಾನವಾಯುಸ್ಸ
ಮಾನವಾಯುವೆನಿಸಿಕೊಂಬುವದೊಂದು ಮಾರುತನು ಪುಟ್ಟಿತು. ಅದು
ತಾನೇ ಆಕಾಶತತ್ವದೊಗಣ ವಾಯುತತ್ವವೆಂದೇ ತಿಳಿದುಕೊಂಬುವುದು.
ಆಕಾಶದೊಂದಂಶವು ತನ್ನ ಮೂಲಾಕಾಶದಲ್ಲಿ ಬೆರೆಯಲು ಆ ಮೂಲಾ
ಕಾಶದಲ್ಲಿಬೆರೆದ ಆಕಾಶದಂಶಗುಣದಿಂದೇ ಜ್ಞಾನವೆಂಬುವದೊಂದುಕರಣವು
ಹುಟ್ಟಿತು. ಅದುತಾನೇ ಆಕಾಶತತ್ವದೊಳಗಣ ಆಕಾಶತತ್ವವೆಂದೇ ತಿಳಿ
ದುಕೊಂಬುವುದು ತತ್ವಜ್ಞಾನಿಗಳು. ಈ ಪ್ರಕಾರದಿಂದ ಹೇಳಲ್ಪಟ್ಟಂ
ತಾ ಇವು ತಾವೇ ಆಕಾಶದ ಪಂಚೀಕೃತಿಗಳು. ಅಂಬರತತ್ವದೊಳಗ
ಣ ಪಂಚಭೂತಂಗಳು ಅದು ಹ್ಯಾಗೆಂದೊಡೆ—ಪಂಚಭೂತಂಗಳಂಶಗು
ಣಂಗಳು ಬಂದು ಒಂದಾಕಾಶತತ್ವದಲ್ಲಿ ಬೆರೆಯಲು ಆ ಆಕಾಶದಲ್ಲಿ ಬೆರೆ
ದ ಪಂಚಭೂತಂಗಳಂಶಗುಣದಿಂದೇ ಈ ಪಂಚತತ್ವಂಗಳು ಪುಟ್ಟಿದವು.
ಇವುತಾವೇ ಆಕಾಶತತ್ವದೊಳಗಣ ಪಂಚಭೂತಂಗಳೆಂದೇ ತಿಳಿದು
ಕೊಂಬುವದು ತತ್ವಜ್ಞಾನಿಗಳು. ಇಪ್ಪತ್ತೈದುತತ್ವಂಗಳಾದೆಂತಾದು
ಹಸಿಗೆಯುವಿಚಾರವು.

ಅಂತು ಕಟ್ಟು ೪ಕ್ಕೆ ಮಂಗಳಮಸ್ತು.

## ಬುದ್ಧೀಂದ್ರಿಗಳ ವಿವರವು.

ಇನ್ನು ಸದ್ಗುರುದೇವನು ತಚ್ಛಿಷ್ಯಂಗೆ ಬುದ್ಧೀಂದ್ರಿಯಂಗಳಂ
ನಿರೂಪಿಸುತಿಹರು. ಅದೆಂತೆಂದೊಡೆ—ಬುದ್ಧೀಂದ್ರಿಯಂಗಳ ವಿಷಯ
ಬುದ್ಧಿ ಜ್ಞಾನವೆಂಬ ಧಾತುವಿನಿಂ ಹಿಂದೆ ಹೇಳಿದ ಇಪ್ಪತ್ತೈದುತತ್ವಂ
ಗಳೊಳಗೆ ಈ ಬುದ್ಧೀಂದ್ರಿಯಂಗಳೇ ಪ್ರಧಾನತತ್ವಂಗಳಾದಕಾರಣ
ಪ್ರಥಮದಲ್ಲಿ ಬುದ್ಧೀಂದ್ರಿಯಂಗಳ ಸ್ವರೂಪವನ್ನು ನಿರೂಪಣವಪಾಲಿ
ಸುತಿಹರು. ಅದು ಹ್ಯಾಗೆಂದೊಡೆ—ಬುದ್ಧೀಂದ್ರಿಯಂಗಳ ಅರಿವುರೂಪ
ಮಾದ ಪಂಚಜ್ಞಾನೇಂದ್ರಿಯಂಗಳ ವಿಷಯ ಪ್ರಯೋಜನಗಳಾದ ಪಂ
ಚತನ್ಮಾತ್ರೆಗಳು ಮೂಲಭೂತಂಗಳು ಅಧಿದೇವತೆಗಳು ಮಾಡುವಂತ
ಉದ್ಯೋಗಂಗಳು ಎಂತೆಂದೊಡೆ, ಹ್ಯಾಗಿಪ್ಪವೆಲೆ ಸ್ವಾಮಿಯೆಂದು ಬೆಸ
ಗೊಂಡೊಡೆ—ಆ ವಿಚಾರವನ್ನು ಮುಂದೆ ಗ್ರಂಥೋಕ್ತವಾಗಿ ನಿರೂಪಿ
ಸುತಿಹರು. ಅದೆಂತೆಂದೊಡೆ—ಶ್ರೋತ್ರ=ಶ್ರವಣೇಂದ್ರಿಯವು,ತ್ವಕ್ಕು=
ತ್ವಕ್ಕೇಂದ್ರಿಯವು, ನೇತ್ರ=ನಯನೇಂದ್ರಿಯವು, ಜಿಹ್ವೆ=ರಸನೇಂದ್ರಿ

ಯವು=ಘ್ರಾಣ= ನಾಸಿಕೇಂದ್ರಿಯವೆಂದುಐದಿಂದ್ರಿಯಂಗಳ=ಮೂಲಭೂತಂಗಳನು= ಕ್ರಮೇಣಪಂಚೇಂದ್ರಿಯದಮೂಲಭೂತಂಗಳನ್ನು ನಿರೂಪಿಸುತಿಹರು. ಅದುಹ್ಯಾಗೆಂದೊಡೆ—ಶ್ರವಣೇಂದ್ರಿಯಕ್ಕೆಅಂಬರತತ್ವವೆ ಮೂಲಚೈತನ್ಯವಾಗಿಪ್ಪುದು. ತ್ವಗೇಂದ್ರಿಯಕ್ಕೆ ವಾಯುತತ್ವವೆ ಮೂಲಚೈತನ್ಯವಾಗಿಪ್ಪುದು=ಅಗ್ನಿ ನಯನೇಂದ್ರಿಯಕ್ಕೆ ತೇಜಸ್ತತ್ವವೆ ಮೂಲಚೈತನ್ಯವಾಗಿಪ್ಪುದು=ಜಿಹ್ವೇಂದ್ರಿಯಕ್ಕೆ ಅಪ್ಪುತತ್ವವೆ ಮೂಲಚೈತನ್ಯವಾಗಿಪ್ಪುದು=ಘ್ರಾಣೇಂದ್ರಿಯಕ್ಕೆ ಧರಣೀತತ್ವವೆ ಮೂಲಚೈತನ್ಯವಾಗಿಪ್ಪುದು=ಶಬ್ದ ವಿಷಯವನುಳ್ಳ ಶ್ರವಣೇಂದ್ರಿಯವು ಸ್ಪರ್ಶನವಿಷಯವನುಳ್ಳ ತ್ವಗೇಂದ್ರಿಯವು=ರೂಪವಿಷಯವನುಳ್ಳ ನಯನೇಂದ್ರಿಯವು=ರಸವಿಷಯವನುಳ್ಳ ರಸನೇಂದ್ರಿಯವು= ಗಂಧವಿಷಯವನುಳ್ಳ ನಾಸಿಕೇಂದ್ರಿಯವು=ಐದು ಜ್ಞಾನೇಂದ್ರಿಯಂಗಳು ಅರಿವು ಸ್ವರೂಪಮಾದ ಪಂಚಹೃಷೀಕಂಗಳಭಿಧಾನಂಗಳು=ಇವಕ್ಕೆ ಅರಿವುರೂಪಮಾದಪಂಚಹೃಷೀಕಂಗಳೆಂಬಭಿಧಾನಂಗಳು ಏನುಕಾರಣ ಬಂದೀತೆಲೆಸ್ವಾಮಿಯೆಂದು ಬೆಸಗೊಂಡೊಡೆ—ಇವು ತಮ್ಮತಮ್ಮ ಸಂಬಂಧವಾದ ವಿಷಯಂಗಳನು ತಿಳುವಳಿಕೆ ಮಾತ್ರದಿಂದಲೆ ಗ್ರಹಿಸುವವಾದಕಾರಣ ಇವಕ್ಕೆ ಆ ನಾಮವು ಪ್ರಸಿದ್ಧವಾಯಿತು=ಅರಿವುರೂಪಮಾದಪಂಚಹೃಷೀಕಂಗಳ ವಿವರ= ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು=ಶ್ರವಣವೆನಿಸಿಕೊಂಬುವದೊಂದು ಜ್ಞಾನೇಂದ್ರಿಯಕ್ಕೆ ಅಂಬರತತ್ವವೆಂದು ಹೇಳುವ ದೊಡ್ಡಿತ್ತಾದಭೂತವೆ = ಮೂಲಚೈತನ್ಯವಾಗಿಪ್ಪುದು=ಆಕಾಶತತ್ವವು=ಶ್ರವಣೇಂದ್ರಿಯಕ್ಕೆ ಏನುಕಾರಣ ಮೂಲಚೈತನ್ಯವಾಗಿಪ್ಪದೆಲೆಸ್ವಾಮಿ ಯೆಂದು ಬೆಸಗೊಂಡೊಡೆ—ಆಕಾಶವೆಂಬ ಮೂಲಭೂತವು=ಶ್ರವಣೇಂದ್ರಿಯದೊಳಗೆ ವಾಸವಾಗಿದ್ದಕಾಲದಲ್ಲಿ=ಆವುದಾನೊಂದು ಸುಶಬ್ದ ಕುಶಬ್ದಂಗಳ ಲಾಲಿಸುವದಕ್ಕೆ ಸುಸ್ಥಿರವಾಗಿ ಬರುವದು. ಎತ್ತಲಾನೊಂದುವೇಳೆ= ಆ ಇಂದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿ ಪೋಗಲು=ಶ್ರವಣೇಂದ್ರಿಯಕ್ಕೆ ಬಧಿರತ್ವವೆಡೆಗೊಂಡು= ಆವುದಾನೊಂದು=ಸುಶಬ್ದ ಕುಶಬ್ದಂಗಳ ಲಾಲಿಸುವದಕ್ಕೆ ಸುಸ್ಥಿರವಾಗಿ ಕೇಳಬರಲರಿಯದು=ಅದು ಕಾರಣವಾಗಿ = ಶ್ರವಣೇಂದ್ರಿಯಕ್ಕೆ = ಆಕಾಶತತ್ವವೆ ಮೂಲಚೈತನ್ಯವಾಗಿಪ್ಪದೆಂದೇ ತಿಳಿವುದು=ಆತ್ಮನುತಾನೆ=ದಶದಿಕ್ಕೆಂಬ ಅಧಿದೇವತಾಸ್ವರೂಪದಿಂದ ಸದಾ ವಾಸವಾಗಿರುವನು. ಅಲ್ಲಿ ಶ್ರವಣೇಂ

ದ್ರಿಯದೊಳಗೆ ಆತ್ಮನು ದಶದಿಕ್ಕೆಂಬ ಅಧಿದೇವತಾ ನಾಮದಿಂದ ವಾಸ
ವಾಗಿರ್ದು=ಏನುಂಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ
—ಸುಶಬ್ದ ಕುಶಬ್ದಗಳನು ಗ್ರಹಿಸಬೇಕೆಂಬ ವಿಷಯ ಪ್ರಯೋಜನವ
ಮುಂದುಗೊಂಡಿರುವನು=ಆ ಸುಶಬ್ದ ಕುಶಬ್ದಂಗಳು ತಾವೆಂತಾಪವೆ
ಸ್ವಾಮಿ ಯೆಂದರೆ=ಅಕ್ಷರಾತ್ಮಕ=ವಾಲೆಕಂಟ=ಸಂಪುಟ=ಲೇಖಣಿಕೆ=
ಕಾಗದಂಗಳ=ಲೇಖನಕ್ಕೆ ಬಾಹಂಥ=ಐವತ್ತಕ್ಷರಂಗಳೊಳಗಾದ=ಸಪ್ತ
ಸ್ತ ವೇದಶಾಸ್ತ್ರಾಗಮ ಪುರಾಣಂಗಳನು=ತಾಲು=ಮೂಲ=ದಂತ=
ತುಟಿ=ಕಟವಾಯಿ=ರಸನೆಗಳಿಂದೆ=ಮುವ್ವತ್ತೆರಡುರಾಗ=ಅರವತ್ತುನಾ
ಲ್ಕು ಮಿಶ್ರಯುಕ್ತವಾಗಿ ಚವುಕದಟ್ಟೆ ಫ್ರೋದುವಲ್ಲಿ ಹುಟ್ಟುವಂತ ಸ್ಪ
ಷ್ಟವಾದ ಶಬ್ದವೆ ಅಕ್ಷರಾತ್ಮಕಶಬ್ದವು. ವಾಲೆಕಂಟ=ಬಳಹ=ಸಂಪುಟ
ಲೇಖಣಿಕೆ ಕಾಗದಂಗಳ ಲೇಖನಕ್ಕೆ ಬಾರದ ಪಶುಪಕ್ಷಿಮೃಗಾದಿಗಳ
ಜಿಹ್ವೆಯಲ್ಲಿ ಪುಟ್ಟುವಂತ ಅಸ್ಪಷ್ಟವಾದ ಶಬ್ದವೆಅನಕ್ಷರಾತ್ಮಕ ಶಬ್ದವು.
ಈ ಎರಡುಶಬ್ದಭೇದಗಳವಿವರವೆಂಬಲ್ಲಿ ಎರಡುಪ್ರಕಾರಶಬ್ದಗಳನ್ನು
ಶ್ರೋತ್ರೇಂದ್ರಿಯದಲ್ಲಿ ದಶದಿಕ್ಕೆಂಬಭಿಧಾನವನುಳ್ಳ ಆತ್ಮನು ಸದಾ
ಗ್ರಹಿಸುತಿಹನು. ತ್ವಗೇಂದ್ರಿಯಕ್ಕೆ ವಾಯುವೆಂಬಭೂತವೆ ಮೂಲ
ಚೈತನ್ಯವಾಗಿಪ್ಪುದು. ಆ ವಾಯುತತ್ವವೆಂಬುದು ತಾನು ತ್ವಗೇಂದ್ರಿ
ಯಕ್ಕೆ ಯೇನುಕಾರಣ ಮೂಲಚೈತನ್ಯವಾಗಿಪ್ಪುದೆಲೆ ಸ್ವಾಮಿ ಯೆಂದು
ಬೆಸಗೊಂಡೊಡೆ—ವಾಯುತತ್ವವೆಂಬ ಮೂಲಭೂತವು ತ್ವಗೇಂದ್ರಿಯ
ದಲ್ಲಿ ವಾಸವಾಗಿದ್ದ ಕಾಲದಲ್ಲಿ ಆವುದಾನೊಂದು ಸುಸ್ಪರ್ಶನ ದುಸ್ಪರ್ಶ
ನಂಗಳಗ್ರಹಿಸುವದಕ್ಕೆ ಸುಸ್ಥಿರವಾಗಿರುವದು. ಎತ್ತಾನಕೊಂದು
ವೇಳೆ ಆ ಇಂದ್ರಿಯದಲ್ಲಿದ್ದ ಮೂಲಭೂತವು ನಷ್ಟವಾಗಿ ಪೋಗಲು
ತ್ವಕ್ಕೆಂಬುದು ಗಜಚರ್ಮ ಹೊದ್ದುಕೊಂಡು ಆವುದಾನೊಂದು ಸುಸ್ಪ
ರ್ಶನ ದುಸ್ಪರ್ಶನಂಗಳ ಗ್ರಹಿಸುವದಕ್ಕೆ ಸುಕರವಾಗಿ ಬರುವುದೆ ಬರ
ಲರಿಯದು. ಅದುಕಾರಣವಾಗಿ ತ್ವಗೇಂದ್ರಿಯಕ್ಕೆ ವಾಯುತತ್ವವೆ
ಮೂಲಚೈತನ್ಯವಾಗಿಪ್ಪುದೆಂದೇ ತಿಳಿವುದು. ಆತ್ಮನು ತಾನೆ ಚಂದ್ರ
ನೆಂಬಧಿದೇವತಾನಾಮದಿಂದ ಸದಾ ವಾಸವಾಗಿರುತಿಹನು. ಅಲ್ಲಿ ತ್ವಗೇಂ
ದ್ರಿಯದೊಳಗಾತ್ಮನು ಚಂದ್ರನೆಂಬಧಿದೇವತಾ ನಾಮದಿಂದ ಸದಾ ವಾಸ
ವಾಗಿರುತಿಹನು. ತ್ವಗೇಂದ್ರಿಯದೊಳಗಾತ್ಮನು ಚಂದ್ರನೆಂಬಧಿದೇ
ವತಾ ನಾಮದಿಂದ ವಾಸವಾಗಿ ಯೇನುಂಟು ಮಾಡುತಿಹನೆಲೆ ಸ್ವಾಮಿ

ಯೆಂದು ಬೆಸಗೊಂಡೊಡೆ— ಆವುದಾನೊಂದು ಸುಸ್ಪರ್ಶನ ದುಸ್ಪರ್ಶ
ನಂಗಳ ಗ್ರಹಿಸಬೇಕೆಂಬ ವಿಷಯ ಪ್ರಯೋಜನವೆ ಮುಂದುಗೊಂಡಿರು
ತಿಹನು. ಆ ಸುಸ್ಪರ್ಶನ ಕುಸ್ಪರ್ಶನಂಗಳು ತಾವೆಂತಾವೆಂದೊಡೆ ಸೀತ
ಛಳಿ ಗಾಳಿ ಮಳೆಗಳಿಂದಂಗಕ್ಕೆ ತಣ್ಣನೆ ತಟ್ಟುವೆಂತಾ ಸ್ಪರ್ಶನವೆ ಸೀತ
ವು. ಬಿಸಿಲು ಬೆಂಕಿ ಬಿಸಿ ಯಗ್ಗಣಿಗಳಿಂದ ಅಂಗಕ್ಕೆ ಬೆಚ್ಚನೆ ತಟ್ಟು
ವಂತ ಸ್ಪರ್ಶನವೆ ಉಷ್ಣವು. ಮೃದುಹಂಸತೂಲಿಕಾತಲ್ಪ=ಸುಪ್ಪತ್ತಿಗೆ
ಸುಚೇಲನ ಪುಷ್ಪಾದಿಗಳಿಂದ ಅಂಗಕ್ಕೆ ಮೆತ್ತಗೆ ತಟ್ಟುವೆಂತಾ ಸ್ಪರ್ಶನ
ವೆ ಮೃದುವು. ನವಕಂಬಳಾಚ್ಛಾದನಶರಕರಾಘ್ವಗಮನ ಕೇವಲ
ಖರಶಯನ ತರುಭಿತ್ತಿ ಶಿಲಾದಿಗಳವಲಂಬನದಿಂದಂಗಕ್ಕೆ ಮರಟಾಗಿ
ತಟ್ಟುವೆಂತ ಸ್ಪರ್ಶನವೆ ಕಠಿಣವು. ಈ ನಾಲ್ಕು ಸ್ಪರ್ಶನಭೇದವು.
ನಾಲ್ಕು ಪ್ರಕಾರವಾದ ಸ್ಪರ್ಶನಂಗಳನ್ನು ಆತ್ಮನು ತ್ವಗೇಂದ್ರಿಯದಲ್ಲಿ
ಚಂದ್ರನೆಂಬಧಿದೇವತಾನಾಮದಿಂದ ವಾಸವಾಗಿ ಸದಾ ಗ್ರಹಿಸುತಿಹನು.
ನಯನವೆನಿಸಿ ಕೊಂಬುವದೊಂದುಜ್ಞಾನೇಂದ್ರಿಯಕ್ಕೆ ಅಗ್ನಿಯೆಂಬ
ತೇಜಸ್ತತ್ವವೆಂದು ಹೇಳುವ ಭೂತವೆ ಮೂಲಚೈತನ್ಯವಾಗಿಪ್ಪದು.
ಅಗ್ನಿತತ್ವವೆಂಬುದು ತಾನು ನೇತ್ರೇಂದ್ರಿಯಕ್ಕೆಏನುಕಾರಣ ಮೂಲ
ಚೈತನ್ಯವಾಗಿಪ್ಪದಲೆ ಸ್ವಾಮಿ ಯೆಂದುಬೆಸಗೊಂಡೊಡೆ—ಅಗ್ನಿಎಂ
ಬ ಮೂಲಭೂತವು ನಯನೇಂದ್ರಿಯದಲ್ಲಿ ವಾಸವಾಗಿದ್ದ ಕಾಲದಲ್ಲಿ ಆ
ವುದಾನೊಂದು ಸುರೂಪು ಕುರೂಪಂಗಳ ಗ್ರಹಿಸುವದಕ್ಕೆ ಸುಸ್ಥಿರವಾಗಿ
ರುವದು. ಯಾವುದಾನೊಂದುವೇಳೆ ಆ ಇಂದ್ರಿಯದಲ್ಲಿರ್ದ ಮೂಲ
ಭೂತವು ನಷ್ಟವಾಗಿಪೋಗಲು ನಯನವೆಂಬುದು ನಿಲವುಗಣ್ಣು ಬಿದ್ದು
ಕೊಂಡು ಆವುದಾನೊಂದು ಸುರೂಪು ಕುರೂಪುಗಳ ಗ್ರಹಿಸುವದಕ್ಕೆ
ಸುಸ್ಥಿರವಾಗಿರಲರಿಯದು. ಅದುಕಾರಣವಾಗಿ ನಯನೇಂದ್ರಿಯಕ್ಕೆ
ಅಗ್ನಿತತ್ವವೆ ಮೂಲಚೈತನ್ಯವಾಗಿಪ್ಪದೆಂದು ತಿಳಿಯುವದು. ಆತ್ಮನು
ತಾನೆ ಸೂರ್ಯನೆಂಬಧಿದೇವತಾನಾಮದಿಂದ ವಾಸವಾಗಿರುತಿಹನು, ಅಲ್ಲಿ
ಆ ನೇತ್ರೇಂದ್ರಿಯದೊಳಗೆ ಆತ್ಮನು ಭಾಸ್ಕರನೆಂಬಧಿದೇವತಾನಾಮ
ದಿಂದ ವಾಸವಾಗಿ ನೆಲಗೊಂಡು ಏನುಂಟುಮಾಡುತಿಹನೆಲೆಸ್ವಾಮಿ
ಯೆಂದು ಬೆಸಗೊಂಡೊಡೆ—ರೂಪು ವಿಷಯ ಆವುದಾನೊಂದು ಸುರೂ
ಪು ಕುರೂಪುಗಳ ನೋಡಬೇಕೆಂಬ ವಿಷಯಪ್ರಯೋಜನವನೇ
ಮುಂದುಕೊಂಡಿರುವನು. ಆ ಸುರೂಪು ಕುರೂಪುಗಳು ವೆಂತಾವೆಲೆ

ಸ್ವಾಮಿ ಯೆಂದು ಬೆಸಗೊಂಡೊಡೆ—ನೀರು, ಕ್ಷೀರ, ತಾರಾ, ಹೀರ, ಪಟೀರ, ಚಂದ್ರ, ಶಂಖ, ಮೌಕ್ತಿಕಾದಿಗಳಲ್ಲಿ ತೋರುವಂತಾ ಧವಳ ವರ್ನದ ಬಣ್ಣವೇ ಸ್ವೇತವು ಪೀತ ಕೆಂದಾವರೆ ಪೊಂದಾವರೆ ಬೆಟ್ಟದಾವರೆ, ಮಂದಾವರೆ, ಕರ್ನಿಕಾರ, ಕಾಶ್ಮೀರ, ಕನಕ, ಚಂಪಕ, ಪೀತಾಂಬರಾದಿಗಳಲ್ಲಿ ತೋರುವ ಹಳದಿ ವರ್ನದ ಬಣ್ಣವೆ ಪೀತವು ದೇವಮಾತೃಕಾ, ನಡೀಮೃತಕಾ, ಪಚ್ಚೆಮಣಿ, ಪಸುರುಹೊದಿಕೆ, ಗಿಳಿವಣ್ಣ ಮೊದಲಾದವರಲ್ಲಿ ತೋರುವ ಹಸುರುವರ್ನದ ಬಣ್ಣವೆ ಹರಿತವು, ಕಪೋತವು, ಚೀಟಿ, ಚಿತ್ರಾಂಬರ ದೇವಾಗಾರ, ವಿವಾಹಮಂಟಪಂಗಳ ಮೇಲು ಕಟ್ಟು, ಪಾಂಚಾಲಪಕ್ಷಿ ಮೊದಲಾದವರಲ್ಲಿ ತೋರುವ ಚಿತ್ರವರ್ನದ ಬಣ್ಣವೆ ಕಪೋತವು ಪರಮೆ, ಪರಪುಟ್ಟ, ಕೊದಲು, ಕಾಡಿಗೆ, ಕಾವಳ, ಕಸ್ತೂರಿ ಮೊದಲಾದವರಲ್ಲಿತೋರುವ ಕಾಡಿಗೆಬಣ್ಣದವರ್ನವೆ ಕೃಷ್ಣವು. ಇಂದ್ರಗೋಪ,ಚಂದ್ರಗಾವಿ, ಸಂಧ್ಯಾರಾಗ,ಮೊದಲಾದವರಲ್ಲಿ ತೋರುವ ರಕ್ತವರ್ನದ ಬಣ್ಣವೆ ಮಾಂಜಿಷ್ಟವು ಈ ಆರು ರೂಪುಭೇದ ಆರುಪ್ರಕಾರವಾದ ರೂಪುಗಳು. ಆತ್ಮನು ನೇತ್ರೇಂದ್ರಿಯದಲ್ಲಿ ಸೂರ್ಯನೆಂಬಧಿದೇವತಾನಾಮದಿಂದ ವಾಸವಾಗಿ ಸದಾ ಗ್ರಹಿಸುತಿಹನು. ಜಿಹ್ವೇಂದ್ರಿಯವೆಂಬ ಜ್ಞಾನೇಂದ್ರಿಯಕ್ಕೆ ಅಪ್ಪೆಂಬ ಭೂತವೆ ಮೂಲಚೈತನ್ಯವಾಗಿಪ್ಪದು. ಅಪ್ಪುತತ್ವವೆಂಬುದು ತಾನು ಜಿಹ್ವೇಂದ್ರಿಯಕ್ಕೇನು ಕಾರಣ ಮೂಲಚೈತನ್ಯವಾಗಿಪ್ಪದಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಅಪ್ಪುವೆಂಬಭೂತವು ರಸನೇಂದ್ರಿಯದಲ್ಲಿ ವಾಸವಾಗಿದ್ದ ಕಾಲದಲ್ಲಿ ಆವುದಾನೊಂದು ಸುರುಚಿ ಕುರುಚಿಗಳನ್ನು ಗ್ರಹಿಸುವದಕ್ಕೆ ಸುಸ್ಥಿರವಾಗಿರುವದು. ಯಾವುದಾನೊಂದುವೇಳೆ ಆ ಇಂದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿಪೋಗಲು ನಾಲಿಗೆಗೆ ಗ್ರಹವೆಡೆಗೊಂಡಹಂಗಾಗಿ ಆವುದಾನೊಂದು ಸುರುಚಿ ಕುರುಚಿಗಳನ್ನು ಗ್ರಹಿಸುವದಕ್ಕೆ ಸುಸ್ಥಿರವಾಗಿ ಬರಲರಿಯದು. ಅದು ಕಾರಣವಾಗಿ ಜಿಹ್ವೇಂದ್ರಿಯಕ್ಕೆ ಅಪ್ಪುತತ್ವವೆ ಮೂಲಚೈತನ್ಯವಾಗಿಪ್ಪದೆಂದು ತಿಳಿವುದು. ಆತ್ಮನು ತಾನೆ ವರುಣನೆಂಬಧಿದೇವತಾನಾಮದಿಂದ ವಾಸವಾಗಿರುವನು. ಆ ಜಿಹ್ವೇಂದ್ರಿಯದೊಳಗಾತ್ಮನು ವರುಣನೆಂಬಧಿದೇವತಾನಾಮದಿಂದ ವಾಸವಾಗಿ ಏನೇನು ಮಾಡುತಿಹನಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಆವುದಾನೊಂದು ಸುರುಚಿ ಕುರುಚಿಗಳನ್ನು ಗ್ರಹಿಸಬೇಕೆಂಬ

ವಿಷಯ ಪ್ರಯೋಜನವೆನೆ ಮುಂದುಗೊಂಡಿರುವನು. ಆ ಸುರುಚಿ ಕುರುಚಿಗಳು ತಾವೆಂತಾವೆಂದೊಡೆ, ಮಧುರ, ಮಧು, ಗುಡ ಶರ್ಕರ, ಇಕ್ಷು, ಕದಳೀಫಲ, ಖರ್ಜೂರಾದಿಗಳಲ್ಲಿ ತೋರುವ ಸೀಯಾದ ರುಚಿಯೆ ಮಧುರ, ಆಮ್ಲ=ಚೂತ, ಜಂಬೀರ, ಹಿರಳಿ, ಮುರುಗಮುಖ, ಫಲಾದಿಗಳಲ್ಲಿ ತೋರುವ ಹುಳಿಯಾದ ರುಚಿಯೆ, ಆಮ್ಲವು ತಿಕ್ತ, ತೊಟ್ಟಕಾರ್ಚಿ, ಪಾಗಳ, ದುಂದುಲಂಗಾಯಿ ಮೆಂತೆ, ಮೆಂತೆದಸೊಪ್ಪು, ತಕ್ರ, ತೈಲ, ಸಂಮಿಶ್ರಾದಿಗಳಲ್ಲಿ ತೋರುವ ಕಿರಿಗ್ಯೆಯಾದ ರುಚಿಯೆ ತಿಕ್ತವು. ಕಟು, ಲವಂಗ, ಶೊಂಠಿ, ಪಿಪ್ಪಲಿ, ಮೋದಿ, ಬೆಳ್ಳುಳ್ಳಿ, ಮೆಣಸು, ಮೆಣಸಿನಕಾಯಿ, ಮೊದಲಾದವೆರಲ್ಲಿ ತೋರುವ ಕಾರವಾದ ರುಚಿಯೆ ಕಟುವು, ಕಷಾಯ, ತಾರೆ, ತದಿಕಿಲು, ಬಿಕ್ಕೆ, ಬಿಳಲು, ಕ್ರಮುಕಾಥಕಾಮಳಕಾದಿಗಳಲ್ಲಿ ತೋರುವ ವಗರಾದ ರುಚಿಯೆ ಕಷಾಯವು, ಲವಣ, ಸಿಂಧುಲವಣ, ಸ್ಯೆಂಧವಲವಣ, ಸಂವರ್ಚಿಕಾಲವಣ, ಬಿಡಾಲವಣ, ಮೃತ್ತಿಕಾಲವಣ, ವುಪ್ಪುಮುಂತಾದ ಆರು ಪ್ರಕಾರವಾದ ರಸಂಗಳನ್ನು ಆತ್ಮನು ರಸನೇಂದ್ರಿಯದೊಳಗೆ ವರುಣನೆಂಬಧಿದೇವತಾ ನಾಮದಿಂದ ವಾಸವಾಗಿ ಸದಾ ಗ್ರಹಿಸುತಿಹನು. ಘ್ರಾಣೇಂದ್ರಿಯಕ್ಕೆ ನಾಸಿಕವೆಂಬುದೊಂದು ಜ್ಞಾನೇಂದ್ರಿಯಕ್ಕೆ ಪೃಥ್ವಿಯೆಂಬ ಭೂತವೆ ಮೂಲಚ್ಯೆತನ್ಯವಾಗಿಪ್ಪದು. ಪೃಥ್ವಿತತ್ವವೆಂಬುದು ತಾನು ನಾಸಿಕೇಂದ್ರಿಯಕ್ಕೆ ಯೇನುಕಾರಣಮೂಲಚ್ಯೆತನ್ಯವಾಗಿಪ್ಪದೆಲೆಸ್ವಾಮಿ ಯೆಂದು ಬೆಸಗೊಡೊಡೆ—ಪೃಥ್ವಿಯೆಂಬ ಮೂಲಭೂತವು ನಾಸಿಕೇಂದ್ರಿಯದೊಳಗೆ ವಾಸವಾಗಿದ್ದ ಕಾಲದಲ್ಲಿ ಆವುದಾನೊಂದು ಸುಗಂಧ, ದುರ್ಗಂಧಗಳನ್ನು ಗ್ರಹಿಸುವದಕ್ಕೆ ಸುಸ್ಥಿರವಾಗಿರುವದು. ಯಾವದಾನೊಂದುವೇಳೆ ಆ ಇಂದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿ ಪೋಗಲು ನಾಸಿಕೇಂದ್ರಿಯಕ್ಕೆ ಸೆಗಡೆಯೆಡೆಗೊಂಡಂತಾಗಿ ಆವುದಾನೊಂದು ಸುಗಂಧ ದುರ್ಗಂಧಗಳಗ್ರಹಿಸುವುದಕ್ಕೆ ಸುಸ್ಥಿರವಾಗಿ ಬರಲರಿಯದು. ಅದು ಕಾರಣವಾಗಿ ಘ್ರಾಣೇಂದ್ರಿಯಕ್ಕೆ ಪೃಥ್ವಿತತ್ವವೆ ಮೂಲಚ್ಯೆತನ್ಯವಾಗಿಪ್ಪದು. ಅಶ್ವಿನ್ಯಧಿದೇವತೆ ಆತ್ಮನು ತಾನೆ ಅಶ್ವಿನಿಯೆಂಬಧಿದೇವತಾ ನಾಮದಿಂದ ಸದಾವಾಸವಾಗಿರುವನು, ಅಲ್ಲಿ ಘ್ರಾಣೇಂದ್ರಿಯದೊಳಗೆ ಆತ್ಮನು ತಾನೆ ಅಶ್ವಿನಿಯೆಂಬಧಿದೇವತಾನಾಮದಿಂದ ವಾಸವಾಗಿ ಏನುಂಟು ಮಾಡುತಿಹನೆಲೆ ಸ್ವಾಮಿ ಯೆಂದು ಬೆಸ

ಗೊಂಡೊಡೆ—ಆವುದಾನೊಂದು ಸುಗಂಧ ದುರ್ಗಂಧಗಳ ಗ್ರಹಿಸಬೇಕೆಂಬ ವಿಷಯು ಪ್ರಯೋಜನವೆ ಮುಂದುಗೊಂಡಿರುವೆನು. ಆ ಸುಗಂಧ ದುರ್ಗಂಧಗಳೂ ತಾವೆಂತಾವೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಗಂಧ, ಕಸ್ತೂರಿ, ಘನುಗು, ಜವ್ವಾಜಿ, ಕಮೆಂಣೆ, ಶಿಲಾರಸ ಮೊದಲಾದವೆರಲ್ಲಿ ತೋರುವ ಸೊಗಸಾದ ಗಂಧವೆ ಸುಗಂಧವು. ದುರ್ಗಂಧ, ಕೂದಲು, ಕಂಬಳಿ, ಜೀರ್ಣಶ್ರವ, ಕುಣಪದಹನ, ಚಂಡಾಲವಾಟಗಳು, ಕಿಗ್ಗಾಳಿಯಲ್ಲಿ ಪೋಗುವಂತಾ ಆತ್ಮರುಗಳ ಘ್ರಾಣಕ್ಕೆ ವಗಡಿಕೆಯಾಗಿ ತಟ್ಟುವಂತಾ ದುಗುಡವಾದ ಗಂಧವೆ ದುರ್ಗಂಧವು. ಈ ಯೆರಡುಪ್ರಕಾರವಾದ ಗಂಧಗಳನ್ನು ಆತ್ಮನು ಘ್ರಾಣೇಂದ್ರಿಯದೊಳಗೆ ಅಶ್ವಿನಿಯೆಂಬಧಿದೇತತಾ ನಾಮದಿಂದ ವಾಸವಾಗಿ ಸದಾ ಗ್ರಹಿಸುತಿಹನು ಈ ಪ್ರಕಾರದಿಂದೆ ಪೇಳಲ್ಪಟ್ಟಂತೆ ಇವು ತಾವೆ ಅರಿವು ಸ್ವರೂಪವಾದ ಪಂಚಹೃಷೀಕಂಗಳ ಹೆಸಿಗೆಯು ವಿಚಾರವನ್ನು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೬ ಕ್ಕೆ ಮಗಳಮುಖಂ.

---

## ಕರ್ಮೇಂದ್ರಿಯಗಳ ವಿವರವು.

ಇನ್ನು ಸದ್ಗುರುದೇವನು ತಚ್ಛಿಷ್ಯಂಗೆ ಕರ್ಮೇಂದ್ರಿಯಂಗಳ ವಿವರವನ್ನು ನಿರೂಪಿಸುತಿಹರು. ಇನ್ನು ತದನಂತರದಲ್ಲಿ ಕರ್ಮೇಂದ್ರಿಯಂಗಳು ಕ್ರಿಯಾರೂಪವಾದ ಪಂಚಹೃಷೀಕಂಗಳೆಂದುಂಟಾಗಿರುತಿಹವು. ಅವರ ಸ್ವಸ್ವರೂಪವುಂ ಪೇಳುತಿಹರು. ಆವಾವೆಂದೊಡೆ—ವಾಕ್=ವಾಗಿಂದ್ರಿಯವು, ಪಾಣಿ=ಹಸ್ತೇಂದ್ರಿಯವು, ಪಾದ=ಚರಣೇಂದ್ರಿಯವು, ಪಾಯು=ಗುದೇಂದ್ರಿಯವು, ಗುಹ್ಯ=ಗೋಪ್ಯೇಂದ್ರಿಯವೆಂದು ಹೇಳಲ್ಪಟಂತ ಇವು ತಾವೇ ಕರ್ಮೇಂದ್ರಿಯಂಗಳು. ಕ್ರಿಯಾರೂಪವಾದ ಪಂಚಹೃಷೀಕಂಗಳಭಿಧಾನಂಗಳು. ಇವಕ್ಕೆ ಈ ಕ್ರಿಯಾರೂಪವಾದ ಪಂಚಹೃಷೀಕಂಗಳೆಂಬಭಿಧಾನವು ಏನುಕಾರಣ ಬಂದಿತೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಒಂದಾನೊಂದು ಕಡಿವಂತಕೊಡಲಿ ಕೊಯ್ಯುವಂತ ಕುಡಗೋಲು, ಕುಟ್ಟುವಂತವನಕೆ, ಬೀಸುವಂತ ಕಲ್ಲು, ಕೇರುವಂತ ಮೊರ, ಮುಂತಾದವಸ್ತುಗಳು ಒಬ್ಬಾನೊಬ್ಬಾತ್ಮಾ

ಧೀನದಿಂದಲ್ಲದೆ ಸ್ವಯಾಧೀನದಿಂದ ಚೇಷ್ಟಿಸಲರಿಯುವು. ಇವುಗಳು ತಮ್ಮತಮ್ಮ ಸಂಬಂಧವಾದ ವಿಷಯಂಗಳನ್ನು ಮನಸಾಧೀನದೊಡನೆ ಕೂಡಿಕೊಂಡು ವಾಯುವಿನ ಚೈತನ್ಯಬಲದಿಂದಲೆ ಗ್ರಹಿಸುತಿಹುದಾದಕಾರಣ ಇವಕ್ಕೆ ಕ್ರಿಯಾರೂಪವಾದ ಪಂಚಹೃಷೀಕಂಗಳೆಂಬ ನಾಮವು ಪ್ರಸಿದ್ಧವಾಯಿತು. ಇವಕ್ಕೆ ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ವಾಗಿಂದ್ರಿಯಕ್ಕೆ ನಾಗವಾಯುವೆ ಮೂಲಚೈತನ್ಯವಾಗಿಪ್ಪುದು. ನಾಗವಾಯುವೆಂಬುವದು ತಾನು ವಾಗಿಂದ್ರಿಯಕ್ಕೆ ಏನು ಕಾರಣಮೂಲಚೈತನ್ಯವಾಗಿಪ್ಪದೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಆ ನಾಗವಾಯುವೆಂಬಮೂಲಭೂತವು ವಾಗಿಂದ್ರಿಯದೊಳಗೆ ವಾಸವಾಗಿದ್ದಕಾಲದಲ್ಲಿ ಆವುದಾನೊಂದು ಮಾತುಕಥೆಪ್ರಸಂಗವನಾಡುವದಕ್ಕೆ ಸುಸ್ಥಿರವಾಗಿಬರುತಿಹುದು. ಯಾವುದಾನೊಂದುವೇಳೆ ಆ ಇಂದ್ರಿಯದಲ್ಲಿದ್ದಮೂಲಭೂತವು. ನಷ್ಟವಾಗಿ ಹೋಗಲು ನಾಲಿಗೆ ಯೆಂಬುದು ತೊದಲು ಬಿದ್ದು ಕೊಂಡು ಆವುದಾನೊಂದು ಮಾತು ಕಥೆ ಪ್ರಸಂಗವನಾಡುವದಕ್ಕೆ ಸುಸ್ಥಿರವಾಗಿ ಬರಲರಿಯದು. ಅದು ಕಾರಣವಾಗಿ ವಾಗಿಂದ್ರಿಯಕ್ಕೆ ನಾಗವಾಯುವೆ ಮೂಲಚೈತನ್ಯವಾಗಿಪ್ಪುದು. ಅಲ್ಲಿ ಆತ್ಮನು ತಾನೆ ಸರಸ್ವತಿ ಯೆಂಬಧಿದೇವತಾನಾಮದಿಂದ ಸದಾ ವಾಸವಾಗಿರುತಿಹನು. ಅಲ್ಲಿ ವಾಗಿಂದ್ರಿಯದೊಳಗೆ ಆತ್ಮನು ಸರಸ್ವತಿಯೆಂಬಧಿದೇವತಾನಾಮದಿಂದ ನೆಲೆಗೊಂಡು ಏನುಂಟುಮಾಡುತಿಹನೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಸುವಾಕ್ಯ, ಅಯ್ಯ, ಜೀಯ, ದಮ್ಮಯ್ಯ, ಒನ್ನಿ ಚಿತ್ತೈಸಿ, ಮುಹೂರ್ತವಮಾಡಿ ಎಂದು ಕರದಲ್ಲಿ ವಳ್ಳಿತಾದ ಪ್ರಸಂಗವೆ ಸುವಾಕ್ಯವು. ದುರ್ವಾಕ್ಯವು=ಎಲೋತಲೋ, ಛೀ ಚೊ, ಗುಲಾಮ, ತುಂಡೆ, ತೊತ್ತೆ, ಯೆಂದು ಕರೆವ ಬಾಲಭಾಷೆಯೆ ದುರ್ವಾಕ್ಯವು ವಿಷಯ=ಈ ಎರಡು ಪ್ರಕಾರವಾದ ಮಾತು ಕ್ರಿಯೆಗಳ ಮಾತನಾಡಬೇಕೆಂಬ ಪ್ರಯೋಜನವೆ ಮುಂದುಗೊಂಡಿರುತಿಹನಾತ್ಮನು ಹಸ್ತವೆನಿಸಿಕೊಂಬುವದೊಂದಿಂದ್ರಿಯಕ್ಕೆ ಕೂರ್ಮವಾಯುವೆ ಮೂಲಚೈತನ್ಯವಾಗಿಪ್ಪುದು. ಆ ಕೂರ್ಮವಾಯು ವೆಂಬುವದೊಂದು ತಾನು ಪಾಣೀಂದ್ರಿಯಕ್ಕೇನುಕಾರಣ ಮೂಲಚೈತನ್ಯವಾಗಿಪ್ಪದೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಕೂರ್ಮವಾಯುವೆಂಬ ಮೂಲಭೂತವು ಪಾಣೀಂದ್ರಿ

ಯದಲ್ಲಿ ವಾಸವಾಗಿದ್ದಕಾಲದಲ್ಲಿ ಆವುದಾನೊಂದು ಆದಾನ ವಿದಾನ ಕ್ರಿಯೆಗಳಿಗೆ ಸುಸ್ಥಿರವಾಗಿರುವದು ಯಾವುದಾನೊಂದುವೇಳೆ ಆ ಇಂದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿ ಪೋಗಲು ತೋಳೆಂಬ ಬಂಧವು ಬೀಳುತೋಳು ಬಿದ್ದುಕೊಂಡು ಆವುದಾನೊಂದು ಆದಾನ ವಿದಾನ ಕ್ರಿಯೆಗಳಿಗೆ ಸುಸ್ಥಿರವಾಗಿ ಬರಲರಿಯದು. ಅದು ಕಾರಣವಾಗಿ ಹಸ್ತೇಂದ್ರಿಯಕ್ಕೆ ಕೂರ್ಮವಾಯುವೆ ಮೂಲಚೈತನ್ಯವಾಗಿಪ್ಪುದೆಂದೇ ತಿಳಿದುಕೊಂಬುವದು. ಆತ್ಮನು ತಾನೆ ಇಂದ್ರನೆಂಬಧಿದೇವತಾ ನಾಮದಿಂದ ಸದಾ ವಾಸವಾಗಿರುತಿಹನು. ಅಲ್ಲಾ ಇಂದ್ರಿಯದೊಳಗೆ ಆತ್ಮನು ತಾನೆ ಇಂದ್ರನೆಂಬಧಿದೇವತಾ ನಾಮದಿಂದ ವಾಸವಾಗಿ ಯೇನುಂಟುಮಾಡುತಿಹನೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ— ಆದಾನ ಆವುದಾನೊಂದು ವಸ್ತುವನ್ನು ಕವಳೀಕರಿಸಿ ಹಿಡಿವುದೆ ಆದಾನವು, ವಿದಾನ=ಕವಳೀಕರಿಸಿ ಹಿಡಿದ ವಸ್ತುಗಳನ್ನು ಮರಳಿ ಬಿಡುವುದೆ ವಿದಾನವು. ವಿಷಯವೀ ಎರಡು ಪ್ರಕಾರವಾದ ಕ್ರಿಯೆಗಳ ಮಾಡಬೇಕೆಂಬ ಪ್ರಯೋಜನವೆ ಮುಂದುಗೊಂಡಿರುತಿಹನಾತ್ಮನು. ಪಾದೇಂದ್ರಿಯಕ್ಕೆ ಕೃಕರವಾಯುವೆ ಮೂಲಚೈತನ್ಯವಾಗಿಪ್ಪುದು. ಆ ಕೃಕರವಾಯುವೆಂಬುವದು ತಾನು ಚರಣೇಂದ್ರಿಯಕ್ಕೇನು ಕಾರಣ ಮೂಲಚೈತನ್ಯವಾಗಿಪ್ಪುದೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಕೃಕರವಾಯುವೆಂಬ ಮೂಲಭೂತವು ಪಾದೇಂದ್ರಿಯದೊಳಗೆ ವಾಸವಾಗಿದ್ದಕಾಲದಲ್ಲಿ ಆವುದಾನೊಂದು ಪ್ರೇಹಬಾಹ ಯೆಡೆಯಾಟಕ್ಕೆ ಸುಸ್ಥಿರವಾಗಿರುವದು. ಯಾವುದಾನೊಂದುವೇಳೆ ಆ ಇಂದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿ ಪೋಗಲು ಕಾಲುಗಳೆಂಬ ಬಂಧವು ಸರವೆಗಾಲು ಬಿದ್ದುಕೊಂಡು ಆವುದಾನೊಂದು ಪ್ರೇಹಬಾಹ ಯೆಡೆಯಾಟಂಗಳಿಗೆ ಸುಸ್ಥಿರವಾಗಿ ಬರಲರಿಯದು. ಅದುಕಾರಣವಾಗಿ ಪಾದೇಂದ್ರಿಯಕ್ಕೆ ಕೃಕರವಾಯುವೆ ಮೂಲಚೈತನ್ಯವಾಗಿಪ್ಪುದು. ಅಲ್ಲಿ ಆತ್ಮನು ತಾನೆ ನಾರಾಯಣನೆಂಬಧಿದೇವತಾ ನಾಮದಿಂದ ಸದಾ ವಾಸವಾಗಿರುತಿಹನು. ಅಲ್ಲಾ ಇಂದ್ರಿಯದೊಳಗೆ ಆತ್ಮನು ತಾನೆ ನಾರಾಯಣನೆಂಬಧಿದೇವತಾ ನಾಮದಿಂದ ವಾಸವಾಗಿ ಏನುಂಟುಮಾಡುತಿಹನೆಲೆ ಸ್ವಾಮಿ ಯೆಂದು ಬೆಸಗೊಂಡೊಡೆ—ಆವುದಾನೊಂದು ಕಾರ್ಯವನೆ ಕುರಿತೈದುವದೆ ಗಮನ ಆ ಕಾರ್ಯವು ಆಗಲಿ ಆಗದೆಹೋಗಲಿ

ಮರಳಿ ತಿರಿಗಿಬರುವದೆ ವಿಷಯು. ಎರಡು ಪ್ರಕಾರವಾದ ಕ್ರಿಯೆಗಳ
ಮಾಡಬೇಕೆಂಬ ಪ್ರಯೋಜನವನೆ ಮುಂದುಗೊಂಡಿರುತಿಹನಾತ್ಮನು.
ಗುದವೆಂಬುವದೊಂದು ಕ್ರಿಯಾರೂಪವಾದ ಹೃಷೀಕಕ್ಕೆ ದೇವದತ್ತ
ವಾಯುವೆ ಮೂಲಚೈತನ್ಯವಾಗಿಪ್ಪುದು. ಗುದೇಂದ್ರಿಯಕ್ಕೆ ದೇವದ
ತ್ತವಾಯುವೇನುಕಾರಣ ಮೂಲಚೈತನ್ಯನಾಗಿಪ್ಪುದೆಲೆಸ್ವಾಮಿ ಯೆಂದು
ಬೆಸಗೊಂಡೊಡೆ ಆ ದೇವದತ್ತವಾಯುವೆಂಬ ಮೂಲಭೂತವು ಗುದೇಂ
ದ್ರಿಯದಲ್ಲಿ ವಾಸವಾಗಿದ್ದಕಾಲದಲ್ಲಿ ಆವುದಾನೊಂದು ಸರ್ಜನವಿಸರ್ಜನ
ಕ್ರಿಯೆಗಳಿಗೆ ಸುಸ್ಥಿರವಾಗಿಬರುವದು ಯಾವುದಾನೊಂದುವೇಳೆ ಆ ಇಂ
ದ್ರಿಯದಲ್ಲಿರ್ದ ಮೂಲಭೂತವು ನಷ್ಟವಾಗಿಹೋಗಲು ಆವುದಾನೊಂದು
ಸರ್ಜನವಿಸರ್ಜನಕ್ರಿಯೆಗಳಿಗೆ ಸುಸ್ಥಿರವಾಗಿಬರಲರಿಯದು. ಅದು
ಕಾರಣವಾಗಿ ಗುಹ್ಯೇಂದ್ರಿಯಕ್ಕೆ ದೇವದತ್ತವಾಯುವೆ ಮೂಲಚೈತನ್ಯ
ವಾಗಿಪ್ಪುದು ಮೃತ್ಯು ಅಧಿದೇವತೆ ಅಲ್ಲಿ ಆತ್ಮನುತಾನೆ ಮೃತ್ಯುವೆಂಬಧಿ
ದೇವತಾನಾಮದಿಂದ ಸದಾ ವಾಸವಾಗಿರುತಿಹನು. ಆ ಇಂದ್ರಿಯದೊ
ಳಗೆ ಆತ್ಮನು ಮೃತ್ಯುವೆಂಬಧಿದೇವತಾನಾಮದಿಂದ ವಾಸವಾಗಿ ಯೇನುಂ
ಟುಮಾಡುತಿಹನೆಲೆಸ್ವಾಮಿಯೆಂದು ಬೆಸಗೊಂಡೊಡೆ—ಒಂದಾನೊಂದು
ಕಟ್ಟಲೆಚೀಲದ ಬಾಯಿದಾರವನು ಸಡಲಗೊಳಿಸಿ ಒಳಗಿದ್ದಭಾಂಡವ ಒರಿ
ಸಿಕ್ಕುವೋಪಾದಿಯಲ್ಲಿ ಗುದಗುಹ್ಯಗಳೆರಡನು ತೆರವುಗೊಳಿಸಿ ಒಳಗಿರ್ದ
ಮಲಮೂತ್ರಗಳನು ಹೊರಹೊರಡಿಸಿ ಸರ್ಜನ ಆ ಮಲಮೂತ್ರಂಗಳು
ಹೋದನಂತರದಲ್ಲಿಗುದಗುಹ್ಯಂಗಳೆರಡುಹಾಂಗೆ ತೆರವುಕೊಂಡಿರ್ದರೆಪಿಂಡಿ
ದಹರಿತೆ ಕೆಟ್ಟತಲಾ ಆಕಟ್ಟಲೆಚೀಲದ ಬಾಯಿದಾರವಬಿಗಿಬಿಗಿದುಬಂಧಿಸು
ವೋಪಾದಿಯಲ್ಲಿ ಗುದಗುಹ್ಯಂಗಳೆರಡನು ಬಿಗಿಬಿಗಿದು ಬಂಧವಮಾಡಿ,
ವಿಷಯು ಈ ಎರಡುಪ್ರಕಾರವಾದಕ್ರಿಯೆಗಳ ಮಾಡಬೇಕೆಂಬ ಪ್ರಯೋಜ
ನವನು ಮುಂದುಗೊಂಡಿರುತಿಹುದು. ಗುಹ್ಯೇಂದ್ರಿಯಕ್ಕೆ ಗೋಪ್ಯವೆನಿ
ಸಿಕೊಂಬುವದೊಂದು ಕ್ರಿಯಾರೂಪವಾದ ಹೃಷೀಕಕ್ಕೆ ಧನಂಜಯವಾ
ಯುವೇ ಮೂಲಚೈತನ್ಯವಾಗಿಪ್ಪುದು. ಆ ಧನಂಜಯವಾಯುವೆಂಬ
ದುತಾನು ಗುಹ್ಯೇಂದ್ರಿಯಕ್ಕೇನುಕಾರಣ ಮೂಲಚೈತನ್ಯವಾಗಿಪ್ಪ
ದೆಲೆಸ್ವಾಮಿಯೆಂದು ಬೆಸಗೊಂಡೊಡೆ ಧನಜಯವಾಯುವೆಂಬ ಮೂಲ
ಭೂತವು ಗುಹ್ಯೇಂದ್ರಿಯದಲ್ಲಿ ವಾಸವಾಗಿದ್ದಕಾಲದಲ್ಲಿ ಆವುದಾನೊಂದು
ಸಂಸಾರಮಥನಕ್ಕೆ ಸುಸ್ಥಿರವಾಗಿಬರುವದು ಯಾವುದಾನೊಂದುವೇಳೆ

ಆ ಇಂದ್ರಿಯದಲ್ಲಿರ್ದಮೂಲಭೂತವು ನಷ್ಟವಾಗಿಪೋಗಲು ಅವುದಾ
ನೊಂದುಸಂಸಾರಮಥನಕ್ಕೆ ಸುಸ್ಥಿರವಾಗಿಬರಲರಿಯದು. ಅದುಕಾರಣ
ವಾಗಿ ಗುಹ್ಯೇಂದ್ರಿಯಕ್ಕೆ ಧನಂಜಯುವಾಯುವೆ ಮೂಲಚೈತನ್ಯವಾಗಿ
ಪ್ಪುದು. ಬ್ರಹ್ಮನಧಿದೇವತೆ ಆತ್ಮನುತಾನೆ ಅಜನೆಂಬಧಿದೇವತಾನಾವು
ದಿಂದ ವಾಸವಾಗಿನೆಲೆಗೊಂಡು ಏನುಂಟುಮಾಡುತಿಹನೆಲೆಸ್ವಾಮಿಯೆಂದು
ಬೆಸಗೊಂಡೊಡೆ ಆನಂದ, ತರ್ಜನ, ವಿಡಂಬನ, ಘರ್ಷಣ, ತಾಡನ, ಅಧರ
ಚುಂಬನಾದಿಗಳಿಂದ ಆಲಿಂಗಿಸಿ ರತಿಸುಖವನುಭಿಸುವಲ್ಲಿ ಪುಟ್ಟುವಂತವಿಷ
ಯಾನಂದವೆ ಆನಂದ ಆರತ್ಯಂತರದಲ್ಲಿ ತಲೆಯನುಕೆದರಿಕೊಂಡುಮೊಲೆಯ
ನುಬಿಚ್ಚಿಕೊಂಡು ಅವಯವಂಗಳನುತೆರದುಕೊಂಡುಆಸ್ತ್ರೀಯಳೊಂದು
ಕಡೆಯಲ್ಲಿ ಬಿದ್ದುಕೊಂಡಿರುವಳು. ಆ ಪುರುಷನು ತಾನೊಂದುಕಡೆ
ಬಿದ್ದುಕೊಂಡಿರುವನು. ಅಷ್ಟರಲ್ಲಿ ನಿದ್ರೆತೀರಿಯೆದ್ದು ಕುಳಿತುಕೊಂಡು
ಆ ಪುರುಹನು ಆ ಸ್ತ್ರೀಯಳ ನಿರೀಕ್ಷಣೆಮಾಡಿದಲ್ಲಿ ಆ ಸ್ತ್ರೀಯಳು
ಸತ್ತಶ್ರವಕಿಂತಕಡೆಯಾಗಿ ಆಕೆಯಳಯೋನಿಯೆ ತಸ್ಕಾನದಕುಳಿಯಿಂದ
ಅತ್ತತ್ತಕ್ಷೀಣವಾಗಿಪ್ಪದು. ಈರ್ವರಮಧ್ಯದಲ್ಲಿಪುಟ್ಟದಬೆವರು ಬಿಂದು
ಗಳೆಹೆಬ್ಬಡಿಕೆಹೊಡವುತ್ತಿದ್ದಲ್ಲಿ ಸತ್ತಮೇಲೆ ನರಕಕ್ಕೆಹಾಕುತ್ತಿದ್ದಾರೆಂದು
ಹೇಳುವರು. ಇಹದಲ್ಲಿಯೆನಗೆ ನರಕಸಂಭವಿಸಿತಲ್ಲ. ಇನ್ನೆಪ್ಪಬಾರ
ದು ಅಪ್ಪಬಾರದೆಂಬತಿಹೇಸಿಕೆತೋರುವದೆ. ಅನಾನಂದವು ವಿಷಯ
ಈ ಎರಡುಪ್ರಕಾರಮಾದಕ್ರಿಯೆಗಳಮಾಡಬೇಕೆಂಬ ಪ್ರಯೋಜನವನೆ
ಮುಂದುಕೊಂಡಿರುತಿಹನು. ಈಪ್ರಕಾರದಿಂದಪೇಳಲ್ಪಟ್ಟಂತ ಇವುತಾನೆ
ಕ್ರಿಯಾರೂಪಮಾದ ಪಂಚಹೃಷೀಕಂಗಳ ಹಸಿಗೆಯವಿಚಾರವನು ತಿಳಿ
ದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೭ಕ್ಕೆ ಮಂಗಳಮಹಾ.

---

## ದ ಶ ವಾ ಯು ಗ ಳು.

ತದನಂತರದಲ್ಲಿ ದಶವಾಯುಗಳು ಹತ್ತುಪ್ರಕಾರವಾದ ಮಾರುತ
ಗಳನಿವರವನ್ನು ತಚ್ಛಿಷ್ಯಂಗೆನಿರೂಪಿಸುತಿಹರು, ಅವರಸ್ವಭಾವನು
ಪೇಳುತಿಹರು. ಅವುತಾವುಯೆಂತಾವೆಲೆಸ್ವಾಮಿಯೆಂದು ಬೆಸಗೊಂಡೊಡೆ
ದಶವಾಯುಗಳಸ್ಥಾನ ಧರ್ಮಸ್ವಭಾವಸ್ಥಿತಿಗಳು ಕರ್ಮ ಮಾಡುವಂತೆ

ಉದ್ಯೋಗಗಳು, ವರ್ಣಂಗಳು, ಕಾಯಕಾಂತಿಗಳು, ಆವಾವೆಂದೊಡೆ.— ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯವೆಂದು ಇವ್ರುಹತ್ತಾವೆ ದಶವಾಯುಗಳು. ಈಹತ್ತು ಪ್ರಕಾರವಾದ ಮರುತಂಗಳಿಗೆ ವಿವರ—ಮುಂದೆ ವಿಚಾರವಾಗಿ ಹಸಿಗೆಯ ಮಾಡಿ ನಿರೂಪಿಸುತಿಹರು ಪ್ರಾಣವಾಯುಪ್ರಾಣವೆನಿಸಿಕೊಂಬುವದೊಂದು ಮರುತನು. ಇಂದ್ರನೀಲವರ್ಣ ಇಂದ್ರನೀಲದರಳಿನಕಾಂತಿಯಿಂದಿಹು ದು. ಅದುಹ್ಯಾಗೆಂದೊಡೆ;—ಇಂದ್ರವೆಂದೊಡೆ ಕೆಂಪು, ನೀಲವೆಂದೊಡೆ ಕರಿದು, ಕೆಂಪು, ಕರಿದು, ಹಳದಿ, ಹಸುರೆಂಬ ನಾಲ್ಕುಬಣ್ಣದೊಡನೆಕೂ ಡಿರುವದೆ ಇಂದ್ರಧನು—ಇಂತಪ್ಪಿಂದ್ರನೀಲದರಳಿನಕಾಂತಿಯಿಂದಿಹುದು. ಅದೆ ಅದರ ಮೈಕಾಂತಿಯು. ಹೃದಯಸ್ಥಾನದಲ್ಲಿರ್ದ ಹೃತ್ಕಮಲಕರ್ಣಿ ಕಾಕುಹರವನೆ ತನಗೆವಾಸವನುಮಾಡಿಕೊಂಡು ಸದಾತಾನಲ್ಲಿ ಚೈತನ್ಯವಾಗಿ ನೆಲಸಿರ್ದ ಅದೆ ಅದರಸ್ಥಾನವು. ಅಂಗುಷ್ಠತೊಡಗಿ ತುದಿಹೆಬ್ಬೆರಳನೆ ಮೊದಲುಮಾಡಿಕೊಂಡು ನಾಸಿಕತುದಿಯತನಕಲು ಸತ್ಪ್ರಾಣಿಸಿಕೊಂಡು ವೆಳ್ಳಿತಾಗಿ ಚೈತನ್ಯವಾಗಿತುಂಬಿಕೊಂಡು ಉಶ್ವಾಸನಂಗೈಸಿ ನಾಡಿಯಲ್ಲಿ ಹದಿನಾರಂಗುಲಪ್ರಮಾಣ ವಾಯು, ಪರೆ ಇಕ್ಕಿ ರೇಚಿಸಿ ನಿಶ್ವಾಸನಂಗೈಸಿ ತಿಂಗಳನಾಡಿಯಲ್ಲಿಗೆ ಹದಿನಾರಂಗುಲ ಪ್ರಾಣವಾಯುವಿನೊಳಗೆನಾಲ್ಕಂಗು ಲಪ್ರಮಾಣವಾಯುವನು ಕತ್ತರಿಸಿ ಹನ್ನೆರಡಂಗುಲಪ್ರಮಾಣ ವಾಯು ವನು ಒಳಕ್ಕೆ ಪೂರ್ಣಿಕರಿಸುತಿಹುದು, ಅದೇ ಅದರ ಸ್ವಭಾವಸ್ಥಿತಿ ಯು ಅನ್ನ ಜೀರ್ಣಕರಮಂ ಮಾಡಿಸುತಿಹುದು. ಆತ್ಮನನುಭವಿಸಿದಂ ತನ್ನಪಾನಾದಿಗಳನುಪಚನಕೃತ್ಯವನ್ನೈದಿಸುತಿಹುದು. ಅದೇ ಅದುಮಾ ಡುವಂತವುದ್ಯೋಗವು— ಇದಕ್ಕೆ ಸ್ಥಾನಧರ್ಮಕರ್ಮವರ್ಣಂಗಳುಂ ಟೆಂದೆ ತಿಳಿದುಕೊಂಬುವದು ತತ್ವಜ್ಞಾನಿಗಳು. ಅಪಾನವಾಯುವು— ಅಪಾನವೆನಿಸಿಕೊಂಬುವದೊಂದುಮರುತನು. ಹರಿತವರ್ಣ, ಪಚ್ಚೆ ಅರ ಳಿನಕಾಂತಿಯಿಂದಿಹುದು ಅದೆ ಅದರಮೈಕಾಂತಿಯು. ಗುದಸ್ಥಾನದಲ್ಲಿ ರ್ದ ಪಾಯುಸ್ಥಾನವನೆ ತನಗೆ ವಾಸವಮಾಡಿಕೊಂಡು ತಾನಲ್ಲಿಸದಾ ಚೈತನ್ಯವಾಗಿನೆಲಸಿರ್ದ ಅದೆ ಅದರಸ್ಥಾನವು. ಮಲಮೂತ್ರಂಗಳಂ ವಿಸರ್ಜನವಮಾಡಿ ಒಂದಾನೊಂದುಕಟ್ಟಳೆಯಚೀಲದಬಾಯಿದಾರವಸಡ ಳಿಸಿ ಒಳಗಿರ್ದಭಾಂಡವಬರಿಗೈಯ್ಯೋಪಾಧಿಯಲ್ಲಿ ಗುದಗುಹ್ಯಂಗಳೆರಡ ನು ತೆರವುಗೊಳಿಸಿ ಒಳಗಿರ್ದವಿಣ್ಮೂತ್ರಂಗಳನು ಹೊರಹೊರಡಿಸಿ

ಅಧೋದ್ವಾರವುಂಬಲಿದು ಹಾಂಗೆಯಿದ್ದರೆ ಪಿಂಡದರೀತಿಕೆಟ್ಟೀತೆಂಬ ಆ ಕಟ್ಟಳೆಚೀಲದ ಬಾಯಿದಾರವಬಿಗಿಬಿಗಿದು ಬಂಧನವಮಾಡುವಹಾಗೆ ಮಲಮೂತ್ರಂಗಳನುಬಿದ್ದುಹೋದಬಳಿಕ ಎಂದಿನಂತೆಗುದಗುಹ್ಯಂಗಳೆ ರಡನ್ನುಬಿಗಿಬಿಗಿದು ಬಂಧನವಮಾಡುತಿಪ್ಪುದು ಅದೇಅದರಸ್ವಭಾವವು. ಅನ್ನರಸವ್ಯಾಪ್ತಿಯಂಮಾಡಿಸುತ್ತಿಹುದು. ಅನ್ನೋದಕಂಗಳ ತೆಗೆದು ಕೊಳ್ಳಬೇಕೆಂಬ ಇಚ್ಛೆಯನ್ನುಂಟುಮಾಡಿಸುತ್ತಿಹುದು. ಅದೆ ಅದುಮಾ ಡುವ ಉದ್ಯೋಗವು. ಇದಕ್ಕೆ ಸ್ಥಾನಧರ್ಮಕರ್ಮಂಗಳುಂಟೆಂದೆತಿಳಿ ದುಕೊಂಬುವದು ತತ್ವಜ್ಞಾನಿಗಳು, ವ್ಯಾನವಾಯು, ವ್ಯಾನವಾಯು ವೆನಿಸಿಕೊಂಬುವದೊಂದು ಮಾರುತನು, ಗೋಕ್ಷೀರದವರ್ನ, ಆಕಳ ಹಾಲಿನ ಕಾಂತಿಯಿಂದಿಹುದು, ಅದುಹ್ಯಾಗೆಂದೊಡೆ,—ಮಹಿಷಾಕ್ಷೀರ ವೆ ಶುದ್ಧಧವಳಮುಚುವಾಗಿಹುದು. ಆಕಳಹಾಲು ಕೆಂಪಿನಕಾಂತಿಯಿಂ ದಿಹುದು. ಆಕಳಹಾಲಿನ ಕಾಂತಿಯೊಡನೆಕೂಡಿರುತಿಹುದು. ಅದೇ ಅದರ ಮೈಕಾಂತಿಯು. ಸರ್ವಸಂಧಿಯಲ್ಲಿರ್ದು ಶರೀರದಲ್ಲಿ ಎಂಟುನಾ ಡಿರಸಂದುಗಳಿಂದುಂಟಾಗಿರುತಿಹುದು. ಆ ಸಕಲಸಂದುಗಳನೆ ತನ ಗೆವಾಸವಮಾಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲಸಿರುವದೆ ಅದರ ಸ್ಥಾನವು. ನೀಡಿಕೊಂಡಿಹುದನು ರುಜೋಕ್ತವಾಗಿರುವಂತ ಕೆಲವುನಾ ಡಿಗಳನ್ನು ಮುದಡಿಕೊಂಡಿಹುದನ್ನು ವಕ್ರಗತಿಯಾಗಿರುವಂತ ಕೆಲವು ನಾಡಿಗಳನ್ನು ಅನುಮಾಡಿಸಿ ತಾನಲ್ಲಿಹೊಕ್ಕು ಚರಿಸಿನೇರಿತವಮಾಡಿಸಿ ಅದೆಅದರಸ್ಥಾನವು.ಅನ್ನಪಾನವಂತುಂಬಿಸುತ್ತಿಹುದು.ಆತ್ಮನುಅನುಭವಿ ಸಿದಂತಅನ್ನೋದಕಂಗಳನುಕಣಜಪಣತಂಗಳಿಗೆಹದಿನೆಂಟುಧಾನ್ಯಂಗಳ ತುಂಬುವ್ರೋಪಾದಿಯಲ್ಲಿ ತುಂಬುಪೂರ್ಣೆ ಎಂದು ಪೂರ್ಣೀಕರಿಸುತ್ತಿಹು ದು. ಅದೆ ಅದುಮಾಡುವ ಉದ್ಯೋಗವು, ಇದಕ್ಕೆ ಸ್ಥಾನ ಧರ್ಮಕ ರ್ಮವರ್ನಂಗಳುಂಟೆಂದೆತಿಳಿದುಕೊಂಬುವದು ತತ್ವಜ್ಞಾನಿಗಳು, ಉದಾ ನವಾಯುವು, ಉದಾನವೆನಿಸಿಕೊಂಬುವದೊಂದು ಮಾರುತನು—ಮಿ ಮಿಂಚಿನವರ್ನ—ಒಂದಾನೊಂದು ಬಳ್ಳಿಮಿಂಚಿನಕಾಂತಿಯಿಂದಿಹುದು ಅದೆ ಅದರಮೈಕಾಂತಿಯು. ಕಂಠಸ್ಥಾನದಲ್ಲಿರ್ದುಗಳಸ್ಥಾನವನೆ ತನಗೆ ವಾಸವಮಾಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲಸಿರ್ದುದೆ ಅದರ ಸ್ಥಾನವು. ಸೀನುವನಾಸಿಕದಲ್ಲಿ ನಸೆಪುಟ್ಟಿಸಿ ಹತ್ತಿಂಟುವೇಳೆ ಸೀನು ಕ್ಷುಧಾಕರಣಂಗೈಸಿ ಕೆಮ್ಮುನ ಗಂಟಲಲ್ಲಿ ತಿಮಿರವಹುಟ್ಟಿಸಿ ಕೆಂಮುಶ್ವಾ

ಸೋಚ್ಛ್ವಾರಣೆಯೆಂದು ಹತ್ತಿಂಟುವೇಳೆ ಶ್ವಾಸೋಚ್ಛ್ವಾರಣೆಯೆಂಗೈಸಿ ಕನ
ಸಕಾಂಬುವ ಸುಖದುಃಖಮೋಹರೂಪವಾದ ಸ್ವಪ್ನಾವಸ್ಥೆಯನ್ನುಂಟು
ಮಾಡಿಸುವ ಸುಷುಪ್ತಿಗತನಾಗಿವರಗಿದ್ದ ಆತ್ಮನಿಗೆ ಎಚ್ಚರವಪುಟ್ಟಿಸಿಎಚ್ಚರಿಸಿ
ರಾತ್ರಿಕಾಲದಲ್ಲಿ ತೆಗದುಕೊಂಡಂತ ಅನ್ನೋದಕಂಗಳು ಪಚನವಾಗದೆ ಇ
ದ್ದಲ್ಲಿ ವಾಂತಿಯಂಮಾಡಿಸಿರೋದನಂಗಳಂಮಾಡಿಸಿವಾಂತಿಯಾಗುವಾಗಕ
ಣ್ಣಿನಲ್ಲಿಮೂಗಿನಲ್ಲಿನೀರನ್ನು ಒರಿಸಿ ಸರ್ವಾಂಗವನೆಲ್ಲಬೆವರಿಸಿ ದುಃಖಾವಸ್ಥೆ
ಯನ್ನುಂಟುಮಾಡಿಸುವದೆ ಅದರಸ್ವಭಾವಸ್ಥಿತಿಯು. ಅನ್ನರಸ ಆಹಾ
ರಸ್ಥಾಪನಂಗೈಸುತ್ತಿಹುದು. ಆ ವಾಂತಿಯಾಗುಳಿದಂತ ಅನ್ನೋದಕಂ
ಗಳನ್ನು ಮತ್ತೆಂದಿನಂತೆ ಅನ್ನ ಉದಕವಿದ್ದಸ್ಥಾನಕ್ಕೆ ಅನ್ನೋಕವನು
ಸ್ವಸ್ಥವಾಗಿ ನೆಲಗೊಳಿಸುತಿಹುದು ಅದೆ ಅದುಮಾಡುವ ಉದ್ಯೋಗವು.
ಇದಕ್ಕೆ ಸ್ಥಾನ ಧರ್ಮಕರ್ಮವರ್ಣಂಗಳುಂಟೆಂದೆ ತಿಳಿದುಕೊಂಬುವದು
ತತ್ವಜ್ಞಾನಿಗಳು, ಸಮಾನವಾಯು, ಸಮಾನವೆನಿಸಿಕೊಂಬುವದೊಂದು
ಮಾರುತನು, ನೀಲವರ್ನ, ಕರ್ಣಕಿಟ್ಟುಕೊಂಬುವಂತ ನೀಲದರ್ಶನಕಾಂ
ತಿಯಿಂದಿಹುದು ಅದೆ ಅದರ ಮೈಕಾಂತಿಯು. ನಾಭಿಸ್ಥಾನದಲ್ಲಿರ್ದು
ಹೊಕ್ಕುಳಸ್ಥಲವನ್ನೆ ತನಗೆವಾಸವಮಾಡಿಕೊಂಡು ತಾನಲ್ಲಿ ಸದಾಚೈತ
ನ್ಯವಾಗಿನೆಲಸಿರ್ದುದೆ ಅದರಸ್ಥಾನವು. ಆಪಾದಮಸ್ತಕ ಪರ್ಯಂತ
ರವು ಸತ್ಪ್ರಾಣಿಸಿಕೊಂಡು ಚೈತನ್ಯವಾಗಿ ತುಂಬಿಕೊಂಡು ಅದೆ ಅದರ
ಸ್ಥಾನವು, ಆತ್ಮನು ಅನುಭವಿಸಿದಂತ ಅನ್ನ ಉದರಾಗ್ನಿಯಿಂದಪಚ
ನವಾಗಿ ಕಿಟ್ಟವೆಂದುರಸವೆಂದೆರಡುತರನಪ್ಪುದು, ಆಕಿಟ್ಟವೆ ಗುದಗುಹ್ಯಾಂ
ಗಳೊಳಗೆ ಮಲಮೂತ್ರರೂಪಿನಿಂದ ಬಿದ್ದುಹೋಗುವದು. ಆ ರಸವಂ
ಎಲ್ಲಾ ರೋಮನಾಳಂಗಳಿಗೆ ಶರೀರದಲ್ಲಿ ಎಂಟುಕೋಟಿ ರೋಮನಾಳಂಗ
ಳೆಂದುಂಟಾಗಿರುತಿಹುದು. ಆ ಸಕಲ ರೋಮಕೂಪಂಗಳಿಗೆ ಅಂಚಿಕಾ
ಕುತ್ತಿಹುದು. ಅದುಹ್ಯಾಗೆಂದೊಡೆ,—ಒಬ್ಬಾನೊಬ್ಬ ಪ್ರವೀಣಪುರು
ಷನು ಜೇರಿಗೆಮಡಿಗೆ ನೀರುಕಟ್ಟುವಲ್ಲಿ ಹೆಚ್ಚಾಗಿಕಟ್ಟಿದರೆ ಕೊಳತೀತು
ಕಡಮೆಯಾಗಿಕಟ್ಟಿದರೆ ಒಣಗೀತು ಎಂದು ಅಂತು ಹೆಚ್ಚಾಗದಹಾಂಗೆ
ಕಡಮೆಯಾಗದಹಾಂಗೆ ಒಂದೆಸಮವಾಗಿ ಹ್ಯಾಂಗೆ ನೀರುಬಿಡುತ್ತಿಹನೊ
ಹಾಂಗೆ ಹಸಿಗೆಯುಮಾಡಿ ಹಸಿಗೆಯುಮಾಡಿಹಾಕುತ್ತಿಹುದು. ಅದೆ ಅದು
ಮಾಡುವ ಉದ್ಯೋಗವು. ಇದಕ್ಕೆ ಸ್ಥಾನ ಧರ್ಮಕರ್ಮವರ್ಣಂಗ
ಳುಂಟೆಂದೆತಿಳಿದುಕೊಂಬುವದು ತತ್ವಜ್ಞಾನಿಗಳು. ಈ ಐದು ಪ್ರಾಣ

ಪಂಚಕವು ಆತ್ಮನೊಡನೆಕೂಡಿದ ಮಾರುತಂಗಳು ಇವಕ್ಕೆ ಪ್ರಾಣಪಂಚ ಕವೆಂಬನಾಮವು ಏನುಕಾರಣಕ್ಕೆ ಬಂದೀತೆಲೆಸ್ವಾಮಿಯೆಂದು ಬೆಸಗೊ ಡೊಡೆ ಆತ್ಮನು ಘಟವಿಡಿದುಹುಟ್ಟುವಾಗ ಆತ್ಮನೊಡನೆಹುಟ್ಟಿ ಆತ್ಮ ಘಟದಲ್ಲಿ ಜೀವಿಸಿಕೊಂಡಿರುವಪರ್ಯಂತರವು ಆತ್ಮನ ಸಕಲವ್ಯವಹಾರಂ ಳಿಗೆ ತಾವೆಸಹಾಯಗಳಾಗಿ ಆತ್ಮನು ಘಟವಬಿಟ್ಟುಹೋಗುವಾಗಲು ಸೂ ರ್ಯನಕಿರಣಂಗಳು ಸೂರ್ಯನೊಡನೈದುವಹಾಂಗೆ ಆತ್ಮನೊಡನೈದುತ್ತಿ ಹವಾದಕಾರಣ ಇವಕ್ಕೆ ಪ್ರಾಣಪಂಚಕವೆಂಬಭಿಧಾನವು ಪ್ರಸಿದ್ಧವಾ ತೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೪ಕ್ಕೆ ಮಂಗಳಂ.

ತದನಂತರದಲ್ಲಿ ನಾಗವಾಯುವೆನಿಸಿಕೊಂಬುವದೊಂದು ಮರು ನು. ಪೀತವರ್ಣ ಹಳದಿವರ್ಣದಕಾಂತಿಯಿಂದಿಹುದು, ಅದೆ ಅದ ಕ್ಕೆಕಾಂತಿಯು. ಎಲ್ಲಾರೋಮನಾಳಂಗಳಲ್ಲಿರ್ದು ಶರೀರದಲ್ಲಿಯೆಂಟು ಕೋಟಿರೋಮನಾಳಂಗಳೆಂದುಂಟಾಗಿರುತಿಹವು. ಆ ಸಕಲರೋಮಕ ಪಂಗಳೆ ತನಗೆವಾಸವಮಾಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲಸಿ ರ್ದುದೆ ಅದರಸ್ಥಾನವು, ಚಲನೆಯಿಲ್ಲದ ಒಬ್ಬರಸ್ಸು ದಾರಢ್ಯರೆಂ ಲಜ್ಜಾಭಿಮಾನವು ಕಿಂಚಿತು ಕುರುಹುಕಾಣಿಸದೆ ಅದೆ ಅದರಸ್ವಭಾವವು ಆಡಿಸುತಿಹುದು ಯೆಂತಪ್ಪ ಆಯಾಸಕ್ರಿಯೆಗಳಮಾಡುತಿದ್ದರು. ಆಪ ಯುತಲೆದೋರಿದಾಗ ಆ ಎಂಬಾಲಾಪನಧ್ವನಿಗಳಿಂದ ರಾಗರಚನೆಸುಪ ಡಿಸುತಿಹುದು. ಅದೆ ಅದುಮಾಡುವ ಉದ್ಯೋಗವು. ಇದಕ್ಕೂ ಸ್ಥಾನ ಧರ್ಮವರ್ಣಂಗಳುಂಟೆಂದೆತಿಳಿದುಕೊಂಬುವದು ತತ್ವಜ್ಞಾನಿಗಳು.

ಕೂರ್ಮನೆನಿಸಿಕೊಂಬುವದೊಂದುಮರುತನು. ಸ್ವೇತವರ್ಣ—ಧವ ಳವರ್ಣದಕಾಂತಿಯಿಂದಿಹುದು, ಅದೆ ಅದರಕಾಂತಿಯು. ಉದರಲಲಾಟದ ಲ್ಲಿರ್ಪ್ಪ ಕುಕ್ಷಿಪಕ್ಷತಲೆಗಳೆಂಬೆರಡುಸ್ಥಲವನೆ ತನಗೆವಾಸವಮಾಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲಸಿರ್ದುದೆ ಅದರಸ್ಥಾನವು. ದೇಹದಭಾರಣೆ ಯನೆಲ್ಲವನ್ನು ತಾನೆವಹಿಸಿಕೊಂಡು ಶರೀರವನ್ನು ಪುಷ್ಟಿಯಮಾಡಿ ಎಡಿ ಕೊಂಡು ಅನ್ನೋದಕಗಳನ್ನು ಯಥೇಷ್ಟವಾಗಿತೆಗದುಕೊಂಡು ಶ್ಯೈ ತ್ಯೆಕ್ಕೆ ಘನಗಾತ್ರವಮಾಡಿಕೊಂಡು ಬಾಹುಕವಳಿಕವನು ಮುಚ್ಚೈತ್ತಿ ತಿಟ್ಟುತೆವರ.ಗಳತ್ತುವಲ್ಲಿ ಬಿಗಿಬಿಗಿದುಬಂಧಿಸುತ್ತ ತರವುತ್ತ ಸಮತಳಕ್ಕೆ

ಬಂದಲ್ಲಿ ಆ ಬಾಯಿಬಂಧನವನಳಿವುತ್ತ ಅದೆ ಅದರಸ್ವಭಾವವು. ಎರ ಡುಲೋಚನಗಳೊಳಗುನ್ಮೀಲನಂಮಾಡಿಸುತಿಹುದು. ಒಂದಾನೊಂದು ಪ್ರಾಣವಬಿಡುವ ಪಕ್ಷಿಯರಿಯೋಪಾದಿಯಲ್ಲಿ ಎರಡುಕಣ್ಣುರೆಪ್ಪೆಗಳನು ಪಟಪಟನೆ ಒಡದಾಡಿಸುತ್ತಿಹುದು. ಅದೆ ಅದುಮಾಡುವ ಉದ್ಯೋಗವು. ಇದಕ್ಕೂ ಸ್ಥಾನಧರ್ಮಕರ್ಮವರ್ಣಂಗಳುಂಟೆಂದೆ ತಿಳಿದುಕೊಳ್ಳುವದು ತತ್ವಜ್ಞಾನಿಗಳು. ೨. ಕೃಕರವೆನಿಸಿಕೊಂಬುವದೊಂದುಮಾರತನು. ಅಂಜನವರ್ಣ—ಸ್ತ್ರೀಯರುಕಣ್ಣಿಗೆ ಅಚ್ಚಿಕೊಂಬಕಾಡಿಗೆವರ್ಣದಕಾಂ ತಿಯಿಂದಿಹುದು ಅದೆ ಅದರವ್ಯಕಾಂತಿಯು. ನಾಸಿಕಾಗ್ರದಲ್ಲಿದ್ದ ತುದಿ ನಾಸಿಕವನೆ ತನಗೆವಾಸಮಾಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲ ಸಿರ್ದ ಅದೆ ಅದರಸ್ಥಾನವು. ಕ್ಷುದಾದಿಧರ್ಮಂಗಳಂನೆಗಳಿಸಿ ಸೀನು ಮೊದಲಾದಗುಣಂಗಳನುಂಟುಮಾಡಿಸಿ ಮತ್ತಂತುಮಲ್ಲದೆ ಹಸಿವುಮೊದ ಲಾದಗುಣಂಗಳನುಂಟುಮಾಡಿಸುವದೆ ಅದರಸ್ವಭಾವವು. ಆವುದಾನೊಂ ದುಕಾರ್ಯವ ಕುರಿತ್ತೈದೋಗುವಂತಾದ್ದ ಗಮನ. ಆಕಾರ್ಯವು ಆಗಲಿ ಆಗದೆಹೋಗಲಿ ಮರಳಿತಿರಿಗಿಬರುವದೆ ಆಗಮನಂಗಳು ಈಹೋಹಬಾಹ ಎಡೆಮಾಟಂಗಳನೆಮಾಡಿಸುತಿಹುದು ಅದೆ ಅದುಮಾಡುವ ಉದ್ಯೋಗ ವು. ಇದಕ್ಕೂ ಸ್ಥಾನಧರ್ಮಕರ್ಮವರ್ಣಂಗಳುಂಟೆಂದೆ ತಿಳಿದುಕೊಂಬು ವದುತತ್ವಜ್ಞಾನಿಗಳು. ೩. ದೇವದತ್ತವೆನಿಸಿಕೊಂಬುವದೊಂದುಮಾ ರುತನು ಸ್ಫಟಿಕವರ್ಣ—ಒಂದಾನೊಂದು ಪಳಿಕಿನ ಅರಳಿನಕಾಂತಿಯಿಂ ದಿರುತಿಹುದು ಅದೆ ಅದರವ್ಯಕಾಂತಿಯು. ಗುಹ್ಯ, ಕಠಿನಸ್ಥಾನದಲ್ಲಿದ್ದ ಗೋಪ್ಯಸ್ಥಲ ಟೊಂಕಸ್ಥಲವೆಂಬ ಎರಡುಸ್ಥಲವನೆ ತನಗೆವಾಸವಮಾ ಡಿಕೊಂಡು ತಾನಲ್ಲಿ ಸದಾಚೈತನ್ಯವಾಗಿ ನೆಲಸಿರ್ದ ಅದೆ ಅದರ ಸ್ಥಾ ನವು. ಸ್ವಸ್ಥವಾಗಿ ಕುಳ್ಳಿರ್ದಲ್ಲಿ ಮಲಗಿಸಿ ಶರೀರಕ್ಕೆ ಜ್ವಾಲೆಯ ಪು ಟ್ಟಿಸಿಸುಪ್ತಗತನಾಗಿ ಹಾಸಿಗೆಯಮೇಲೆ ಸ್ವಸ್ಥವಾಗಿ ಒರಗಿಸಿ ಮಲಗಿರ್ದ ಲ್ಲಿ ಹಾಂಗೆ ಸುಪ್ತಿಗತನಾಗಿಬರಗಿರ್ದಾಗ ಎಳಿಸಿ ಎಚ್ಚರವಹುಟ್ಟಿಸಿ ಎಬ್ಬಿ ಸಿ ನಿಂದಿರಿಸಿ ಕೋಲಿನೋಪಾದಿಯಲ್ಲಿ ನೆಟ್ಟಗೆನಿಲ್ಲಿಸಿ ಚೇತರಿಸಿ ಸರ್ವಾಂ ಗದಲ್ಲಿ ಆತ್ಮಚೈತನ್ಯವನುಂಟುಮಾಡಿಸಿ ಅದೇ ಅದರಸ್ವಭಾವವು. ಹೊರ ಳಿಗಳಗಾರೆದ್ದು ಮಾತನಾಡಿಸುತಿಹುದು. ಎಲೊತಲೊ ಅವನ್ಯಾರೊ ಇವ ನ್ಯಾರೊ ಏನುಮಾಡುತೀರೊ-ಬನ್ನೀರೊ ತನ್ನೀರೊ ಎಂದು ಸ್ವರಪಲ್ಲಟ ಧ್ವನಿಗಳಿಂದ ಪ್ರಸಂಗವನಾಡಿಸುತಿಹುದು ಅದೆ ಅದುಮಾಡುವ ಉದ್ಯೋ

ಗವು. ಇದಕ್ಕೂ ಸ್ಥಾನಧರ್ಮಕರ್ಮವರ್ಣಂಗಳುಂಟೆಂದೆ ತಿಳಿದುಕೊಂಬುವದುತತ್ವಜ್ಞಾನಿಗಳು. ೪. ಧನಂಜಯವಾಯುವೆಂಬುವದೊಂದುವಾಯುತನು ನೀಲವರ್ಣ—ಪುರುಷರುಗಳು ಕರ್ಣಕಿಟ್ಟುಕೊಂಬುವಂತ ನೀಲದೆರಳಿನಕಾಂತಿಯಿಂದಿಹುದು ಅದೆ ಅದರವರ್ಣಕಾಂತಿಯು. ಬ್ರಹ್ಮರಂಧ್ರಸ್ಥಾನದಲ್ಲಿರ್ದು ಆ ಬ್ರಹ್ಮರಂಧ್ರಸ್ಥಲವನೆ ತನಗೆವಾಸವನ್ನಾಗಿಕೊಂಡು ತಾನಲ್ಲಿ ಸದಾಚೈತನ್ಯವಾಗಿನೆಲಸಿರ್ದುದು ಅದೆ ಅದೆರಸ್ಥಾನವು. ಕರ್ಣಗಳಲ್ಲಿ ಸಮುದ್ರಘೋಷವಂಘೋಷಿಸಿ ಅಂಬುಧಿಯೆಲ್ಲಂಟಾದಬೋರುಬೋರೆಂಬ ಶಬ್ದವನುಂಟುಮಾಡುವದೆ ಅದರಸ್ವಭಾವವು. ಮರಣಕಾಲಕ್ಕೆ ನಿರ್ಘೋಷಮಪ್ಪುದು. ಆ ಶಬ್ದವು ನಿಲ್ಲುವದುಯೆಂಬಲ್ಲಿ ಮರಣಂಗಳೊಳಗೆ ದೀರ್ಘಮರಣ, ಕ್ಷಿಪ್ರಮರಣವೆಂದೆರಡುಪ್ರಕಾರವುಂಟು. ಅದು ಹ್ಯಾಗೆಂದೊಡೆ—ಶ್ಲೋ॥ ನವಭ್ರೂಸಪ್ತಕರ್ಣೇಷು ಪಂಚನೇತ್ರತ್ರಿನಾಶಕಂ । ಏಕರಾತ್ರಂತುಜಸ್ಮಾಚ ಮೃತಚಿಹ್ನಾನ್ಯಧೀಯತೇ॥ ಎಂಧು ಹೇಳುತಿಹುದಾದಕಾರಣ ದೀರ್ಘಮರಣದಿಂದ ಸಾಯುವಂತಾತ್ಮರಿಗೆ ಒಂಭತ್ತನೆಯದಿವಸಕ್ಕೆರಡುಹುಬ್ಬುಗಳು ಕಾಣಬಾರದು. ಏಳುದಿವಸಕ್ಕೆ ಎರಡುಕಿವಿಗಳು ಕೇಳಬಾರದು. ಐದುದಿವಸಕ್ಕೆ ದೃಕ್ಕುಗಳು ಪಲ್ಲಟವಾಗುವವು. ಮೂರುದಿವಸಕ್ಕೆ ತುದಿನಾಸಿಕಕಾಣಿಸದು. ಒಂದುದಿವಸಕ್ಕೆಸಾಯುವ ಆತ್ಮನಿಗೆ ನಾಲಿಗೆಬೀಳುವದು. ಇನ್ನು ತೀವ್ರಮರಣದಿಂದ ಸಾಯುವಾತ್ಮರಿಗೆ ಒಂಭತ್ತನೆಯಘಳಿಗೆಗೆರಡುಹುಬ್ಬುಗಳು ಕಾಣಬಾರದು. ಏಳನೆಯಘಳಿಗೆಗೆ ಕಿವಿಗಳುಕೇಳಬಾರದು. ಐದುಘಳಿಗೆಗೆ ದೃಕ್ಕುಗಳು ಪಲ್ಲಟವಾಗುವವು. ಒಂದನೆಯಘಳಿಗೆಗೆ ಸಾಯುವ ಆತ್ಮನಿಗೆ ನಾಲಿಗೆಬೀಳುತಿಹುದು. ಇದಲ್ಲದೆ ಇನ್ನು ಮರಣಚಿಹ್ನೆಗಳು ಅನೇಕಪ್ರಕಾರವುಂಟಾಗಿರುತಿಹವು. ಅದುಕಾರಣವಾಗಿ ಮರಣಕಾಲಕ್ಕೆ ನಿರ್ಘೋಷಮಪ್ಪುದು. ಅದೇ ಅದುಮಾಡುವ ಉದ್ಯೋಗವು. ಇದಕ್ಕೂ ಸ್ಥಾನಧರ್ಮಕರ್ಮವರ್ಣಗಳುಂಟೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು. ೫. ಈಪ್ರಕಾರದಿಂದ ಪೇಳಲ್ಪಟ್ಟಂಥ ಇವುತಾವೆ ಹತ್ತುಪ್ರಕಾರವಾದ ಮಾರುತಂಗಳ ಹಸಿಗೆಯವಿಚಾರವೆಂಬಲ್ಲಿ ಪ್ರಥಮದಲ್ಲಿ ನಿರೂಪಣವಪಾಲಿಸಿದ ಪ್ರಾಣಾದ್ಯೈದುವಾಯುಗಳು ಆತ್ಮನು ಘಟವಿಡಿದುಹುಟ್ಟುವಾಗಲು ಆತ್ಮನೊಡನೆಕೂಡಿಹುಟ್ಟಿ ಆತ್ಮನು ಘಟದೊಳಗೆಜೀವಿಸಿಕೊಂಡಿರುವಪರ್ಯಂತರವು ಆತ್ಮನ ಸಕಲವ್ಯವಹಾರಂಗಳಿಗೆ ತಾವೇ

ಸಹಾಯಂಗಳಾಗಿ ಆತ್ಮನು ಘಟವಬಿಟ್ಟುಹೋಗುವಾಗಲು ಒಂದಾನೊಂದು ಸೂರ್ಯನಲ್ಲಿ ಹುಟ್ಟಿದ ಕಿರಣಂಗಳು ಆ ಸೂರ್ಯನೊಡನೈದುವಹಾಂಗೆ ಆತ್ಮನೊಡನೈದಿ ಹೋಗುತಿಹವು. ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಪ್ರಾಣಾದ್ಯೈದು ವಾಯುಗಳು ಹೋದರೂ ದ್ವಿತೀಯದಲ್ಲಿ ನಿರೂಪಣವ ಪಾಲಿಸಿದ ನಾಗಾದ್ಯೈದುವಾಯುಗಳು ಹೋಗದೆ ನಾಗವಾಯುವೆಂಬುದು ತಾನು ಆತ್ಮನು ಘಟವಬಿಟ್ಟುಹೋದ ಒಂದನೇ ಘಳಿಗೆಗೆ ಹೋಗುವುದು. ಕೂರ್ಮವಾಯು ಎರಡನೇ ಘಳಿಗೆಗೆ ಹೋಗುವುದು. ಕೃಕರವಾಯು ಮೂರನೇ ಘಳಿಗೆಗೆ ಹೋಗುವುದು. ದೇವದತ್ತವಾಯು ನಾಲ್ಕನೇ ಗಳಿಗೆಗೆ ಹೋಗುವದೀನಾಲ್ಕು ವಾಯುಗಳು ಹೋದರೂ ಧನಂಜಯವಾಯುವೆಂಬುವದು ತಾನು ನಿಕ್ಷೇಪಿಸುವಂತಾ ದೇಹವಾದರೆ ಆ ದೇಹವನ್ನೆಲ್ಲಾ ಉಕ್ಕಿಸಿ, ಬಾಯಿಸಿ, ಊದಿಸಿ, ಒಡಸಿ, ಭೌತಿಕಾಗ್ನಿಯಕೂಡಿ ಹೋಗುವುದು. ದಹನವಾಗುವ ಶರೀರವಾದರೆ ಸರ್ವಾಂಗವೆಲ್ಲಾ ಸುಟ್ಟಬಳಿಕ ತಲೆಯನ್ನು ಘಟ್ಟಿಂದುವಡಸಿ ಮಹಾವಾಯುವಕೂಡಿ ಹೋಗುವುದು. ಅದುಕಾರಣವಾಗಿ ಹತ್ತುಪ್ರಕಾರವಾದ ಮಾರುತಂಗಳ ಹಸಿಗೆಯ ವಿಚಾರವು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟಿಗೆ ೯ಕ್ಕೆ ಮಂಗಳಂ.

---

## ಕರಣಚತುಷ್ಟಯಂಗಳುತ್ಪತ್ತಿ.

ಇನ್ನು ಮುಂದೆ ಕರಣಚತುಷ್ಟಯಂಗಳುತ್ಪತ್ತಿಯು ನಾಲ್ಕು ಪ್ರಕಾರವಾದ ಕರಣಂಗಳೆಂದುಂಟಾಗಿರುತಿಹವು, ಅವರ ಸ್ವರೂಪವಂ ಪೇಳುತಿಹನು. ಅವಾವೆಂದೊಡೆ—ಕರಣ ಚತುಷ್ಟಯಂಗಳು ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕುಪ್ರಕಾರವಾದ ಕರಣಂಗಳುತ್ಪತ್ತಿಯು, ಅವರ ಮೂಲಭೂತಂಗಳು, ಅಧಿದೇವತಾ, ಆತ್ಮಾಧಿಷ್ಠಾನ ಕರ್ತೃಗಳು, ಸುಕರ್ಮಂಗಳು ಮಾಡುವ ಉದ್ಯೋಗಂಗಳು ಎಂತೆಂದೊಡೆ ಹ್ಯಾಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ—ಆತ್ಮನು ಮೂಲಾತ್ಮನೆಂಬ ಪುರುಷನು, ಆಕಾಶವೆಂದು ಹೇಳುವ ಮಹಾಭೂತವಂ ತತ್ವವೆಂಬ ಸ್ತ್ರೀಯುಳನ್ನು ಕೂಡಿದೊಡೆ ಜ್ಞಾನಪುಟ್ಟಿತು, ಜ್ಞಾನಕರಣವೆಂಬ ಕುಮಾರನುತ್ಪತ್ತಿಯಾದನು. ಆತ್ಮನು ಮೂಲಾತ್ಮನೆಂಬ ಪುರುಷ

ನು ವಾಯುವೆಂಬ ಮಹಾಭೂತವೆಂಂ ತತ್ವವೆಂಬ ಸ್ತ್ರೀಯಳನ್ನು ಬೆರಸಿ ದೊಡೆ ಮನಸ್ಸು ಪುಟ್ಟಿತು. ಮಾನಸಕರಣಕುಮಾರನುತ್ಪತ್ತಿಯಾ ನು. ಆತ್ಮನು ಮೂಲಾತ್ಮನೆಂಬ ಪುರುಷನು, ಆಗ್ನಿಯೆಂಬ ಮಹಾ ಭೂತವಂ ತತ್ವವೆಂಬ ಸ್ತ್ರೀಯಳನ್ನು ಕೂಡಿದೊಡೆ ಅಹಂಕಾರವೆಂಬ ಕುಮಾರನು ಪುಟ್ಟಿದನು. ಆತ್ಮನು ಮೂಲಾತ್ಮನೆಂಬ ಪುರುಷನು ಅ ಪ್ಪುವೆಂದುಹೇಳುವ ಮಹಾಭೂತವೆಂಂ ತತ್ವವೆಂಬ ಸ್ತ್ರೀಯಳನ್ನು ಕೂ ಡಿದೊಡೆ ಬುದ್ಧಿಯೆಂಬ ಕುಮಾರನು ಪುಟ್ಟಿದನು, ಆತ್ಮನು ಮೂಲಾತ್ಮ ನೆಂಬ ಪುರುಷನು ಪೃಥ್ವಿಯೆಂಬ ದೊಡ್ಡಿತಾದ ಭೂತವೆಂಂ ತತ್ವವೆಂಬ ಸ್ತ್ರೀಯಳನ್ನು ಕೂಡಿದೊಡೆ ಚಿತ್ತವೆಂಬ ಕುಮಾರನು ಪುಟ್ಟಿದನು. ಇ ವು ತಾವೇ ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಕರಣವು ಅಂತರಂ ಗಸಮೇತವಾದ ಕರಣಚತುಷ್ಟಯಂಗಳು. ಇವಕ್ಕೆ ಅಂತಃಕರಣಚ ತುಷ್ಟಯಂಗಳೆಂಬನಾಮವು ಏನುಕಾರಣಕ್ಕೆ ಬಂದಿತೆಲೆಸ್ವಾಮಿಯೆಂದು ಬೆಸಗೊಂಡೊಡೆ, ಇವು ತಮ್ಮತಮ್ಮ ಸಂಬಂಧವಾದ ವಿಷಯಂಗಳನ್ನು ಆತ್ಮನೊಳಗಿದ್ದುಕೊಂಡೇ ಗ್ರಹಿಸುತ್ತಪಾದಕಾರಣ ಇವಕ್ಕೆ ಅಂತಃಕ ರಣಚತುಷ್ಟಯವೆಂಬನಾಮವು ಪ್ರಸಿದ್ಧವಾಯಿತು. ಈ ಅಂತಃಕರಣ ಚತುಷ್ಟಯಂಗಳ ವಿವರವು ಮುಂದೆ ವಿಚಾರವಾಗಿ ಹಸಿಗೆಯಮಾಡಿ ನಿ ರೂಪಿಸುತಿಹರು. ಮನಸ್ಸಿಗೆ ವಾಯುವೆಂದು ಹೇಳುವ ಮಹಾಭೂತ ತತ್ವವೇ ಮೂಲಚೈತನ್ಯವಾಗಿಪ್ಪುದು. ಆ ಮಾನಸಕರಣಕ್ಕೆ ವಾಯು ತತ್ವವೇನುಕಾರಣ ಮೂಲಚೈತನ್ಯವಾಗಿಪ್ಪದೆಲೆಸ್ವಾಮಿಯೆಂದು ಬೆಸ ಗೊಂಡೊಡೆ, ಒಬ್ಬಾಳೊಬ್ಬ ತಾಯಿಯಿಂದ ಶಿಶುವಿನ ದೇಹಸಂರಕ್ಷಣೆಗೆ ಆ ತಾಯಿಯೇ ಆಸ್ಪದಳಾಗಿಪ್ಪಳು ಎಂಬಹಾಗೆ ಮೊದಲಾತ್ಮನು ವಾಯು ತತ್ವವಬಂದು ಕೂಡಿದಲ್ಲಿ ಮಾನಸಕರಣಪುಟ್ಟಿತಾದಕಾರಣ ಆ ವಾಯು ವಿನಿಂದ ಪುಟ್ಟಿದ ಮಾನಸಕರಣಕ್ಕೆ ವಾಯುತತ್ವವೇ ಮೂಲಚೈತನ್ಯ ವಾಗಿಪ್ಪುದು, ಚಂದ್ರನಧಿದೇವತೆ, ಮಾನಸವೆಂಬ ಕರಣದೊಳಗೆ ಆತ್ಮ ನು ತಾನೇ ಚಂದ್ರನೆಂಬಧಿದೇವತಾನಾಮದಿಂದ ಸದಾ ವಾಸವಾಗಿ ನೆಲೆ ಗೊಂಡು ಏನುಂಟುಮಾಡುತಿಹನೆಲೆಸ್ವಾಮಿಯೆಂದು ಬೆಸಗೊಂಡೊಡೆ— ಸಂಕಲ್ಪ, ಸಂಜೆ, ಮುಂಜಾವ ಕಾವಳದವೇಳೆಯಲ್ಲಿ ಹುಲ್ಲಸರವಿಯಂಕಂ ಡು ಹೆದರಿ ಹಿಂದಕ್ಕೆ ನಿಲ್ಲುವುದು, ವಣಗಿದ ಕೊರಡನ್ನುಕಂಡು ಹೆದರಿ ಹಿಂದಕ್ಕೆ ನಿಲ್ಲುವದೇ ಸಂಕಲ್ಪವು. ವಿಕಲ್ಪ—ಮೆಲ್ಲಮೆಲ್ಲನೆ ಹೋಗಿ ಆ

ಳುಕಲ್ಲುಗಳಹಾಕಿ ಇದು ರಜ್ಜು, ಇದು ಕೊರಡು ಎಂದು ತಿಳಿವುದೇ ವಿಕಲ್ಪವು ಮಾಡಿಸುತ್ತಿಹುದು. ಸವಿಾಚಕಲ್ಪನೆ ವಿಪರೀತಕಲ್ಪನೆಗಳೆಂದೆರಡುಂಟುಮಾಡಿಸುತಿಹುದು. ಮತ್ತಂತುಮಲ್ಲದೆ ಜ್ಞಾನಾಜ್ಞಾನವು, ಅರಿವು ಮರವೆಗಳೆಂಬೆರಡನ್ನೀ ಅನುಗ್ರಹಿಸುತಿಹುದು. ೧—ಅಹಂಕಾರಕ್ಕೆ ಅಹಂಕಾರವೆಂಬುವದೊಂದುಕರಣಕ್ಕಾಯಿತಾದೊಡೆ ಅಗ್ನಿಯೆಂಬ ತೇಜವೆಂದು ಹೇಳುವತತ್ವವೇ ಮೂಲಚೈತನ್ಯವಾಗಿಪ್ಪುದು. ಆ ಅಗ್ನಿಯೆಂಬುದು ತಾನು ಅಹಂಕಾರಕರಣಕ್ಕೆ ಏನುಕಾರಣ ಮೂಲಚೈತನ್ಯವಾಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ, ಮೊದಲಾತ್ಮನು ಅಗ್ನಿತತ್ವವೆಬಂದು ಕೂಡಿದಲ್ಲಿ ಅಹಂಕಾರವೆಂಬ ಕರಣವು ಪುಟ್ಟಿತಾದಕಾರಣ ಆ ಅಗ್ನಿಯಿಂದ ಪುಟ್ಟಿದಹಂಕಾರಕರಣಕ್ಕೆ ಆ ಅಗ್ನಿತತ್ವವೇ ಮೂಲಚೈತನ್ಯವಾಗಿಪ್ಪುದು. ರುದ್ರನಧಿದೇವತೆ, ಅಲ್ಲಿ ಆತ್ಮನು ತಾನು ರುದ್ರನೆಂಬಧಿದೇವತಾನಾಮದಿಂದ ಸದಾ ವಾಸವಾಗಿರುತಿಹನು. ಅಲ್ಲಿ ಅಹಂಕಾರವೆಂಬ ಕರಣದೊಳಗೆ ಆತ್ಮನು ರುದ್ರನೆಂಬಧಿದೇವತಾ ನಾಮದಿಂದ ವಾಸವಾಗಿ ಏನುಂಟುಮಾಡುತಿಹನೆಲೆಸ್ವಾಮಿಯೆಂದು ಬೆಸಗೊಂಡೊಡೆ, ಅಹಂಭಾವದಿಂದ ನಾನೇನಾನೆಂಬ ಗರ್ವಭಾವನೆಯಿಂದ ಅಹಂಕರಿಸುತಿಹನು. ವಿದ್ಯೆಯಲ್ಲಿಯೂ, ಬುದ್ಧಿಯಲ್ಲಿಯೂ, ಕುಲದಲ್ಲಿಯೂ, ಛಲದಲ್ಲಿಯೂ, ಪಂಥದಲ್ಲಿಯೂ, ಪರಾಕ್ರಮದಲ್ಲಿಯೂ ನಾನೇ ಶ್ರೇಷ್ಠ, ನಾನೇ ಶ್ರೇಷ್ಠನೆಂದು ಗರ್ವಿಸುತಿಪನು. ೨—ಬುದ್ಧಿಗೆ, ಬುದ್ಧಿಯೆಂಬುವದೊಂದುಕರಣಕ್ಕೆ ಅಪ್ಪುವೆಂದುಹೇಳುವ ಮಹಾಭೂತತತ್ವವೇ ಮೂಲಚೈತನ್ಯವಾಗಿಪ್ಪುದು. ಅಪ್ಪುವೆಂಬುದು ತಾನು ಬುದ್ಧಿಯೆಂಬ ಕರಣಕ್ಕೆ ಏನುಕಾರಣ ಮೂಲಚೈತನ್ಯವಾಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ, ಮೊದಲಾತ್ಮನಪ್ಪುತತ್ವವಕೂಡಿದಲ್ಲಿ ಬುದ್ಧಿಯೆಂಬುವಕರಣ ಪುಟ್ಟಿತಾದಕಾರಣ ಆ ಅಪ್ಪುವಿನಿಂದಪುಟ್ಟಿದ ಬುದ್ಧಿಯೆಂಬ ಕರಣಕ್ಕೆ ಆ ಅಪ್ಪುತತ್ವವೇ ಮೂಲಚೈತನ್ಯವಾಗಿಪ್ಪುದು. ವಿಷ್ಣುವಧಿದೇವತೆ, ಅಲ್ಲಿ ಆತ್ಮನುತಾನೇ ನಾರಾಯಣನೆಂಬಧಿದೇವತಾ ನಾಮದಿಂದ ಸದಾವಾಸವಾಗಿರುತಿಹನು, ಆ ಬುದ್ಧಿಯೆಂಬ ಕರಣದೊಳಗೆ ಆತ್ಮನು ನಾರಾಯಣನೆಂಬಧಿದೇವತಾನಾಮದಿಂದ ಸದಾವಾಸವಾಗಿ ಏನುಂಟುಮಾಡುತಿಹನೆಲೆಸ್ವಾಮಿಯೆಂದು ಬೆಸಗೊಂಡೊಡೆ, ಬುದ್ಧಿಯು ನಿಶ್ಚೈಸುತಿಹುದು, ವಂಚನಾಬುದ್ಧಿ, ಕುಹಕಬುದ್ಧಿ, ಪ್ರಪಂಚಬುದ್ಧಿ, ದುರ್ಬು

ದ್ಧಿಗಳನ್ನೇ ದೃಢೀಕರಿಸುತಿಹನು. ೩—ಚಿತ್ತಕ್ಕೆ ಚಿತ್ತವೆಂಬುವಸ್ತುದುಕರಣಕ್ಕಾಯಿತಾದೊಡೆ, ಪೃಥ್ವಿಯೆಂದು ಹೇಳುವ ಮಹಾಭೂತತತ್ವವೇ ಮೂಲಚೈತನ್ಯವಾಗಿಪ್ಪುದು. ಧರಣಿತತ್ವವೆಂಬುದು ತಾನು ಆ ಚಿತ್ತವೆಂಬ ಕರಣಕ್ಕೇನುಕಾರಣ ಮೂಲಚೈತನ್ಯವಾಗಿಪ್ಪುದೆಲೆಸ್ವಾಮಿಯೆಂದು ಬೆಸಗೊಂಡೊಡೆ, ಮೊದಲಾತ್ಮನು ಪೃಥ್ವೀತತ್ವವೆಬಂದು ಕೂಡಿದಲ್ಲಿ ಚಿತ್ತವೆಂಬಕರಣ ಪುಟ್ಟಿತಾದಕಾರಣ, ಆ ಪೃಥ್ವಿಯಿಂದಪುಟ್ಟಿದ ಚಿತ್ತವೆಂಬ ಕರಣಕ್ಕೆ ಆ ಪೃಥ್ವಿಯೇ ಮೂಲಚೈತನ್ಯವಾಗಿಪ್ಪುದು. ಬ್ರಹ್ಮನಧಿದೇವತೆ, ಅಲ್ಲಿ ಆತ್ಮನು ತಾನೇ ಅಜನೆಂಬಧಿದೇವತಾನಾಮದಿಂ ಸದಾ ವಾಸವಾಗಿರುತಿಹನು. ಆ ಚಿತ್ತೆಂಬ ಕರಣದೊಳಗಾತ್ಮನು ಬ್ರಹ್ಮನೆಂಬಧಿದೇವತಾನಾಮದಿಂದ ನೆಲೆಗೊಂಡೇನುಂಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಅನಿತ್ಯವಾದ ಸಕಲ ಸಂಸಾರಾದಿ ಪ್ರಪಂಚವು ನಿತ್ಯವೆಂಬ ಭಾವನೆಯಿಂದವಧರಿಸಿ ತನ್ನ ದುರ್ವಿವೇಕವೆಂಬ ಮಸ್ತಕದಮೇಲೆ ತಳೆದುಕೊಂಡು ಆನಂದಿಸುತಿಹನು. ಅಲ್ಪಸಂಸಾರ ಸುಖದೊಡನೆಕೂಡಿ ಸಂತೋಷಿಸುತಿಹನು. ಈಪ್ರಕಾರದಿಂದ ಹೇಳಲ್ಪಟ್ಟ ಇವು ತಾವೇ ನಾಲ್ಕುಪ್ರಕಾರವಾದ ಕರಣಂಗಳ ಹೆಸರೆಂದುವಿವರ ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೦ಕ್ಕೆ ಮಂಗಳಮಹಾ.

---

## ದೇಹದೇಹಿಕಂಗಳ ಉತ್ಪತ್ತಿ.

ಇನ್ನು ಮುಂದೆ ದೇಹದೇಹಿಕಂಗಳುತ್ಪತ್ತಿಯು ಶರೀರಾತ್ಮರುಗಳಿಂದುಂಟಾಗಿರುತಿಹವು. ಅವರ ಸ್ವಸ್ವರೂಪವಂ ಪೇಳುತಿಹರು. ಅವು ಆವಾವೆಂದೊಡೆ—ಅವು ತಾವೆಂತಾವೆಲೆಸ್ವಾಮಿಯೆಂದು ಬೆಸಗೊಂಡೊಡೆ, ಶರೀರಾತ್ಮರುಗಳ ಜನನವು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಸ್ಥೂಲಭೌತಿಕಂಗಳೈದು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂಬ ಮಾರುತಂಗಳೈದು. ಜ್ಞಾನ ಕರ್ಮೇಂದ್ರಿಯಂಗಳು ಹತ್ತು, ಕರಣಚತುಷ್ಟಯವೆಂದು ಹೇಳುವ ಚತುರ್ವಿಂಶತಿ ತತ್ವವಾಹಂತಾದ್ದೀಗ ಇಪ್ಪತ್ತುನಾಲ್ಕು ತತ್ವಂಗಳಿಂದ ವ್ಯಕ್ತೀಕರವಾದಂತಾದ್ದುತಾನೇ ದೇಹ. ಅನಾತ್ಮಸ್ವರೂಪವಾದ ಜಡಶರೀರವು ಪಂಚವಿಂಶತಿತತ್ವವಾಹಂತಾ ಇಪ್ಪತ್ತೈದನೆಯ ಜ್ಞಾನಕಾರಣಸ್ವರೂಪನಾದಾತ್ಮನ

ಮೂಲಾತ್ಮನು ತಾನೇ ದೇಹಿ, ಅಂತಾ ದೇಹಕ್ಕೆ ಚೈತನ್ಯಸ್ವರೂಪನಾಗಿರುತಿಹನು. ಆ ಆತ್ಮನಿಗೆ ದೇಹದಲ್ಲಿ ದೇಹಿಕನಾಗಿರುವಂತಾ ಚೇತನಾತ್ಮನಿಗೆ ಜ್ಞಾನೇಂದ್ರಿಯವೇ ಚಿತ್ಸ್ವರೂಪು ಅರಿವುರೂಪವಾಗಿಪ್ಪದಂಬಲ್ಲಿ ಇದು ಸುಶಬ್ದ, ಇದು ಕುಶಬ್ದ, ಇದು ಸುರುಚಿ, ಇದು ಕುರುಚಿ, ಇದು ಸುಸ್ಪರ್ಶನ, ಇದುಕುಸ್ಪರ್ಶನ, ಇದುಸುಗಂಧ, ಇದು ದುರ್ಗಂಧ, ಇದುಸುಖ, ಇದುದುಃಖ, ಇದುಪುಣ್ಯ, ಇದುಪಾಪ, ಇದುವೆಳ್ಳಿತು, ಇದು ವೆಳ್ಳಿತಲ್ಲ ಎಂದುತಿಳಿಯುವುದಕ್ಕೆ ತಿಳಿವಳಿಕೆಸ್ವರೂಪವಾಗಿರುತಿಹುದು. ಪರಶಿವನಧಿದೇವತೆ, ಆ ಆತ್ಮನಿಗೆ ನಿಃಕಲಪರಶಿವನು ತಾನೇ ಅಧಿಷ್ಠಾಯಕನಾಗಿರುತಿಹನು. ಸರ್ವಾತ್ಮರಲ್ಲಿಯೂ ಒಬ್ಬಾತ್ಮನೊಳಗೆ ಇದ್ದಹಾಗೆ ಸಕಲಪ್ರಾಣಿಗಳಂತರಂಗದಲ್ಲಿಯೂ ಚೈತನ್ಯಸ್ವರೂಪನಾಗಿ ಚೇತನಾತ್ಮಕನಾಗಿ ಥಳಥಳಿಸಿ ಬೆಳಗುತಿಹನು. ಈ ಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ದೇಹದೇಹಿಕಂಗಳಭೇದ, ಶರೀರಾತ್ಮರುಗಳ ಹಸಿಗೆಯ ವಿಚಾರವನು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೧ಕ್ಕೆ ಮಂಗಳಮಹಾ.

---

## ಪಂಚವಿಂಶತಿತತ್ವಂಗಳಭೇದ.

ಇನ್ನು ಮುಂದೆ ಮನಸಾದಿಕರಣಂಗಳು, ಆತ್ಮಂಗೆ ಸಂಬಂಧವಾದ ಇಪ್ಪತ್ತೈದುತತ್ವಂಗಳು, ಯಾರಾಧೀನವಿಡಿದು ಚೇಷ್ಟಿಸುತಿಹವೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ನಿಃಕಲಪರಶಿವಂಗಂಗವಾದ ಪಂಚಶಕ್ತಿಯರಿಂದಲೇ ಹುಟ್ಟಿ ಪಂಚಶಕ್ತಿಯರಿಂದಲೇ ಬೆಳೆದು ಪಂಚಶಕ್ತಿಯರಾಧೀನವಿಡಿದೇ ಚೇಷ್ಟಿಸಿ, ಪಂಚಶಕ್ತಿಯರ ತದ್ರೂಪು ತದಾಕಾರವಾಗಿಯೇ ಒಪ್ಪುತಿಹವು. ಅದು ಹ್ಯಾಗೆಂದೊಡೆ—ಮನಸಾದಿಕರಣಂಗಳೈದು ಪರಶಕ್ತಿ ಸ್ವರೂಪು ನಿಃಕಲಪರಶಿವಂಗಂಗವಾದ ಪರಶಕ್ತಿಯಿಂದಲೇ ಹುಟ್ಟಿ, ಪರಶಕ್ತಿಯಿಂದಲೇ ಬೆಳೆದು, ಪರಶಕ್ತ್ಯಾಧೀನವಿಡಿದ ವರ್ತಿಸಿ, ಪರಶಕ್ತಿಯಲ್ಲಿಯೇ ಅಡಗಿ, ಪರಶಕ್ತಿ ತದ್ರೂಪು ತದಾಕಾರವಾಗಿ ವಪ್ಪುತಿಹವು. ಪ್ರಾಣಭೂತಪಂಚಕಂಗಳನ್ನೇ ಮೂಲಕಾರಣವಾದೈದುವಿಷಯಂಗಳು ಇಚ್ಛಾಶಕ್ತಿಸ್ವರೂಪು. ನಿಃಕಲಪರಶಿವಂಗಂಗವಾದ ಇಚ್ಛಾಶಕ್ತಿಯಿಂದಲೇ ಹುಟ್ಟಿ, ಇಚ್ಛಾಶಕ್ತಿಯಿಂದಲೇ ಬೆಳೆದು, ಇಚ್ಛಾಶಕ್ತಿಯಧೀನವಿಡಿದು ವರ್ತಿಸಿ, ಇಚ್ಛಾಶಕ್ತಿಯಲ್ಲಿಯಡಗಿ, ಇ

ಚ್ಛಾಶಕ್ತಿ ತದ್ರೂಪು ತದಾಕಾರವಾಗಿರುತಿಹವು. ಶ್ರೋತ್ರ=ಶ್ರವಣೇಂದ್ರಿಯವೆ ಮೊದಲಾದ, ಜ್ಞಾನ=ಅರಿವುರೂಪವಾದ ಇಂದ್ರಿಯಂಗಳೈದು ಜ್ಞಾನಶಕ್ತಿಯ ಸ್ವರೂಪು, ನಿಃಕಲಪರಶಿವಂಗಂಗವಾದ ಜ್ಞಾನಶಕ್ತಿಯಿಂದಲೇ ಹುಟ್ಟಿ, ಜ್ಞಾನಶಕ್ತಿಯಿಂದಲೇ ಬೆಳೆದು, ಜ್ಞಾನಶಕ್ತಿಯಾಧೀನವಿದ್ದು ವರ್ತಿಸಿ, ಜ್ಞಾನಶಕ್ತಿಯಲ್ಲಿ ಅಡಗಿ, ಆ ಜ್ಞಾನಶಕ್ತಿಯ ತದ್ರೂಪು ತದಾಕಾರವಾಗಿ ಒಪ್ಪುತಿಹವು. ವಾಗಿಂದ್ರಿಯವೇ ಮೊದಲಾದ ಕರ್ಮ=ಕ್ರಿಯಾರೂಪವಾದ ಇಂದ್ರಿಯಂಗಳೈದು ಕ್ರಿಯಾಶಕ್ತಿಯ ಸ್ವರೂಪು, ನಿಃಕಲಪರಶಿವಂಗಂಗವಾದ ಕ್ರಿಯಾಶಕ್ತಿಯಿಂದಲೇ ಹುಟ್ಟಿ, ಕ್ರಿಯಾಶಕ್ತಿಯಿಂದಲೇ ಬೆಳೆದು, ಕ್ರಿಯಾಶಕ್ತಿಯಾಧೀನವಿದ್ದು ವರ್ತಿಸಿ, ಕ್ರಿಯಾಶಕ್ತಿಯಲ್ಲಡಗಿ, ಕ್ರಿಯಾಶಕ್ತಿಯ ತದ್ರೂಪು ತದಾಕಾರವಾಗಿರುತಿಹವು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ ಪಂಚವಿಂಶತಿ ತತ್ವಂಗಳ ಭೇದ ಶಕ್ತಿಯುಸ್ವರೂಪು. ನಿಃಕಲಪರಶಿವಂಗಂಗವಾದ ಪಂಚಶಕ್ತಿಯರಿಂದಲೇ ಬೆಳೆದು, ಪಂಚಶಕ್ತಿಯರಾಧೀನವಿದ್ದೇ ವರ್ತಿಸಿ, ಪಂಚಶಕ್ತಿಯರಲ್ಲಿ ಯಡಗಿ ಆ ಪಂಚಶಕ್ತಿಯರ ತದ್ರೂಪು ತದಾಕಾರವಾಗಿ ವರ್ತಿಸುತಿಹುದು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ ಪಂಚವಿಂಶತಿ ತತ್ವಂಗಳ ಭೇದವಿಚಾರವನ್ನು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೦ಕ್ಕೆ ಮಂಗಳಮಹಾ.

———:(***):———

## ದಶನಾಡಿಗಳ ಭೇದವು.

ಇನ್ನು ಮುಂದೆ ದಶನಾಡಿಗಳ ಭೇದಮಂ ಪೇಳ್ವೆ—ಆ ಪಂಚವಿಂಶತಿ ತತ್ವಾತ್ಮಕವಾದ ದೇಹದಲ್ಲಿ (ಅಶ್ವತ್ಥಜೀರ್ಣಪರ್ಣವತ್) ಎಂಬುದಾಗಿ ಬಂದಾನೊಂದು ಜೀರ್ಣವಾದರಳಿಯಪರ್ಣದೋಪಾದಿಯಲ್ಲಿ ನಾಡಿಗಳು ಪರಿಪೂರ್ಣವಾಗಿರುತಿಹವು. ಅದರೊಳಗೆ ಯೆಪ್ಪತ್ತೆರಡುಸಾವಿರನಾಡಿಗಳೇ ಪ್ರಧಾನನಾಡಿಗಳಾಗಿರುತಿಹವು. ಅದರೊಳಗೆ ಸಾವಿರದ ನೂರು ನಾಡಿಗಳೇ ಕಾರಣನಾಡಿಗಳಾಗಿರುತಿಹವು. ಅದರೊಳಗೇಳುನೂರು ನಾಡಿಗಳೇ ಮುಖ್ಯನಾಡಿಗಳಾಗಿರುತಿಹವು. ಅದರೊಳಗೆ ನೂರುನಾಡಿಗಳೇ ಮುಖ್ಯನಾಡಿಗಳಾಗಿರುತಿಹವು. ಅದರೊಳಗೆ ಐವತ್ತುನಾಡಿಗಳೇ ಪ್ರಧಾನನಾಡಿಗಳಾಗಿರುತಿಹವು. ಅದರೊಳಗಿಪ್ಪತ್ತೆಂಟುನಾಡಿಗಳೇ

ಪ್ರಯೋಜನನಾಡಿಗಳಾಗಿರುತಿಹವು. ಅವರೊಳಗೆ ಈ ದಶವಿಧಭೇದ ವಾದ ನಾಡಿಗಳೇ ಅತ್ಯಧಿಕನಾಡಿಗಳಾಗಿರುತಿಹವು. ಅದುಕಾರಣವಾಗಿ ದಶನಾಡಿಗಳ ವಿಚಾರವನ್ನು ನಿರೂಪಿಸುವೆವು. ಆ ವಿಚಾರವನ್ನು ಗ್ರಂ ಥೋಕ್ತವಾಗಿ ನಿರೂಪಿಸುತಿಹರು. ಈಡ, ಪಿಂಗಳ, ಸುಷುಮ್ನೆವೆಂಬ ನಾಡಿಗಳು ಈ ದಶವಿಧಭೇದವಾದ ನಾಳಂಗಳೊಳಗೆ ಈ ತ್ರಿವಿಧನಾಡಿಗ ಳತ್ಯಂತಬೀಜನಾಡಿಗಳಾಗಿರುತಿಹವು. ಗಾಂಧಾರಿ=ಗಾಂಧಾರಿಯೆಂಬನಾ ಡಿಯು, ಹಸ್ತಿಜಿಹ್ವಾಚ=ಹಸ್ತಿಜಿಹ್ವೆಯೆಂಬ ನಾಡಿಯು, ಪೂಷಶ್ಚ=ಪೂ ಷವೆಂಬ ನಾಡಿಯು, ಏವಂ=ಈಪ್ರಕಾರದಿಂದ, ಪಯಸ್ವಿನಿ=ಪಯಸ್ವಿನಿ ಯೆಂಬ ನಾಡಿಯು, ಅಲಂಬು=ಅಲಂಬುವೆಂಬ ನಾಡಿಯು, ಲಕುಹ=ಲಕು ಹವೆಂಬ ನಾಡಿಯು, ಶಂಕಿನಿ=ಶಂಕಿನಿಯೆಂಬ ನಾಡಿಯು, ದಶನಾಡಿಕಂ= ಹತ್ತುಪ್ರಕಾರವಾದ ನಾಳಂಗಳು ಎಂದು ಇವಕ್ಕೆಮುಂದೆ ವ್ಯಾಖ್ಯಾನವಾ ಗಿ ವಿಸ್ತರಿಸಿ ನಿರೂಪಿಸುತಿಹರು. ಈಡವೆಂಬ ನಾಡಿಯಾವುದೈಯ್ಯಾ ಎಂ ದೊಡೆ, ಚಂದ್ರನಾಳ=ಶಶಿಸಂಬಂಧವಾದ ವಾಮಭಾಗದ ನಾಸಾಪುಟವು. ಪಿಂಗಳವೆಂಬ ನಾಡಿಯಾವುದೈಯ್ಯಾ ಎಂದೊಡೆ, ಸೂರ್ಯನಾಳ=ಆದಿತ್ಯಸಂ ಬಂಧವಾದ ದಕ್ಷಿಣಭಾಗದ ನಾಸಾಪುಟವು, ಸುಷುಮ್ನೆವೆಂಬ ನಾಡಿಯಾ ವುದೈಯ್ಯಾ ಎಂದೊಡೆ, ಮಧ್ಯನಾಳ=ಈಡಪಿಂಗಳಗಳಿಗೆ ಮಧ್ಯಸ್ಥವಾಗಿ ಊರ್ಧ್ವಗಾಮಿಯಾಗೈದಿದ ಪಶ್ಚಿಮ ನಾಸಾಪುಟವು, ಗಾಂಧಾರಿಯೆಂಬ ನಾಡಿಯಾವುದೈಯ್ಯಾ ಎಂದೊಡೆ—ಬಲದನೇತ್ರವು, ಹಸ್ತಿಜಿಹ್ವೆಯೆಂಬ ನಾಡಿಯಾವುದೈಯ್ಯಾ ಎಂದೊಡೆ—ಎಡಭಾಗದ ನೇತ್ರವು, ಪೂಷವೆಂಬ ನಾಡಿಯಾವುದೈಯ್ಯಾ ಎಂದೊಡೆ—ಬಲದಕರ್ನವು, ಪಯಸ್ವಿನಿಯೆಂಬ ನಾಡಿಯಾವುದೈಯ್ಯಾ ಎಂದೊಡೆ—ಎಡದಕರ್ನವು, ಲಕುಹವೆಂಬ ನಾಡಿ ಯಾವುದೈಯ್ಯಾ ಎಂದೊಡೆ—ಗುದನಾಳವು ಅಲಂಬುವೆಂಬ ನಾಡಿಯಾ ವುದೈಯ್ಯಾ ಎಂದೊಡೆ—ಮೇಢ್ರನಾಳವು, ಶಂಕಿನಿಯೆಂಬ ನಾಡಿಯಾವು ದೈಯ್ಯಾ ಎಂದೊಡೆ—ನಾಭಿನಾಳವು, ಈ ಪ್ರಕಾರದಿಂದ ಹೇಳಲ್ಪಟ್ಟಂ ತಾ ಇವುತಾವೇ ಹತ್ತುಪ್ರಕಾರವಾದ ನಾಳಂಗಳಭಿಧಾನಂಗಳು. ಇವ ಕ್ಕೆ ಅಧಿದೇವತೆಗಳು ಅವರವರಧಿಷ್ಠಾನ ಕರ್ತುಗಳೆಂದುಂಟಾಗಿರುತಿಹ ರು, ಅವರ ಸ್ವಸ್ವರೂಪವಂ ಪೇಳುತಿಹರು. ಅವು ಆವಾವೆಂದೊಡೆ, ಅವು ತಾವೆಂತಾವೆಲೆಸ್ವಾಮಿಯೆಂದು ಬೆಸೆಗೊಂಡೊಡೆ, ಈಡೆಗೆ ಚಂದ್ರ ತತ್ವಸಂಬಂಧವಾದ ವಾಮಭಾಗದ ನಾಸಾಪುಟಕ್ಕೆ ಹರಿಯು ಅಧಿದೇ

ವತೆ, ಅಲ್ಲಿ ಆತ್ಮನುತಾನೇ ನಾರಾಯಣನೆಂಬಧಿದೇವತಾ ನಾಮದಿಂದ
ದಾವಾಸವಾಗಿ ಏನೊಂದುಮಾಡುತಿಹನೆಲೆಸ್ವಾಮಿಯೆಂದು ಬೆಸಗೊಂಡೊ
ಡೆ, ಹದಿನಾರಂಗುಲಪ್ರಮಾಣ ವಾಯುವನ್ನು ಹೊರಕ್ಕೆ ರೇಚಿಸುವಂತ
ಕೃತ್ಯವನ್ನುಂಟುಮಾಡಿ ನಡೆಸುತಿಹನು. ಪಿಂಗಳಗೆ ಸೂರ್ಯತತ್ವಸ
ಬಂಧವಾದ ದಕ್ಷಿಣ ನಾಸಾಪುಟಕ್ಕೆ ಬ್ರಹ್ಮನಧಿದೇವತೆ, ಅಲ್ಲಿ ಆತ್ಮನು
ತಾನೇ ಅಜನೆಂಬಧಿದೇವತಾನಾಮದಿಂದ ವಾಸವಾಗಿ ಏನೊಂದುಮಾಡುತಿ
ಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಹನ್ನೆರಡಂಗುಲ ಪ್ರಮಾಣವಾ
ಯುವಿನೊಳಗೆ ನಾಲ್ಕಂಗುಲ ಪ್ರಮಾಣವಾಯುವ ಕತ್ತರಿಸಿದ್ದಾದೆಂಟಂ
ಗುಲ ಪ್ರಮಾಣವಾಯುವಿನೊಳಕ್ಕೆ ಪೂರಿಸುವಂತ ಕೃತ್ಯವನುಂಟುಮಾ
ಡಿ ನಡಸುತಿಹನು. ಸುಷುಮ್ನೆಗೆ, ಈಡಪಿಂಗಳ ಮಧ್ಯಸ್ಥನಾಗೂರ್ಧ್ವ
ಗಾಮಿನಿಯಾಗಿ ಐದಿದ ಪಶ್ಚಿಮನಾಸಾಪುಟಕ್ಕೆ ರುದ್ರನಧಿದೇವತೆ, ಅಲ್ಲಿ
ಆತ್ಮನುತಾನೇ ರುದ್ರನೆಂಬಧಿದೇವತಾ ನಾಮದಿಂದ ವಾಸವಾಗಿ ಏನೊಂ
ಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಹನ್ನೆರಡಂಗುಲ
ಪ್ರಮಾಣವಾಯುವಿನೊಳಗೆ ದ್ವಯಾಂಗುಲವನುಳಿದು ದಶಾಂಗುಲಪ್ರ
ಮಾಣವಾಯುವನ್ನು ಒಂದಾನೊಂದು ಪೂರ್ಣಕುಂಭದಂತೆ ತಡೆದು ನಿಲ್ಲಿ
ಸುವಂತಾ ಕೃತ್ಯವನುಂಟುಮಾಡಿ ನಡಸುತಿಹನು. ಗಾಂಧಾರಿಗೆ ದಕ್ಷಿ
ಣಭಾಗದ ಲೋಚನಕ್ಕೆ ಇಂದ್ರನಧಿದೇವತೆ, ಅಲ್ಲಿ ಆತ್ಮನು ಇಂದ್ರನೆಂ
ಬಧಿದೇವತಾನಾಮದಿಂದ ವಾಸವಾಗಿ ಏನೊಂದುಮಾಡುತಿಹನೆಂದೊಡೆ
ಆವುದಾನೊಂದು ಚಿತ್ರವಿಚಿತ್ರವಾದ ಬಹುರೂಪುಗಳ ನೋಡಬೇಕೆಂಬ
ನಿರೀಕ್ಷಣಕೃತ್ಯವನುಂಟುಮಾಡಿ ನಡಸುತಿಹನು. ಹಸ್ತಿಜಿಹ್ವೆಗೆ ವಾಮ
ಭಾಗದ ಲೋಚನಕ್ಕೆ ವರುಣನಧಿದೇವತೆ, ಅಲ್ಲಿ ಆತ್ಮನು ವರುಣನೆಂಬ
ಧಿದೇವತಾನಾಮದಿಂದ ವಾಸವಾಗಿ ಏನೊಂದುಮಾಡುತಿಹನೆಂದು ಬೆಸ
ಗೊಂಡೊಡೆ, ಎಡಗೆಡದು ಮಲಗುವಂತಾ ನಿದ್ರಾವ್ಯಸನದಕೃತ್ಯವನುಂ
ಟುಮಾಡಿ ನಡಸುತಿಹನು. ಪೂಷಂಗೆ ದಕ್ಷಿಣಭಾಗದಶ್ರವಣಕ್ಕೆ ದಿಗ್ದೇ
ವತೆಗಳಧಿದೇವತೆ, ಅಲ್ಲಿ ಆತ್ಮನು ದಿಗ್ದೇವತೆಯೆಂಬಧಿದೇವತಾನಾಮದಿಂ
ದ ವಾಸವಾಗಿ ಆವುದಾನೊಂದು ನಾದಾದಿಶಬ್ದಂಗಳ ಲಾಲಿಸುವಕೃತ್ಯವ
ನುಂಟುಮಾಡಿ ನಡಸುತಿಹನು. ಪಯಸ್ವಿನಿಗೆ ವಾಮಭಾಗದ ಶ್ರವ
ಣಾಮಿತ್ತಾದೊಡೆ ಪದ್ಮೋದ್ಭವನಧಿದೇವತೆ, ಅಲ್ಲಿ ಆತ್ಮನುತಾನೇ ಪ
ದ್ಮೋದ್ಭವನೆಂಬಧಿದೇವತಾನಾಮದಿಂದ ವಾಸವಾಗಿ ಏನೊಂದುಮಾ

ತಿಹನೆಲೆಸ್ವಾಮಿ ಯೆಂದು ಬೆಸಗೊಂಡೊಡೆ ಆವುದಾನೊಂದು ಪಂಚವು ಹಾವಾದ್ಯಂಗಳ ಲಾಲಿಸಬೇಕೆಂಬಿಚ್ಛಾ ಕೃತ್ಯವನುಂಟುಮಾಡಿ ನಡಸುತಿಹನು ಲಕುಹಂಗೆ-ಪಾಯುಸ್ಥಾನದ ನಾಡಿಗೆ ಭೂಮಿಯಧಿದೇವತೆ, ಅಲ್ಲಿ ಆತ್ಮನು ಭೂಮಿಯೆಂಬಧಿದೇವತಾನಾಮದಿಂದ ಏನುಂಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ದೇಹದ ಭಾರಣೆಯನೆಲ್ಲಾ ವಹಿಸಿಕೊಂಡಿರುವಂತಾ ಕೃತ್ಯವನುಂಟುಮಾಡಿ ನಡಸುತಿಹನು. ಅಲಂಬುವಿಂಗೆ ಗೋಪ್ಯಸ್ಥಾನವಾದ ನಾಡಿಗೆ ಸೂರ್ಯನಧಿದೇವತೆ, ಅಲ್ಲಿ ಆತ್ಮನು ಸೂರ್ಯನೆಂಬಧಿದೇವತಾನಾಮದಿಂದ ವಾಸವಾಗಿ ಏನುಂಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಕ್ಷುದಾದಿಧರ್ಮಂಗಳ ನೆಗಳಿಸುವಂತಾ ಕೃತ್ಯವನುಂಟುಮಾಡಿ ನಡಸುತಿಹನು. ಶಂಕಿನಿಗೆ, ಪೊಕ್ಕುಳಸ್ಥಾನನಾಡಿಗೆ, ಚಂದ್ರನಧಿದೇವತೆ, ಅಲ್ಲಿ ಆತ್ಮನುತಾನೇ ಚಂದ್ರನೆಂಬಧಿದೇವತಾನಾಮದಿಂದ ವಾಸವಾಗಿ ಏನುಂಟುಮಾಡುತಿಹನೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ನಾಡಿಗಳಿಗೆ ಮೂಲವಾಗಿಯೂ, ಗಡ್ಡೆಯಾಗಿಯೂ, ಕ್ಷುದಾದಿಧರ್ಮಂಗಳ ಶಾಂತಿಯನ್ನೈದಿಸುವಂತಾ ಉಪಶಮವಾದ ಕೃತ್ಯವನುಂಟುಮಾಡಿ ನಡಸುತಿಹನು. ಹತ್ತುಪ್ರಕಾರವಾದ ನಾಳಂಗಳ ಅಧಿದೇವತೆಗಳ ಭೇದದ ಹಸಿಗೆಯ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೧೩೩ಕ್ಕೆ ಮಂಗಳಮಹಾ.

---

## ಅಷ್ಟಾತ್ಮಗಳು.

ಮುಂದೆ ಅಷ್ಟಾತ್ಮಂಗಳೂ, ಶರೀರಸಂಬಂಧವಾದಾತ್ಮರಿಗೆಂಟು ಪ್ರಕಾರವಾದ ಆತ್ಮರುಗಳೆಂದುಂಟಾಗಿರುತಿಹವು. ಅವರ ಸ್ವಸ್ವರೂಪಮಂ ಹೇಳುತಿಹರು. ಅವು ಆವಾವೆಂದೊಡೆ—ಜೀವಾತ್ಮ-ದೇಹಭಾವದ ವ್ಯವಹಾರದಿಂ ತನ್ನತಾ ಮರೆದಿರುವಾತ್ಮನೇ ಜೀವಾತ್ಮನು. ಅಂತರಾತ್ಮ-ಆ ದೇಹದ ಜಡತ್ವಮಂ ಕಂಡು ತಾನಾರೊಯೆಂದು ಚಿಂತಿಸುವಾತ್ಮನೇ ಅಂತರಾತ್ಮನು. ಪರಮಾತ್ಮ-ತನ್ನ ತತ್ವವನ್ನರಿದು ಪರತತ್ವದಲ್ಲಿ ಪರಮಕಾಷ್ಠೆಯನ್ನೈದಿರುವಾತ್ಮನೇ ಪರಮಾತ್ಮನು. ನಿರ್ಮಲಾತ್ಮ-ಆಣವಾದಿ ಮಲತ್ರಯಂಗಳ ವ್ಯವಹಾರಂಗಳಿಗೆ ದೂರಸ್ಥನಾಗಿರುವಾತ್ಮನೇ ನಿರ್ಮಲಾತ್ಮನು. ಶುದ್ಧಾತ್ಮ-ಶುದ್ಧಾಂತಃಕರಣದೇಹಿಯೆಂದು ಅಂತರಶುಚಿ

ಬಹಿಶ್ಶುಚಿಯಾಗಿರ್ಪನೇ ಶುದ್ಧಾತ್ಮನು. ಜ್ಞಾನಾತ್ಮನು-ಹಾಳಅರಟ್ಟಣಿಗಳನ್ನು ಬಿಟ್ಟು ಸದಾ ನಿತ್ಯಾನಿತ್ಯವಿವೇಕವಿಚಾರ ಪರಾಂಬರಿಕೆಯೊನೆ ಕೂಡಿರುವಾತ್ಮನೇ ಜ್ಞಾನಾತ್ಮನು. ಮಹಾತ್ಮ-ಕಾಲಿಲ್ಲದವರಿಗೆ ಕಾಲುಕೊಟ್ಟು, ಕಣ್ಣಿಲ್ಲದವರಿಗೆ ಕಣ್ಣುಕೊಟ್ಟು, ಕೈಯಿಲ್ಲದವರಿಗೆ ಕೈಕೊಟ್ಟು ಸಂತಾನವಿಲ್ಲದ ಬಂಜೆವನಿತೆಯರಿಗೆ ಸಂತಾನಕೊಟ್ಟು ಧನಕನಕೈಶ್ವರ್ಯವ ಬೇಡಿದವರಿಗೆ ಧನಕನಕೈಶ್ವರ್ಯವ ಕೊಡುತ್ತಾ ಮಹಿಮಾಸ್ಪದನಾಗಿ ಮೆರೆವಾತ್ಮನೇ ಮಹಾತ್ಮನು. ಭೂತಾತ್ಮ-ಭೂತಾತ್ಮದೇಹಿಯೆಂದು ಹೇಳುತಿಹುದಾದಕಾರಣ ಸಕಲಪ್ರಾಣಿಗಳಿಗೆ ದಿಟಪುಟ ಚೈತನ್ಯಸ್ವರೂಪವಾಗಿರುವಾತ್ಮನೇ ಭೂತಾತ್ಮನು. ಎಂಟುಪ್ರಕಾರವಾದ ಆತ್ಮರುಗಳ ಹಸಿಗೆಯ ವಿಚಾರವೆಂಬಲ್ಲಿ ಒಬ್ಬಾತ್ಮನೇ ಆಯಾಯುವ್ಯವಹಾರದ ಭೇದದಿಂದೆಂಟು ಪ್ರಕಾರವಾದ ಆತ್ಮರುಗಳ ಹಸಿಗೆಯವಿಚಾರವನ್ನು ತಿಳಿದುಕೊಬ್ಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೪ಕ್ಕೆ ಮಂಗಳಮಹಾ.

———:(***):———

## ಅಷ್ಟತನುಗಳು.

ತದನಂತರದಲ್ಲಿ ಅಷ್ಟತನುಗಳು ಆತ್ಮನಿಗೆ ಸಂಬಂಧವಾದ ದೇಹದಲ್ಲಿ ಎಂಟುಪ್ರಕಾರವಾದಂಗಂಗಳಿಂದುಂಟಾಗಿರುತಿಹವು. ಅವರಸ್ವಸ್ವರೂಪವಮಂ ಹೇಳುತಿಹರು. ಅವು ಆವಾವೆಂದೊಡೆ—ಸ್ಥೂಲತನು, ಪೃಥ್ವಿ, ಅಪ್ಪುಗಳೆಂಬೆರಡುತತ್ವಂಗಳಿಂದ ವ್ಯಕ್ತಿಕರವಾದುದೇ ಸ್ಥೂಲಶರೀರವು. ಸೂಕ್ಷ್ಮತನುವು, ಅಗ್ನಿವಾಯುಗಳೆಂಬೆರಡುತತ್ವಂಗಳಿಂದ ವ್ಯಕ್ತಿಕರವಾದುದೇ ಸೂಕ್ಷ್ಮತನುವು. ಕಾರಣತನು, ಆಕಾಶಹಂಮುಗಳೆಂಬೆರಡುತತ್ವಂಗಳಿಂದ ವ್ಯಕ್ತಿಕರವಾದುದೇ ಕಾರಣತನುವು. ನಿರ್ಮಲತನು, (ನಿರ್ಮಲಂಕರ್ಮಉಚ್ಯತೆ) ಎಂದು ಹೇಳುತಿಹುದಾದಕಾರಣ ಪಂಚಕರ್ಮೇಂದ್ರಿಯಂಗಳೊಂದಾದುದೇ ನಿರ್ಮಲಶರೀರವು. ಆನಂದತನು (ಆನಂದೋವಿಷಯರುಚ್ಯತೆ) ಎಂದು ಪಂಚವಿಷಯಂಗಳೊಂದಾದುದೇ ಆನಂದಶರೀರವು. ಚಿನ್ಮಯತನು, (ಚಿನ್ಮಯಂಜ್ಞಾನಮುಚ್ಯತೆ) ಎಂದು ಪಂಚಜ್ಞಾನೇಂದ್ರಿಯಂಗಳೊಂದಾದುದೇ ಚಿನ್ಮಯಶರೀರವು. ಚಿದ್ರೂಪತನು, (ಚಿದ್ರೂಪಂವಾಯುರುಚ್ಯತೆ) ಎಂದು ಪಂಚಪ್ರಾಣವಾಯುಗಳಿಂದ ವ್ಯಕ್ತಿಕರವಾದುದೇ ಚಿದ್ರೂಪಶರೀರವು. ಶುದ್ಧತನು, (ಶುದ್ಧೋ

ತಃಕರಣದೇಹ) ಎಂದು ಪಂಚಕರಣಂಗಳಿಂದ ವ್ಯಕ್ತಿಕರವಾದುದೇ ಶುದ್ಧಶರೀರವು. ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಅಷ್ಟತನುಗಳ ಭೇದವೆಂಬಲ್ಲಿ ಒಂದುತನುವೇ ಅಹುದು. ಆಯಾಯತತ್ವಂಗಳ ವ್ಯಕ್ತಿಕರ ಭೇದದಿಂದೆಂಟುಪ್ರಕಾರವಾದಂಗಂಗಳಾಗಿರುತಿಹವು. ಅಂತಪ್ಪೆಂಟುಪ್ರಕಾರವಾದಂಗಂಗಳ ಹಸಿಗೆಯವಿಚಾರವನ್ನು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೩ಕ್ಕೆ ಮಂಗಳಮಹಾ.

———:(***):———

## ಅಂತರಂಗದಷ್ಟಮದಂಗಳು.

ತದನಂತರದಲ್ಲಿ ಅಂತರಂಗದಷ್ಟಮದಂಗಳು ಸಕಲಾತ್ಮರುಗಳ ಮಧ್ಯದಲ್ಲಿ ಮನದೊಳಗೆ ನೆನಹುರೂಪನಿಂದಿರುವೆಂಟು ಪ್ರಕಾರವಾದ ಮದಗುಣಂಗಳಿಂದುಂಟಾಗಿರುತಿಹವು. ಅವರಸ್ವ ಸ್ವರೂಪಮಂ ಪೇಳುತಿಹರು. ಆವಾವೆಂದೊಡೆ—ಸಂಸ್ಥಿತಮೊದಲು ಶಿವಾಂಶಿಕನಾದಾತ್ಮನು ಶಿವಾಜ್ಞೆಯಿಂದ ಶರೀರಸಂಬಂಧಿಯಾಗಿ ತನ್ನನಿಜವನ್ನು ಮರೆದು, ಅಜ್ಞಾನಿಯಾಗಿ, ಅನೇಕಜನ್ಮಾಂತರಗತಿಗಳಲ್ಲಿ ಹುಟ್ಟಿಬರುತಿಹನು. ಆ ಹುಟ್ಟಿಹುಟ್ಟಿಬರಲ್ಪಟ್ಟ ಆತ್ಮನಂತರಂಗದಲ್ಲಿ ದೇಹೋಹನೆಂಬ ಮೂಲಹಂಕಾರವು ಸಂ=ಲೇಸಾಗಿ, ಸ್ಥಿತಂ=ಇರುವಂತಾದ್ದೇ ಸಂಸ್ಥಿತವೆಂಬ ಮದವು, ತೃಣೀಕೃತ=ಅಂತಪ್ಪ ಮೂಲಹಂಕಾರದಿಂದೆಂತಪ್ಪ ಭಕ್ತಮಾಹೇಶ್ವರರನ್ನಾದರೂ, ಎಂತಪ್ಪಗುರು ಹಿರಿಯರುಗಳನ್ನಾದರೂ, ಎಂತಪ್ಪ ಯತಿವ್ರತಿ ಯೋಗೀಶ್ವರರುಗಳನ್ನಾದರೂ, ಅವನೇನು ಇವನೇನು ಎಂದೊಂದು ಹುಲ್ಲುಕಡ್ಡಿಗೆ ಸಮಾನವಮಾಡಿ ತಿರಸ್ಕರಿಸಿ ನುಡಿವಂತಾದ್ದೇ ತೃಣೀಕೃತವೆಂಬ ಮದವು. ವರ್ತಿನಿ-ಪರಧನ, ಪರಸತಿ, ಪರದೈವ, ಪರನಿಂದೆ, ಪರಹಿಂಸೆ ಎಂಬ ಪಂಚಮಹಾ ಪಾತಕಂಗಳೊಡನೆ ಕೂಡಿ ಚರಿಸುವಂತಾದ್ದೇ ವರ್ತಿನಿಯೆಂಬಮದವು. ಕ್ರೋಧಿನಿ-ನೀವು ಅಪ್ಪಂತ ಭಕ್ತಮಾಹೇಶ್ವರರ ಮಕ್ಕಳು, ಅಪ್ಪಂತ ಗುರುಹಿರಿಯರುಗಳ ಶಿಷ್ಯರು ನಿಮಗೆ ಇಂತಾನಡವಳಿ ವಳ್ಳಿತೆಯೆಂದು ಆರಾದರೂ ಸತ್ಪುರುಷರು, ಮಾನ್ಯರು, ನೀತಿವಂತರಾದ್ದೊಂದು ನಡವಳಿಯ ಹೇಳಿದರೆ ನಾನು ಸಕಲಭೇದನು, ಭೇನಂಗಳಬಲ್ಲಾತನು, ವಿನಾನಮರಿಗೆ ಹೀಸುಕಲಿಸುವನಹಾಗೆಯೂ, ಎರಳೆಯಮರಿಗೆ ಹಾರಿಕೆಯಕಲಿಸುನಹಾಗೆಯೂ, ಆಳಡದವಳಿಗೆ ಮೂರಡದವ

ಳು ಮುಲುಕುಕಲಿಸುವಹಾಗೆಯೂ, ಅಜ್ಜಿಗೆ ಮೊಮ್ಮಗಳು ಕೆಮ್ಮಕ್ಕಿ
ಸುವಹಾಗೆಯೂ, ತಾಯಿಸುದ್ದಿಯ ಸೋದರದವರಕೂಡೆ ಹೇಳಿದಹಾ
ಯೂ, ಬೇರಬಲ್ಲವರಮುಂದೆ ಯೆಲೆತೊಟ್ಟುತೋರಿಸುವಹಾಗೆಯೂ,
ಮಗೆ ನೀನು ಮೇಲುಬುದ್ಧಿಯ ಹೇಳುವಾತನೇಯೆಂದು ತೊಡೆಯ
ಳಿಸುತ್ತಾ, ಮೀಸೆಯ ಕುಣಿಸುತ್ತಾ, ಭುಜವಬಾರಿಸುತ್ತಾ, ಒಂದಾನೊಂ
ದು ಗ್ರಹಶುನಿಯೋಪಾದಿಯಲ್ಲಿ ಕಲಹಕ್ಕೆ ಕಾಲಕೆದರುತ್ತಾ, ಅವರಮೇ
ಕಟ್ಟುಗ್ರದ ಕಡುಕೋಪವ ಮುಂದುಗೊಂಡು ಕೊಂದೆನುತಿಂದೆನೆಂಬ
ತಾದ್ದೇ ಕ್ರೋಧಿನಿಯೆಂಬಮದವು. ಮೋಹಿನಿ, ಒಂದಾನೊಂದು ಅ
ವಕಚ್ಚಿದ ಶ್ವಾನನೋಪಾದಿಯಲ್ಲಿ ಸದಾ ಸತಿಸುತಾದಿಗಳಮೇಲಣ ವ್ಯಾ
ಮಕಾರವೇ ಮುಂದುಗೊಂಡಿರುವಂತಾದ್ದೇ ಮೋಹಿನಿಯೆಂಬ ಮದವು.
ಅತಿಜಾರಿಣಿ ಆರುಕಂಡಾರೋ ಆರುಕೇಳ್ಯಾರೋ ಎಂದು ಮೊದಲೊಂದು
ಪ್ರಮಾಣಗತಿಯಿಂದ ಚರಿಸುತಿರ್ದ ಆತ್ಮನಂತರಂಗದಲ್ಲಿ ವಿಷಯೋದ್ರೇ
ಕವೆಗ್ಗಳಿಸಿ ಒಂದಾನೊಂದು ತಲೆಹುಳಿಕ ಶ್ವಾನನೋಪಾದಿಯಲ್ಲಿ ರಜಸ್ವ
ನಿ, ರಜಕಿ, ಸಖಿ, ಸಹೋದರಿ, ಮಾತೃ, ಪುತ್ರಿಯರೆನ್ನದೆ ಸರ್ವರಲ್ಲಿಯೂ
ಮುಖದಪ್ಪಿ ವರ್ತಿಸುವಂತಾ ವರ್ತನಹೀನತ್ವವೇ ಅತಿಜಾರಿಣಿಯೆಂಬ
ಮದವು. ಗಂಧಜಾರಿಣಿ ಸದಾ ಆಣವಾದಿ ಮಲತ್ರಯಂಗಳ ದುರ್ವಾ
ನ ಸ್ವೀಕಾರದೊಡನೆ ಕೂಡಿ ಚರಿಸುವಂತಾದ್ದೇ ಗಂಧಜಾರಿಣಿಯೆಂಬ
ಮದವು. ವಾಸಿನಿ-ಹಿಂಗುಹೋದರೂ ಆ ಹಿಂಗು ಕಟ್ಟಿದರುವೆಯೆಂಬ
ದು ತಾನು ತಿಪ್ಪೆಯಮೇಲೆ ಆರುಮೂರುತಿಂಗಳು ಬಿದ್ದಿದ್ದರೂ ಆ ಹಿಂಗಿ
ನ ವಾಸನೆಹೋಗದು ಎಂಬ ದೃಷ್ಟಾಂತೋಪಮಾನದಹಾಂಗೆ ಆತ್ಮನಿಗೊಂ
ದುವೇಳೆ ಸತ್ಪುರುಷರ ಸಂಗದಿಂದಲಾದರೂ, ಶಿವಾನುಭಾವದ ಕೇಳಿಕೆ
ಯಿಂದಲಾದರೂ, ಮಲತ್ರಯಂಗಳ ಪ್ರಪಂಚ ಬಿಡುಗಡೆಯಾಗಿ ಹೋದ
ರೂ, ಆಮಲತ್ರಯಂಗಳ ಸುಖನನನು ಭವಿಸಬೇಕೆಂಬ ನೆನಹು ಆತ್ಮನ
ಜ್ಞಾನವೆಂಬ ಅಪರಭಾಗೆಯ ಕಚ್ಚಿಕೊಹರೆ ಹಿಂಗದಿರುವಂತಾದ್ದೇ ವಾಸಿನಿ
ಯೆಂಬ ಮದವು. ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೆಂಟುಪ್ರಕಾ
ರವಾದ ಮದಗುಣಂಗಳ ಹಸಿಗೆಯ ವಿಚಾರವನು ತಿಳಿದುಕೊಂಬುವದು
ತತ್ವಜ್ಞಾನಿಗಳು.

ಅಂತು ಕಟ್ಟು ೧೬೯ಕ್ಕೆ ಮಂಗಳಮಹಾ.

## ಬಹಿರಂಗದಷ್ಟಮದಂಗಳು.

ತದನಂತರದಲ್ಲಿ ಬಹಿರಂಗದಷ್ಟಮದಂಗಳು ಸಕಲಾತ್ಮರುಗಳು ತಮ್ಮತಮ್ಮ ಮನದೊಳಗೆ ನೆನಹುರೂಪಿನಿಂದತೋರುವ ಮದಗುಣಂಗಳನ್ನೇ ಬಹಿರಂಗದಲ್ಲಿ ವಾಗ್ರೂಪಿನಿಂದ ಹೇಳುವೆಂಬುಪ್ರಕಾರವಾದ ಮದಗುಣಂಗಳಿಂದುಂಟಾಗಿರುತಿಹವು. ಅವರ ಸ್ವಸ್ವರೂಪವಂ ಪೇಳುತಿಹರು. ಆವಾವೆಂದೊಡೆ, ಕುಲಮದ, ಛಲಮದ, ಧನಮದ, ರೂಪಮದ, ಯೌವನಮದ, ವಿದ್ಯಾಮದ, ರಾಜ್ಯಮದ, ತಪೋಮದ ಇವೇ ಅಷ್ಟಮದಂಗಳು. ಇವಕ್ಕೆ ಮುಂದೆವ್ಯಾಖ್ಯಾನವಾಗಿ ವಿಸ್ತರಿಸಿ ನಿರೂಪಿಸುತಿಹರು. ಕುಲ-ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. ಹಿರಿಯ ಹಸುವೆಕುಲ-ಆರಾಧ್ಯ ಮೊದಲಾದ ಉತ್ತಮಜಾತಿಯಲ್ಲಿ ಹುಟ್ಟಿದ ಸತ್ಪುರುಷರು ಆಯಿತ್ತಾದೊಡೆ, ನಾವು ಮಹಾಕುಲೋತ್ತಮರು, ಕುಲತಿಲಕರು, ಕುಲಚಕ್ರವರ್ತಿಗಳು, ನಮ್ಮ ಕುಲಕ್ಕಾರುಸಮಾನಬಂದಾರು, ಆರೂ ಸಮಾನಬರಲರಿಯರೆಂದು ಹೇಳಿಕೊಳ್ಳಬಾರದು. ಅಹುದು, ಅಥವಾ ಒಂದುವೇಳೆ ಹೇಳಿಕೊಂಡರೂ ಅವರಮಾತು ಅವರನ್ನವಲಂಬಿಸಿ ತೋರುವುದು. ಅದಲ್ಲದೆ ತಾಯಿಯೊಂದುಕುಲವಾಗಿ ತಂದೆಯೊಂದು ಜಾತಿಯಾಗಿ ಈರ್ವರಮಧ್ಯದಲ್ಲಿ ಹುಟ್ಟಿದಪುರುಷನು ನಾಲ್ವರಮಧ್ಯದಲ್ಲಿ ಒಂದು ಮಾತುಕಥೆ ಪ್ರಸಂಗವುಬಂದಲ್ಲಿ ಆಗ ಕುಲಮದವೆಂಬುದು ತಲೆದೋರಿ ನಾವು ಮಹಾಕುಲೋತ್ತಮರು, ಕುಲತಿಲಕರು, ಕುಲಚಕ್ರವರ್ತಿಗಳು, ಕುಲಸಾರ್ವಭೌಮರು, ನಮ್ಮಕುಲಕ್ಕಾರುಸಮಾನರು, ಆರೂ ಸಮಾನಬರಲರಿಯರು. ಹಿಂದಕ್ಕೆಹಾಲಕುಲದವಕ್ಕಲಮಗನಾಗಿ ಮಹಾಕುಲೋತ್ತಮನಾದ ದೇವೇಂದ್ರನೊಬ್ಬನುಂಟೆಂದು ಹೇಳುವರು. ಅವನೇನಾದರೂ ನಮ್ಮಕುಲಕ್ಕೆ ಸಮಾನಬಂದರೆಬರಲಿ, ಮಿಕ್ಕಿನ ಈ ಭೂಭಾಗದಲ್ಲಿರುವ ಹುಲ್ಲುಮನುಜರುಗಳೋರ್ವರೂ ನಮಗೆ ಸಮಾನಬರಲರಿಯರು ಎಂದು ಹೇಳಿಕೊಂಬುವುದೇ ಕುಲಮದವು. ಛಲ-ಹೀಗೆ ಕಂಡು ನಿಂದವರಕೂಡೆ ಹೇಳಿಕೊಳ್ಳುತಲಿರ್ದಲ್ಲಿ ಆರಾದರೂ ಅವನ ಪೂರ್ವಾಪರ ಬಲ್ಲಂತಾವರು ಏನೋ ತಾಯಿಸುದ್ದಿಯ ಸೋದರದವನಕೂಡೆ ಹೇಳುವಹಾಂಗೆ ಬೇರಬಲ್ಲವರಮುಂಪೆ ಎಲೆತೊಟ್ಟು ತೋರಿದಹಾಂಗೆಯೂ, ಎಮ್ಮವರರಿಯದ ಕೊಮ್ಮೆಯಬೇರೆ ಸುಮ್ಮನೆಬೇಯಿ ಒಲೆಮೇಲೆ ಎಂಬಹಾಂಗೆಯೂ ನಿನ್ನ ಕುಲಾತಿಶಯವ ಇನ್ನೇನ ಹೇಳಿಕೊಳ್ಳು ಶಿದ್ದೀಯೊ.

ನಿನ್ನ ತಂದೆ ತಿಗಳನಲ್ಲವೆ, ನಿನ್ನ ತಾಯಿ ಕುರುಬಳಲ್ಲವೆ ಎಂದು ಮೂದ್ಲ
ಸಿದಲ್ಲಿ ಆಗ ಛಲಮುದವೆಂಬುದು ತಲೆದೋರಿ ನನ್ನ ಕುಲದ ಕ್ಷೀಣತ್ವವ
ನೀನೇನಕಂಡಿಯ್ಯ ಎಂದು ಶರಗ ಸೀರೆಗಳಂ ಸುತ್ತಿಕೊಂಡು ಕಂಚಿ, ಚ
ದಂಬರ, ಕಾಶಿ, ಕೇದಾರ, ನೇಪಾಳ, ಗಯಾ, ಪ್ರಯಾಗ, ಶ್ರೀಶೈಲ, ತ
ಗಂಗೆ, ಉಳುವೆ, ನಂಜನಗೂಡು, ಪಂಪಾಕ್ಷೇತ್ರ ಮುಂತಾದ ಘಟನಾ
ಸ್ಥಾನಂಗಳಲ್ಲಿ ಪೂರ್ವದಲ್ಲಿ ಮುನಿಗಳು ಲೋಕದಾತ್ಮರುಗಳು ತಮ್ಮ ತ
ಮ್ಮ ಕುಲಾಚಾರಕ್ಕೆ ಕಡಿದಾಡಿ ಒಡಿದಾಡಿ ಸತ್ತಿ ತಲಾ ಎಂದು ಲೋಕ
ಹಿತಾರ್ಥವಾಗಿ ಆಯಾಯಕುಲದ ಉತ್ಪತ್ತಿಯನ್ನೂ, ಆಯಾಯ ಕುಲ
ದ ಗುರುಗಳನ್ನೂ, ಆಯಾಯಕುಲದ ಉದ್ಯೋಗವನ್ನೂ, ಆಯಾಯ
ಕುಲದ ದೈವಗಳನ್ನೂ ತಾಮ್ರದ ಹಲಿಗೆಯಮೇಲೆಬರದು ಭೂಮಿಯ್ಲ
ನಿಕ್ಷೇಪಿಸುವದುಂಟು. ಆ ಸ್ಥಳಂಗಳಿಗೆಹೋಗಿ ಸಾವಿರಸಂಖ್ಯೆ ವರಹ
ಗಳನ್ನು ವೆಚ್ಚವಮಾಡಿ, ಕುಲಲಿಪಿಗಳಂತೆಗಿಸಿ, ಕುಲೋದ್ಧಾರವಂಮಾ
ಕೊಳ್ಳುತ್ತಾ ಛಲಗ್ರಾಹಕತ್ವವು ಎನ್ನೊಬ್ಬನಿಂದಾದಿತಲ್ಲವೇ, ಮಿಕ್ಕಿನವ
ಗಾಗಲರಿಯದು. ಹಿಂದಕ್ಕೆ ದೇವೇಂದ್ರನ ಸಭೆಯಲ್ಲಿ ವಶಿಷ್ಠನು ವಿ
ಶ್ವಾಮಿತ್ರನಕೂಡೆ ತಾನಾಡಿದ ಪ್ರಸಂಗವನ್ನು ತನ್ನ ಶಿಷ್ಯನಾದ ಹ
ರಿಶ್ಚಂದ್ರನಮುಖದಿಂದ ಗೆಲಿಸಿಕೊಂಡನು. ಅವನು ಮಹಾಛಲಗ್ರಾಹಕ
ತ್ವನುಳ್ಳಾತನು, ಅವನೇನಾದರೂ ನಮ್ಮ ಛಲಕ್ಕೆ ಸಮಾನಬಂದರೆಬರಲಿ,
ಮಿಕ್ಕಿನವರಾರೂ ಸಮಾನಂಬರಲರಿಯರು ಎಂದು ಹೇಳಿಕೊಂಬುವುದೇ
ಛಲಮದವು. ಧನ-ಲಕ್ಷಸಂಖ್ಯೆ ದ್ರವ್ಯವಗಳಿಸಿದ ಮಹಾಧನಾಢ್ಯಪು
ರುಷರಾಯಿತ್ತಾದೊಡೆ ನಾವು ಮಹಾಭಾಗ್ಯಶಾಲಿಗಳು, ದ್ರವ್ಯಸ್ಥರು, ದ್ರ
ವ್ಯಾಧಿಪತಿಗಳು, ನಮ್ಮ ದ್ರವ್ಯಾಧಿಪತಿತ್ವಕ್ಕೆ ಆರೂ ಸಮಾನಂಬರಲ
ಯರು ಎಂದು ಹೇಳಿಕೊಳ್ಳಬಾರದು. ಅಹುದು, ಅಥವಾ ಒಂದುವೇಳೆ
ಹೇಳಿಕೊಂಡರೂ ಅವರಮಾತು ಅವರನ್ನವಲಂಬಿಸಿ ತೋರುವುದು. ಅದ
ಲ್ಲದೆ ಹತ್ತುಹಣ, ಹತ್ತುಹೊನ್ನು, ಹತ್ತುವರಹಗಳ ಗಳಿಸಿಕೊಂಡಿದ್ದ
ತಾ ನಿರ್ಧನಿಕಪುರುಷನು ಬಿನುಗರಮೇಲೆ ಹಣಬಡ್ಡಿ, ಕಡಬಡ್ಡಿಗಳನ್ನು
ಕೊಟ್ಟು ಹೋಗಿಬರುವಂತಾ ಬೀದಿಬಜಾರಂಗಳಲ್ಲಿ ಅವರನುಕಂಡು ವಿ
ನಿರ್ದಯ್ಯಾ ಹಿಂಗೆಸರಿಯ್ಯ, ನಮ್ಮ ಹಣ ಬಡ್ಡಿ ಕಡಬಡ್ಡಿ ಬರಲಿಲ್ಲ ಎಂದು
ಮೂದಲಿಸಿದಲ್ಲಿ ಅವರು ಕೊಡುವುದಕ್ಕೆ ಗತಿಯಿಲ್ಲದೆ ಇದ್ದಲ್ಲಿ ಸ್ವಾಮಿ!
ನೀವು ಮಹಾಭಾಗ್ಯಶಾಲಿಗಳು, ನಿಮ್ಮ ತಂದೆತಾಯಿಗಳು ಮಹಾಪುಣ್ಯ

ಪುರುಷರು, ಸತ್ಪುರುಷರು, ನಿಮಗೆ ಕಟ್ಟುವಲ್ಲಿ ಬಿಡುವಲ್ಲಿ ಹೋಗುವುದೆಷ್ಟು, ಬರುವುದಷ್ಟು ಎಂದು ಸಾಲ್ವರಮುಂಪೆ ಕೀರ್ತಿಸಿದಲ್ಲಿ ಆಗ ದ್ರವ್ಯಮದವೆಂಬುವಂತಾದ್ದು ತಲೆದೋರಿ ನಾವು ಮಹಾದ್ರವ್ಯಸ್ಥರು, ಅಹುದೆಹುದು, ನಮ್ಮ ದ್ರವ್ಯಾಧಿಪತಿತ್ವಕ್ಕೆ ಆರೂ ಸಮಾನಂಬರಲರಿಯರು. ಈ ಭೂಭಾಗದಲ್ಲಿರುವಂತಾ ಸಕಲಾತ್ಮರುಗಳೆಲ್ಲರೂ ನಮ್ಮ ಕೈಯಿಂದಲೇ ಹಣಬಡ್ಡಿ ಕಡಬಡ್ಡಿಗಳ ತೆಗದುಕೊಂಡುಹೋಗಿ ತಮ್ಮತಮ್ಮ ಗೃಹಭಾರವನೀಗಿಕೊಂಡುಹೋಗುತಿರುವವರು, ನಮ್ಮ ದ್ರವ್ಯಾಧಿಪತಿತ್ವಕ್ಕೆ ಆರೂ ಸಮಾನಂಬರಲರಿಯರು. ಹಿಂದಕ್ಕೆ ಪರಮೇಶ್ವರನ ಭಂಡಾರಿಯಾಗಿ ಕುಬೇರನೊಬ್ಬನು ಮಹಾದ್ರವ್ಯಸ್ಥನುಂಟೆಂದು ಹೇಳುವರು. ಅವನೇನಾದರೂ ನಮ್ಮ ದ್ರವ್ಯತ್ವಕ್ಕೆ ಸಮಾನಬಂದರೆಬರಲಿ, ಮಿಕ್ಕಿನವರ್ಯಾರೂ ನಮ್ಮ ದ್ರವ್ಯಕ್ಕೆ ಸಮಾನಂಬರಲರಿಯರೆಂದು ಹೇಳಿಕೊಳ್ಳುವುದೇ ದ್ರವ್ಯಮದವು. ರೂಪು-ನಖಶಿಖಿ, ಶಿಖಿನಖಾಂತ್ಯಮಾದ ಸರ್ವಲಕ್ಷಣ ಸಂಪೂರ್ಣಮಾದ ಮಹಾಸೌಂದರ್ಯವನುಳ್ಳ ಪುರುಷರಾಯಿತ್ತಾದೊಡೆ ನಾವು ಮಹಾಲಾವಣ್ಯವುಳ್ಳವರು, ಮಹಾಚಲುವರು, ನಮ್ಮ ಲಾವಣ್ಯಾಕ್ಕೆ ಆರೂ ಸಮಾನಂಬರುವದಿಲ್ಲವೆಂದು ಹೇಳಿಕೊಳ್ಳಬಾರದು. ಅಹುದು ಅಥವಾ ಒಂದುವೇಳೆ ಹೇಳಿಕೊಂಡರೂ ಅವರಮಾತು ಅವರನ್ನವಲಂಬಿಸಿ ತೋರುವುದಲ್ಲದೆ ಸರ್ವಲಕ್ಷಣವನುಳ್ಳ ಕುರೂಪಿಪುರುಷರಾದಡೆಯೂ ರೂಪುಮದವೆಂಬುದು ತಲೆದೋರಿದಾಗ ನಾವು ಮಹಾಲಾವಣ್ಯವುಳ್ಳವರು, ಲಾವಣ್ಯಪುರುಷರು ನಮ್ಮಲಾವಣ್ಯಕ್ಕೆ ಆರೂ ಸಮಾನಂಬರುವದಿಲ್ಲ. ಹಿಂದಕ್ಕೆ ಕಂದರ್ಪ ನಳಕೂಬರರು ಮಹಾ ಲಾವಣ್ಯವುಳ್ಳ ಪುರುಷರುಂಟೆಂದು ಹೇಳುವರು, ಅವರೇನಾದರೂ ನಮ್ಮ ಲಾವಣ್ಯಕ್ಕೆ ಸಮಾನಂಬಂದರೆಬರಲಿ, ಮಿಕ್ಕಿನವರ್ಯಾರೂ ಸಮಾನಂಬರಲರಿಯರು ಎಂದು ಹೇಳಿಕೊಂಬುವುದೇ ರೂಪುಮದವು. ಯೌವನ-ಎಳೆಯಜವ್ವನ, ಮೊಳೆಯಜವ್ವನ, ತುಂಬುಜವ್ವನ, ಸೊಕ್ಕುಜವ್ವನವನುಳ್ಳ ಪ್ರಾಯಸಮರ್ಥರಾದ ಪುರುಷರು ನಾವು, ಮಹಾ ಯೌವನಸ್ಥನು, ಪ್ರಾಯಸಮರ್ಥನು, ನಾನುವಯಸ್ಸುಳ್ಳವನು ಎಂದು ಹೇಳಿಕೊಳ್ಳಬಾರದು. ಅಹುದು, ಅಥವಾ ಒಂದುವೇಳೆ ಹೇಳಿಕೊಂಡರೂ ಅವರಮಾತು ಅವರನ್ನವಲಂಬಿಸಿತೋರುವುದು. ಅದಲ್ಲದೆ ಅರವತ್ತುವರುಷ, ಎಪ್ಪತ್ತುವರುಷ, ಎಂಭತ್ತುವರುಷಹೋದ ವೃದ್ಧಪುರುಷರು ಯೌವನವನುಳ್ಳ ಸ್ತ್ರೀಯ

ಳನ್ನು ವಿವಾಹವಾಗಿರುವರು ಅವರಮುಂದೆ ಯಾರಾದರೂ ಮುಪ್ಪಿನವ ಬನ್ನೀಯೆಂದು ಕರೆದರೆ ಆಗ ಯೌವನಮದದಭಿಮಾನವು ತಲೆದೋ ನಾವೇನು ಮುಪ್ಪಿನವರಾದವೆ, ನೀವೀಗ ಮುಪ್ಪಿನವರು, ನೀವೇ ಮುಪ್ಪಿನವರಲ್ಲದಿರ್ದರೆ ನಿಮ್ಮ ಕೇಶಂಗಳೇನುಕಾರಣ ಬಿಳ್ಪಾದವು, ನಮಗೇನು ದಿನತುಂಬಿ ಬೆಳ್ಳಗಾದವೋ, ಪರಿಮಳದ ತಿಗುರನೇರಿಸಿ ಬೆಳ್ಳಗಾದವಲ್ಲದೆ ನಮಗೇನು ದಿನತುಂಬಿ ನೆರೆಬಂದವೆ, ನೀವೇ ಮುಪ್ಪಿನವರಲ್ಲದಿದ್ದರೆ ನಿಮ್ಮ ದಂತಗಳೇನುಕಾರಣ ಭಗ್ನವಾದವು, ಕರ್ಪುರದ ವೀಳ್ಯಗಳವಾ ನಮ್ಮದಂತ ಭಗ್ನವಾದವಲ್ಲದೆ ನಮಗೇನು ದಿನತುಂಬಿ ದಂತಭಗ್ನವಾದವೆ, ನಮ್ಮ ಯೌವನತ್ವವ ನೋಡಬೇಕಾದರೆ ಆರತೊಡೆಮೊಡಹಕ್ಕೆ ಮಣಿಯಬಾರದ ತೇಜಿಗೆಳಕೊಟ್ಟು ನೋಡಲಿ, ಆರುಕಾಮತೃಪ್ತಿಯನ್ನೈದಲಾರದಿದ್ದರೆ ಹಸ್ತಿನಿ ಚಿತ್ತಿನಿ ಸ್ತ್ರೀಯರ ಕೊಟ್ಟುನೋಡಲಿ ಊಟಗಳುಣ್ಬುವಲ್ಲಿ ತೃಷೆಗಳಮಾಡುವಲ್ಲಿ ಕುಸ್ತಿಗಳಮಾಡುವಲ್ಲಿ ಹೊರೆಗಳಹೊರುವಲ್ಲಿ ದಾರಿಗಳನಡೆವಲ್ಲಿ, ನಮ್ಮ ಯೌವನತ್ವವ ನೋಡಬೇಕಲ್ಲದೆ ನಮ್ಮ ಯೌವನತ್ವಕಾರೂ ಸಮಾನಂ ಬರಲರಿಯರು. ಹಿಂದಕ್ಕೆ ಶ್ರೀಕೃಷ್ಣಕಾರ್ತವೀರ್ಯರೆಂಬರು ತೋಳಿಗೆ ಸಾವಿರಸಾವಿರ ಸ್ತ್ರೀಯರನ್ನನುಭವಿಸಿ ವರಿಗೆ ಕಾಮತೃಪ್ತಿಯಾಗಿ ತನುಗೆ ಕಾಮತೃಪ್ತಿಯಾಗದೆ ಇರುವಂತ ದೀರ್ಘಕಾಮವನುಳ್ಳ ಪುರುಷರುಗಳುಂಟೆಂದು ಹೇಳುವರು, ಅವರೇನಾದರು ನಮ್ಮ ಯೌವನಕ್ಕೆ ಸಮಾನಬಂದರೆಬರಲಿ, ಮಿಕ್ಕಿನವರಾರೂ ಸಮಾನಂ ಬರಲರಿಯರು ಎಂದು ಹೇಳಿಕೊಂಬುವದೇ ಯೌವನ ಮದವು ವಿದ್ಯಾ-ಚೌಷಷ್ಟಿವಿದ್ಯಂಗಳ ಬಲ್ಲಂತ ಮಹಾಪ್ರವೀಣ ಪುರುಷನಾಗಿತ್ತಾದೊಡೆ ನಾವು ಮಹಾವಿದ್ವಾಂಸರು ನಾವು ಮಹಾಶಾಸ್ತ್ರಜ್ಞರು ನಮ್ಮ ವಿದ್ವಾಂಸತ್ವಕ್ಕೆ ಆರೂಸಮಾನಂಬರುವರಿಲ್ಲ ಎಂದು ಹೇಳಿಕೊಳ್ಳಬಾರದು. ಅಹುದು ಅಥವಾ ಒಂದುವೇಳೆ ಹೇಳಿಕೊಂಡರೂ ಅವರಮಾತು ಅವರನ್ನವಲಂಬಿಸಿ ತೋರುವದು ಅದಲ್ಲದೆ ಪುರಾಣದೊಳಗೆ ನಾಲ್ಕುಗ್ರಂಥ ವೇದದೊಳಗೆ, ನಾಲ್ಕುಮಂತ್ರ ಆಗಮದೊಳಗೆ, ನಾಲ್ಕುವೃತ್ತ ಗದ್ಯಪದ್ಯಂಗಳೊಳಗೆ ಹತ್ತೆಂಟುಗದ್ಯಪದ್ಯಂಗಳನ್ನು, ಲೋಕದ ವಾಗಟೆಗಳೊಳಗೆ ಹತ್ತೆಂಟುವಾಗಟೆಗಳನ್ನು, ಸ್ವರವರ್ನದೊಳಗೆ ಹತ್ತೆಂಟು ಸ್ವರವರ್ನಗಳನ್ನು ಕಲಿತುಕೊಂಡು ಬೀದಿಬಜಾರಂಗಳಲ್ಲಿ ಮನೆಮಳಿಗೆಗಳಲ್ಲಿ ಕುಳಿತುಕೊಂಡು ಅರ್ಥವಮಾಡಿಹೇಳಿದಲ್ಲಿ ಆ ಮೂಢಾತ್ಮರು ಮಹಾವಿದ್ವಾಂ

ಸರೆಂದು ಕೀರ್ತಿಸಿದಲ್ಲಿ ವಿದ್ಯಾಮದವೆಂಬುದು ತಲೆದೋರಿ ನಾವು ಮಹಾ ವಿದ್ವಾಂಸರು ನಾವು ಮಹಾಶಾಸ್ತ್ರಗಳು ಅಹುದಹುದು ನಮ್ಮ ವಿದ್ವಾಂಸತ್ವಕ್ಕೆ ಆರೂ ಸಮಾನಂ ಬರಲರಿಯರು. ಈ ಭೂಭಾಗವೆಲ್ಲಿರುವಂತ ಸಕಲ ವಿದ್ವಾಂಸರುಗಳೆಲ್ಲ ನಮ್ಮಕೈಯಿಂದ ಶಬ್ದಭಿಕ್ಷವ ಬೇಡಿಕೊಂಡುಹೋಗಿ ತಮ್ಮತಮ್ಮ ಗೃಹಭಾರವ ನೀಗಿಸಿಕೊಂಬುವರಲ್ಲದೆ ನಮ್ಮ ವಿದ್ವಾಂಸತ್ವಕ್ಕೆ ಆರೂ ಸಮಾನಂಬರುವವರಿಲ್ಲ. ಹಿಂದಕ್ಕೆ ದೇವತಾದಿಗಳಿಗೂ ರಾಕ್ಷಸರಿಗೂ ಗುರುಗಳಾದ ಬೃಹಸ್ಪತಿ ಶುಕ್ರಾಚಾರ್ಯರೆಂಬುವರು ಮಹಾವಿದ್ವಾಂಸರುಂಟೆಂದು ಹೇಳುವರು. ಅವರೇನಾದರೂ ನಮ್ಮ ವಿದ್ವಾಂಸತ್ವಕ್ಕೆ ಸಮಾನಂಬಂದರೆಬರಲಿ, ಮಿಕ್ಕಿನವರ್ಯಾರೂ ಸಮಾನಂ ಬರಲರಿಯರು ಎಂದು ಹೇಳಿಕೊಂಬುವುದೇ ವಿದ್ಯಾಮದವು. ರಾಜಮದವು-ಈ ಜಂಬುದ್ವೀಪವನ್ನೆಲ್ಲಾ ಒಂದೊಂದೇ ಕೊಡೆಯಲ್ಲಿ ಆಳುವಂತಾ ಏಕಚಕ್ರಾಧೀಶ್ವರರು ಮಹಾರಾಜ್ಯಾಧಿಪತಿಗಳಾಯಿತ್ತಾದೊಡೆ ನಾವು ಮಹಾರಾಜ್ಯಾಧಿಪತಿಗಳು ಏಕಚಕ್ರಾಧೀಶ್ವರರೆಂದು ಹೇಳಿಕೊಳ್ಳಲೇ ಬಾರದು. ಅಹುದು, ಅಥವಾ ಒಂದುವೇಳೆ ಹೇಳಿಕೊಂಡರೂ ಅವರ ಮಾತು ಅವರನ್ನವಲಂಬಿಸಿ ತೋರುವುದು. ಅದಲ್ಲದೆ ಹತ್ತುಹಳ್ಳಿ, ಹತ್ತುಪುರ, ಹತ್ತುಗ್ರಾಮವನಾಳುವಂತಾ ಪ್ರಭುಗಳು ತಮ್ಮತಮ್ಮ ಯೆಲ್ಲೆವಾಸಗಳಲ್ಲಿ ಜಗಳದಲ್ಲಿ ಕಡಿದಾಡಿ ಒಡಿದಾಡಿ ಪರಬಲವ ಮುರಿದೊತ್ತಿ, ಮಹಾದಾತರೆಂದು ಅರಿಗಿರಿ ವಜ್ರದಂಡ, ಭೇಕ ಭುಜಂಗ ಮೂಲಕುದ್ದಾಲನೆಂದು ತಮ್ಮ ಭಟರುಗಳಿಂದ ಹೊಗಳಿಸಿಕೊಳ್ಳುತ್ತಾಬಂದು ಸದರಮೇಲೆ ಕುಳಿತುಕೊಂಡು ಸಲಾಮು ತೆಗದುಕೊಳ್ಳುವಂತಾ ವೇಳೆಯಲ್ಲಿ ಆಗ ರಾಜ್ಯಮದವೆಂಬುದು ತಲೆದೋರಿ ನಾವು ಪರಮೇಶ್ವರನು ಮಾಡಿದ ಮೇರೆಯಿಂದ ಇರಬೇಕೆಂತೈದೇವಲ್ಲದೆ, ನಾವು ಮೇರೆದಪ್ಪಿದರೆ ಸಮುದ್ರವು ಮೇರೆದಪ್ಪಿದಹಾಂಗಲ್ಲವೆ, ನಾವಾಗಿ ಕಾಂಡವಪೊತ್ತು ನಡೆದರೆ ನಮ್ಮ ಕಾಂಡದಮುನೆಗೆ ಮಾರಾಂತು ನಿಲ್ಲುವಂತಾ ಧೊರೆಗಳಾರಿದ್ದಾರು, ಆರೂಇಲ್ಲ. ಹಿಂದಕ್ಕೆ (ಶ್ಲೋ ॥ ಹರಿಶ್ಚಂದ್ರೊನಳೋರಾಜಾ ಪುರುಕುತ್ಸಃ ಪುರೂರವಃ।ಸಗರಃಕಾರ್ತವೀರ್ಯಶ್ಚ) ಎಂಬ ಷಟ್ಚಕ್ರವರ್ತಿಗಳು ಈ ಜಂಬುದ್ವೀಪವನ್ನೆಲ್ಲಾ ಒಂದೊಂದು ಕೊಡೆಯಲ್ಲಿ ಆಳಿದರು ಎಂದು ಹೇಳುವರು. ಅವರೇನಾದರೂ ನಮ್ಮ ರಾಜ್ಯಾಧಿಪತಿತ್ವಕ್ಕೆ ಸಮಾನಂಬಂದರೆ ಬರಲಿ, ಮಿಕ್ಕಿನವರ್ಯಾರೂ ನಮ್ಮ ರಾಜಾಧಿಪತಿತ್ವಕ್ಕೆ ಸಮಾನಂಬರಲ

ರಿಯರು ಎಂದು ಹೇಳಿಕೊಂಬುವುದೇ ರಾಜ್ಯಮದವು. ತಪಃ-ಊರ
ಶೆದು ಘೋರಾರಣ್ಯಕ್ಕೆಹೋಗಿ ಫಲಾಹಾರ, ಪರ್ನಾಹಾರ, ಜಲಾಹಾ
ಲಾಹಾರ, ಗಾಳಿ ಆಹಾರ, ಉಕ್ಕಿನಚೂರ್ಣವಕೊಂಡು ಕೋಡಗಲ್ಲ
ಪಂಚಾಗ್ನಿಮಧ್ಯದಲ್ಲಿ ಏಕಪಾದಸ್ಥಿತರಾಗಿನಿಂದು ಉಗ್ರತಪವಂ ಮ
ವಂತಾ ತಪಸ್ವಿಗಳು ನಾವು ಮಹಾತಪಸ್ವಿಗಳು, ಯೋಗೀಶ್ವರರು,
ದುನಿಗ್ರಹಿಗಳು, ನಾವು ಮಹಾ ಜಿತೇಂದ್ರಿಯರು, ಊರ್ಧ್ವರೇತಸ್ಸ
ರು ಎಂದು ಹೇಳಿಕೊಳ್ಳಲೇಬಾರದು. ಅಹುದು, ಅಥವಾ ಒಂದುವೇಳೆ
ಳಿಕೊಂಡರೂ ಅವರಮಾತು ಅವರನ್ನವಲಂಬಿಸಿ ತೋರುವುದು. ಅ
ಮದುವೆಯಾದೆನೆಂದರೆ ಕೈಯಲ್ಲಿ ರೊಕ್ಕವಿಲ್ಲ, ತಂದುವಿವಾಹ ಮಾಡ
ದಕ್ಕೆ ಕರ್ತರಿಲ್ಲ, ತನಗೆ ಕೂಡಿಸಿಕೊಡುವುದಕ್ಕೆ ಕುಂಟಣಿಗಿತ್ತಿಯರಿ
ದ್ದಲ್ಲಿ ತಾನು ಕುರೂಪಿಯಾದಕಾರಣ ತನಗೆ ಸ್ತ್ರೀಯರು ಒಲಿದು ಬಾ
ದಿದ್ದಲ್ಲಿ ಗ್ರಾಮ ಪುರ ಪಟ್ಟಣಂಗಳ ಸಂದಿಗೊಂದಿನಲ್ಲಿ ಸಂಜೆ ಮುಂಜಾ
ದಲ್ಲಿ ತನ್ನ ಮನಬಂದಂತೆ ವರ್ತಿಸುತ್ತಾ ನಾಲ್ವರ ಮಧ್ಯದಲ್ಲಿ ಒ
ಮಾತುಕಥೆ ಪ್ರಸಂಗವು ಬಂದಾಗ ಆಗ ತಪೋಮದವೆಂಬುವದು
ದೋರಿ, ನಾವು ಮಹಾಜಿತೇಂದ್ರಿಯರು, ಯತೀಶ್ವರರು, ಯೋಗಿ
ಊರ್ಧ್ವರೇತಸ್ಸುಳ್ಳವರು, ಬಿಂದುನಿಗ್ರಹಿಗಳು, ನಮ್ಮ ಜಿತೇಂದ್ರಿಯ
ಕ್ಕೆಆರೂ ಸಮಾನಂಬರುವರಿಲ್ಲ. ಹಿಂದಕ್ಕೆ ಹನುಮಣ್ಣನು ತನ್ನ ತಾ
ಯಾದಂಜನಾದೇವಿಯ ಗರ್ಭದೊಳಗಿದ್ದಾಗಲೇ ಶಿಶ್ನವು ಯೋನಿಸ
ಕುತ್ತಿದೆಎಂದು ತಾಯಿಕೊಂಡ ಸ್ವರ್ಣರಸವನ್ನು ಕವುಪ ಕಟಸೂತ್ರ
ಗಿ ಅಳವಡಿಸಿಕೊಂಡು ಹುಟ್ಟಬಂದನು. ಅವನು ಮಹಾಜಿತೇಂದ್ರಿ
ತ್ವವೆನುಳ್ಳ ಪುರುಷನುಂಟೆಂದು ಹೇಳುವರು. ಅವನೇನಾದರೂ ನ
ಜಿತೇಂದ್ರಿಯತ್ವಕ್ಕೆ ಸಮಾನಂಬಂದರೆಬರಲಿ, ಮಿಕ್ಕಿನವರ್‍ಯಾರೂ
ಮ್ಮ ಜಿತೇಂದ್ರಿಯತ್ವಕ್ಕೆ ಸಮಾನಂಬರಲರಿಯರೆಂದು ಹೇಳಿಕೊಂಬ
ದೇತಪೋಮದವು. ಈಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ
ರಂಗದಷ್ಟಮದಂಗಳ ಭೇದವು. ಸಕಲಾತ್ಮರುಗಳೂ ತಮ್ಮ ತ
ಮನದೊಳಗೆ ತೋರಿದ ಮದಗುಣಂಗಳನ್ನೇ ಬಹಿರಂಗದಲ್ಲಿ ವಾಗ್
ನಿಂದ ವಚಿಸಿ ಹೇಳುವಂತಾ ಎಂಟುಪ್ರಕಾರವಾದ ಮದಗುಣಂಗಳ
ಗೆಯ ವಿಚಾರವಂ ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೧೭ಕ್ಕೆ ಮಂಗಳಮಹಾ.

## ಅಷ್ಟಮೂರ್ತಿ ಮದಗಳು.

ಇನ್ನು ಮುಂದೆ ಅಷ್ಟಮೂರ್ತಿಯ ಮದಂಗಳು ತನ್ನಂಗ ಸಂಬಂಧವಾದೆಂಟುಭೂತಂಗಳನ್ನೇ ಆದಿಯಮಾಡಿಕೊಂಡು ತೋರುವೆಂಟು ಪ್ರಕಾರವಾದ ಮದಗುಣಂಗಳೆಂಡುಂಟಾಗಿರುತಿಹವು. ಅವರ ಸ್ವಸ್ವರೂಪಮಂ ಹೇಳುತಿಹರು. ಅವಾವೆಂದೊಡೆ, ಧರಣೀತತ್ವ ಸಂಬಂಧವಾದ ಮದಗುಣವು, ಅಪ್ಪುತತ್ವ ಸಂಬಂಧವಾದ ಮದಗುಣವು, ಅಗ್ನಿತತ್ವ ಸಂಬಂಧವಾದ ಮದಗುಣವು, ವಾಯುತತ್ವ ಸಂಬಂಧವಾದ ಮದಗುಣವು, ಆಕಾಶತತ್ವ ಸಂಬಂಧವಾದ ಮದಗುಣವು, ಸೂರ್ಯತತ್ವ ಸಂಬಂಧವಾದ ಮದಗುಣವು, ಚಂದ್ರತತ್ವಸಂಬಂಧವಾದ ಮದಗುಣವು, ಮೂಲಾತ್ಮತತ್ವಸಂಬಂಧವಾದ ಮದಗುಣವು ಎನಿಸಿಕೊಂಬ ಇವು ತಾವೇ ಅಷ್ಟಮೂರ್ತಿಯ ಮದಂಗಳು. ಈ ಎಂಟುಪ್ರಕಾರವಾದ ಮದಗುಣಂಗಳಿಗೆ ವಿವರ :—ಧರಣೀತತ್ವ ಸಂಬಂಧವಾದ ಮದಗುಣವು ಜೀವಾತ್ಮನಿಗೆ ಎತ್ತಾನಕೊಂದುವೇಳೆ ತಲೆದೋರುವುದು. ಆ ತಲೆದೋರಿದಾಗ ತನು ಗುಣಭರಿತನಾಗಿ ದೇಹಸಂಬಂಧವಾದಿಪ್ಪತ್ತೈದು ತತ್ವಂಗಳ ವಿಚಾರದಲ್ಲಿ ತುಂಬಲ್ಪಟ್ಟಾತನಾಗಿ ವಸ್ತ್ರ, ಪಟ್ಟೆ, ಪಟ್ಟಾವಳಿ, ಚೀನಿ, ಚೀನಾಂಬರ, ಸಣ್ಣಬಣ್ಣ, ಹಳದಿ, ಹಸುರು, ಕರಿದು, ಕೆಂಪು, ಬಿಳಿದು ಮೊದಲಾದ ದಿವ್ಯದುಕೂಲಂಗಳನ್ನು ಸರ್ವಾಂಗಕ್ಕಾಚ್ಛಾದಿಸಿಕೊಳ್ಳಬೇಕೆನುತ್ತಿಹನು. ಆಭರಣ-ಉಂಗುರ, ಉಡಿದಾರ, ಗಂಟೆ, ಚವುಕಳಿ, ಕಡುಕು, ಕಂಠಮಾಲೆ, ಹಾರ, ಹೀರಾವಳಿ, ಉತ್ತರಕೇಸರ, ಹಸ್ತಕಡಗ, ಬಿಲ್ಲೆಸರ ಮುಂತಾದ ದಿವ್ಯಭೂಷಣಂಗಳನ್ನೂ, ಹಸ್ತಕಡಗ, ಅವಿಸ್ಮಾರತಾಯಿತ, ವಜ್ರಪದಕ ಇನ್ನು ಮುಂತಾದ ದಿವ್ಯಭೂಷಣಂಗಳನ್ನು ತತ್ತತ್ ಸ್ಥಾನಂಗಳಲ್ಲಿ ಅಲಂಕರಿಸಿಕೊಳ್ಳಬೇಕೆನುತಿಹನು. ಅನುಲೇಪನ-ಗಂಧ, ಕಸ್ತೂರಿ, ಪುನುಗು, ಜವ್ವಾಜಿ, ಕಪ್ಪುರಣ್ಣೆ, ಶಿಲಾರಸ ಮೊದಲಾದ ಪರಿಮಳದ್ರವ್ಯಂಗಳನ್ನು ಸರ್ವಾಂಗಕ್ಕೆ ತಿಗರನೇರಿಸಿಕೊಳ್ಳಬೇಕೆನುತಿಹನು. ತಾಂಬೂಲ-(ಶ್ಲೋ ॥ ತಾಂಬೂಲಂಕಟುತಿಕ್ತಮುಷ್ಣಮಧುಗಂ ಕ್ಷಾರಂಕಷಾಯಾನ್ವಿತಂ । ವಾತಘ್ನಂಕ್ರಿಮಿನಾಶನಂ ಕಫಹರಂ ಮುಂದಸ್ಯದೀಪಾಗ್ನಿಕಂ॥ಸ್ತ್ರೀಸಂಭಾಷಣಭೂಷಣಂ ರತಿಕರಂಶೋಕಸ್ಯವಿಚ್ಛೇದನಂ।ತಾಂಬೂಲಂತದಪಿತ್ರಯೋದಶಗುಣಾ ಸ್ಸ್ವರ್ಗೇಪತೆ ದುರ್ಲಭಂ॥) ಎಂದು ಹೇಳುತಿಹುದಾದಕಾರಣ ಒಳ್ಳಿತಾದ ಕಳಿಯಡಿ

ಕೆ, ಬಿಳಿಯೆಲೆ, ಕೆನೆಸುಣ್ಣ, ಕೈರವದಗುಳಿಗೆ ಮುಂತಾದವರಿಂದ ದಿನ್ನ
ಕ್ಕೆ ಹತ್ತೆಂಟುವೇಳೆ ವೀಳ್ಯವನೀಡಿಕೊಳ್ಳಬೇಕೆಂದು ಬಯಸುತ್ತಿಹನು
ಈ ಪೃಥ್ವೀಮದ ತಲೆದೋರಿದಲ್ಲಿಷ್ಟೆಲ್ಲಾಗಬೇಕೆನುತಿಹನು. ಇನ್ನಿ
ಷ್ಟದರಿದ್ರನಾದೊಡೆಯೂ ಇಷ್ಟೆಲ್ಲಾಗಬೇಕೆಂದಿಚ್ಛೈಸುತಿಹನಾತ್ಮನ
ಅಪ್ಪುತತ್ವ ಸಂಬಂಧವಾದ ಮದಗುಣವು ಜೀವಾತ್ಮನಿಗೆ ಇದ್ದ
ಹಾಂಗೆ ಎತ್ತಾನಕೊಂಡುವೇಳೆ ತಲೆದೋರುವುದು. ಆ ತಲೆದೋರಿ
ಗ ಸಂಸಾರಭರಿತನಾಗಿ ಹೊನ್ನು, ಹೆಣ್ಣು, ಮಣ್ಣು, ಪುತ್ರ, ಮಿತ್ರ, ಕ
ತ್ರಾದಿ ಸಕಲ ಸಂಸ್ಕೃತಿಗಳಲ್ಲಿ ತುಂಬಲ್ಪಟ್ಟವನಾಗಿ ಎನಗೆಬೇಕುಂಬು
ಕ್ಕನ್ನ, ಉಡುವುದಕ್ಕೆ ಧೋತ್ರ, ತೊಡುವುದಕ್ಕಂಗಿ, ಹೊದಿಯುವು
ಕ್ಕಚ್ಚಡ, ಕಂಬಳಿ, ಕಟ್ಟುವುದಕ್ಕೆ ರುಮಾಲು, ಇಡುವುದಕ್ಕಾಭರಣ
ಹಿಡಿವುದಕ್ಕೆ ಅಡಿಗೆ ಕತ್ತಿ ಮುಂತಾದುಪಕರಣಂಗಳಾಗಬೇಕೆನುತಿಹನು
ಮನೆಗೆಬೇಕು-(ಶ್ಲೋ॥ ಅಗ್ನಿಕಾಷ್ಠಂಚದರ್ವೀಚ ತಂಡುಲಂಭಾಂಡಭಾ
ಜನಂ । ಪಯಶ್ಚಾಭಾಚಲವಣಂ ನವೋಕ್ತಂಪಾಕಲಕ್ಷಣಂ॥) ಎಂಬ
ಹೇಳುತಿಹುದಾದಕಾರಣ ಉಪ್ಪುಕೂಡಿ ಒಂಭತ್ತು ಸಾಧನದ್ರವ್ಯಂಗಳಾ
ಗಬೇಕೆಂಬುದರ್ಥ. ಮತ್ತಂತುಮಲ್ಲದೆ ಆ ಗೃಹಸಂಬಂಧವಾದ ಸ್ತ್ರೀ
ಯಳಿಗುಂಬುವದಕ್ಕನ್ನ, ಉಡುವುದಕ್ಕೆ ಸೀರೆ, ತೊಡುವುದಕ್ಕೆ
ಕೆ, ಬಾಯಿಗೆಲೆಯಡಿಕೆ, ನೆತ್ತಿಗೆಣ್ಣೆ, ಇಡುವುದಕ್ಕೆ ಹಸ್ತಕಡಗ,
ಳೋಲೆ, ಮುತ್ತಿನಕೊಪ್ಪು, ಚಿಂತಾಕ, ರಾಗಟೆ, ಚೌಲಿತುಂಬು, ಮು
ಗುತಿ, ಮುತ್ತಿನಬೊಟ್ಟು ಮುಂತಾದಾಭರಣಗಳು, ಮಲಗುವುದಕ್ಕೆ
ಪರ್ಯಂಕ, ಕರವುದಕ್ಕೆ ಹತ್ತೆಂಟು ಹಯನಗಳು, ಸೇವೆಸತ್ಕಾರವ
ಮಾಡುವುದಕ್ಕೆ ಹತ್ತೆಂಟುಮಂದಿ ತೊತ್ತುಭಂಟರಾಗಬೇಕು. ಮಕ್ಕ
ಳಿಗೆಬೇಕು ಉಭಯಕುಲ ಶುದ್ಧವಾಗಿ ಹುಟ್ಟಿದ ತನಯರುಗಳಿಗೆ
ಸುರಂಗಿ, ಕಾಲಕಡಗ, ಕಿರಿಗೆಜ್ಜೆ, ಅರಳೆಲೆ, ಮೊಗಾಯಿ, ಅಂದಿಗೆ, ಹ
ಯುಗುರು ಮುಂತಾದ ಬಾಲತೊಡಿಗೆಗಳಾಗಬೇಕೆಂದಿಚ್ಛೈಸುತಿಹನು
ಈ ಮದ ತಲೆದೋರಿದಲ್ಲಿ ಇಷ್ಟೆಲ್ಲಾ ಆಗಬೇಕೆಂದಿಚ್ಛೈಸುತಿಹನಾತ್ಮ
ನು-ಅಗ್ನಿತತ್ವ ಸಂಬಂಧವಾದ ಮದಗುಣವು ಜೀವಾತ್ಮನಿಗೆ ಇದ್ದ
ಹಾಂಗೆ ಎತ್ತಾನಕೊಂಡುವೇಳೆ ತಲೆದೋರುವದು. ಆ ತಲೆದೋರಿದಾ
ಕಾಮಶೃಂಗಾರಸಭರಿತನಾಗಿ ಮನ್ಮಥವಿಕಾರರಸದಿಂದ ತುಂಬಲ್ಪಟ್ಟಾತನಾ
ಕರಸಬೇಕು. ತನ್ನಕಣ್ಣಿಗೆ ರಮ್ಯವಾಗಿ ಮನಸ್ಸಿಗೆ ಪ್ರೀತಿಯಾ

ಸ್ತ್ರೀಯಳು ಯಾವಸ್ಥಾನದಲ್ಲಿದ್ದರೂ ಆಯಾಕೆಯನ್ನು ಪೋತದೂತಿಯ ರನ್ನು ಬಿಟ್ಟು ತಾನಿದ್ದಂತ ಸ್ಥಾನಕ್ಕೆ ಬರಮಾಡಿಕೊಳ್ಳಬೇಕು, ನೋಡ ಬೇಕು, ಈಕೆಯಳೇನು ಗುಣಸ್ತ್ರೀಯಳೋ ಅವಲಕ್ಷಣಸ್ತ್ರೀಯಳೋ ಎಂದು ಆಯಾಕೆಯಲ್ಲಿ ಸಣ್ಣವರು ದೊಡ್ಡವರು ತಿಳ್ವಾಗಾರವೆಂಬ ಹದಿ ನೆಂಟು ಸುಲಕ್ಷಣಗಳನು ಪರೀಕ್ಷಿಸಬೇಕೆನುತಿಹನು, ನುಡಿಸಬೇಕು, ಈಕೆಯಳೇನು ಪ್ರೌಢಸ್ತ್ರೀಯಳೋ ಮುಗ್ಧಸ್ತ್ರೀಯಳೋ ಎಂದು ಆಕೆಯೊಡನೆ ಹದಿನು, ಚದುರು, ಗನ್ನ, ಗದುಕು, ತಿರುಹು, ಮುರು ಹು, ಟಕ್ಕು, ಟವುಳಿಗಳಿಂದ ಕಾಮಕಲಾಪ್ರೌಢಿಯ ಕೂಡೆ ಪ್ರಸಂಗವ ನಾಡಬೇಕೆನುತಿಹನು. ಆಲಿಂಗಿಸಬೇಕು, ಮಾತಿಗೆಮಾತು, ಉತ್ತರಕು ತ್ತರವನುಕೊಟ್ಟು ರೂಪುರೇಖೆಗಳಿಂದ ನೇರಿತ್ತಾಗಿದ್ದಲ್ಲಿ ಆಕೆಯೊಡನೆ ತರ್ಜನ, ವಿಡಂಬನ, ಘರ್ಷಣ, ತಾಡನ, ತೆರ್ಕೆ, ಚುಂಬನಾದಿಗಳಿಂದ ರತಿಸುಖವ ಸುಖಿಸಬೇಕೆಂದಿಚ್ಛೈಸುತಿಹನಾತ್ಮನು. ಈ ಮದತಲೆದೋ ರಿದಲ್ಲಿ ಇಷ್ಟೆಲ್ಲಾಗಬೇಕೆಂದಿಚ್ಛೈಸುತಿಹನು. ವಾಯುತತ್ವಸಂಬಂಧ ವಾದ ಮದಗುಣವು ಜೀವಾತ್ಮನಿಗೆ ಇದ್ದಕಿದ್ದಹಾಂಗೆ ಎತ್ತಾಸಕೊಂದು ವೇಳೆ ತಲೆದೋರುವದು. ಆತಲೆದೋರಿದಾಗ ಪ್ರಯಾಣಭರಿತನಾಗಿ ಹೋಗಬೇಕೆಂಬ ಗಮನಭಾವದಲ್ಲಿ ತುಂಬಲ್ಪಟ್ಟಾತನಾಗಿ ಯೆತ್ತು, ಕಂ ಟಲೆ, ತೊತ್ತು, ಭಂಟರು, ಬುತ್ತಿ ರೊಟ್ಟೆ ಸಹವಾಗಿ ಯೆಚ್ಚಕ್ಕೆ ಸಹಸ್ರ ಸಂಖ್ಯೆವರಹಗಳನ್ನು ತೆಗದುಕೊಂಡು ಹೋಗುವ, ವಿಜಾಪುರ, ನಾಗೂ ರು, ನಾಗಪಟ್ಟಣ, ಕಂಚಿ, ಚನ್ನಪಟ್ಟಣ, ಪರಿಯಂತರ ಪೈದಬೇಕೆನು ತಿಹನು. ಕೊಂಡಿಹ ಆಹೊದಂತಸ್ಥಾನದಲ್ಲಿ ಕಟ್ಟಾಣಿ ಮುತ್ತು, ಕಡ ಗ, ಹವಳ, ಪಟ್ಟಕ್ಕಳವಡುವಂತ ಆನೆ ಜಾತ್ಯಶ್ವಾದಿಗಳನ್ನು, ಗೋಮೇ ಧಿಕ, ಪುಷ್ಯರಾಗ, ವಜ್ರ, ವೈಡೂರ್ಯ, ನೀಲ, ಪವಳ, ಪಚ್ಚೆ, ಅನ ರ್ಘೋತ್ತಮನಾಯಕ ರತ್ನ ಮೊದಲಾದವನ್ನು ಕ್ರಯವಮಾಡಿ ತೆಗದು ಕೊಳ್ಳಬೇಕು. ಬಂದಿಹ ಅಲ್ಲಿ ತೆಗದುಕೊಂಡಂತಾ ವಸ್ತುಗಳನ್ನು ಯೆ ತ್ತುಕಂಟಲೆಗಳಲ್ಲಿ ಅಡಕವಮಾಡಿ ತುಂಬಿಕೊಂಡು ತಳಸುಂಕ, ಮಾರ್ಗ ಸುಂಕ, ಮೇಲುಸುಂಕವನ್ನು ಕೊಟ್ಟು-ತಾ ಬರುವಂತದಾರಿಯಲ್ಲಿ ಗಡ್ಡೆ ಪಿಂಡರು, ತುಂಡಮಾನ್ಯೆಯರು, ದಾರಿಚೋರರಂತಪ್ಪಿಸಿ ತಾಮುನ್ನಿದ್ದ ಸ್ಥಾನಕ್ಕೆ ಸಾಮ್ಯಸಾಮ್ಯದಿಂದ ಯೆಡೆಗೈದು ಯೆಡೆಗೈದು ಬರಬೇಕೆನು ತಿಹನು. ಕೊಟ್ಟಹ ಆದಂತ ವಸ್ತುಗಳನ್ನು ಮಳಿಗೆ ಮನೆಗಳಲ್ಲಿ ಅಡ

ಕವ ಮಾಡಿ ತುಂಬಿಕೊಂಡು ಕಾಲಭೇದವನರಿದು ಅಲ್ಲಿ ಒಂದಕ್ಕೆ ತಂದುದ್ದ ಇಲ್ಲಿ ಹತ್ತಕ್ಕೆ ಅಲ್ಲಿಹತ್ತಕ್ಕೆತಂದದ್ದ ಇಲ್ಲಿನೂರಕ್ಕೆ, ಅಲ್ಲಿನೂರಕ್ಕೆತಂದ ದ್ದ ಇಲ್ಲಿಸಾವಿರಕ್ಕೆ, ಅಲ್ಲಿಸಾವಿರಕ್ಕೆತಂದುದ ಇಲ್ಲಿಲಕ್ಷಕ್ಕೆ ಕೊಟ್ಟು ಇ ಹಿಂದನೇಕಲಾಭಗಳನ್ನು ಪಡೆದುಕೊಂಡು ತಾನು ತನ್ನಸತಿಸುತಾದಿ ಳು ಸುಖದಲ್ಲಿ ಊಟವಮಾಡಿಕೊಂಡಿರಬೇಕೆಂದಿಚ್ಛೈಸುತಿಹನಾತ್ಮನು. ಆಕಾಶತತ್ವಸಂಬಂಧವಾದ ಮದಗುಣವು ಜೀವಾತ್ಮನಿಗೆ ತಲೆದೋರಿ ಗ ವಾಹನಭರಿತನಾಗಿ ಕರಿತುರಗ ಅಂದಳರಥಾರೂಢನಾಗಬೇಕೆಂಬ ಗ ನ್ಭಾವದಲ್ಲಿ ತುಂಬಲ್ಪಟ್ಟಾತನಾಗಿ ಆನೆಬೇಕು, ಸ್ವಬಲರಕ್ಷಣ, ಪರಬ ಶಿಕ್ಷಣ, ಸಂಚಿತ, ಪುಳಿಕಿತ, ಅರ್ದಕಪೋಲಿತ ಮೊದಲಾದ ಕೀಳ್ಮದ ಲ್ಮದಸುರಿಯಲ್ಪಟ್ಟ ಸಪ್ತಾವಸ್ಥೆ ಸಂಯುಕ್ತಮಾದುಭಯಬಲದ ಭೇದ ವನರಿದು ಕದನಂಗೈಯ್ವ ಒಂದುಘಟ, ಎರಡುಘಟ, ಗಂಧಸಿಂಧೂರಂ ಳಾಗಬೇಕೆನುತಿಹನು. ಕುದುರೆಗಳಾಗಬೇಕು, ಶರವೊರುತ ಕುರ ತತಿಗೆ, ಮುಂಚುನತುರಗ ರಾಜಪಂಚಕಲ್ಯಾಣಿ ಮೊದಲಾದ ಜಾತ್ಯಾ ದಿಗಳು ಲಕ್ಷ್ಯಸಂಖ್ಯೆ ಆಗಬೇಕೆನುತಿಹನು. ಅಂದಳಬೇಕು, ಕನಕ ಜತರ ಚಿತವಾದ ಕೊಂಚನುಳ್ಳ ಪಟ್ಟುಗೊಂಡೆ ಮುತ್ತಿನಕುಚ್ಚುಗಳ ದ ಲಂಕೃತವಾದ ಪವಳದಲತೆಗಲಿಂದ ಶಿಂಗರವಾದ ನರವಾಹನವ ರಬೇಕೆನುತಿಹನು. ಸೇನೆ ಯೆಡಬಲ ಹಿಂದೆಮುಂದೆ ಮುತ್ತಿಮೋಹಿ ಬರುವ ಕಾಲಗ್ರಗ, ಕಾಲಪೆಂಡ್ಯ, ಹೊಕ್ಕುಳಘಂಟೆ, ಹುಲಿಚರ್ಮ ಹತ್ತ ಟ್ಟು, ಮುತ್ತಿನತುರಾಯಿ, ಬೆನ್ನುಚಮ್ಮಟಿಗೆ, ಹಗಲುದೀವಟಿಗೆ, ಹಾರಿಸು ವಪಾವಡ, ಹಳದಿ, ಹಸರು, ಕರಿದು, ಬಿಳಿದು, ಕೆಂಪು, ಮೊದಲಾದ ಬಿ ದುಗಳನಾಂತು ಚಿನ್ನದಕಟ್ಟು, ಬೆಳ್ಳಿಕಟ್ಟಿನ ಈಟಿ, ಕತ್ತಿ ಹರಿಗೆ ಮೊ ಲಾದ ಆಯುಧಂಗಳನ್ನು ಪಿಡಿದುಕೊಂಡಿರುವ ಪಟುಭಟರುಗಳ ಲಕ್ಷ ಕ್ಷ್ಯೋ ಆಗಬೇಕೆನುತಿಹನು. ತಾಳ, ಅಡಪ, ಕೈಪಿಡಿ, ಕುಂಚು, ಕಾಳ ಜಿ, ಗಿಂಡಿ, ಕಳಾಂಜಿಗಳನ್ನು ಪಿಡಿದು ಎಡಬಲದಲ್ಲಿ ನಿಂದು ಪಾಲೈಸುವ ಪ್ಪತ್ತೆರಡು ವಿನಿಯೋಗದ ಊಳಿಗರ ಮನುಜರುಗಳು ಆಗಬೇಕೆನುತಿ ನು. ಮತ್ತಂತುಮಲ್ಲದೆ ತಮ್ಮಗೇನಾದರೂ ಒಂದುಸಮಯ ಸಾರಿಬಂ ಲ್ಲಿ ಮೂಲದ್ರವ್ಯೋ ರಾಣಿವಾಸಿಪುರ ಮಡಗಿಕೊಂಬುವದಕ್ಕೆ ಜಲವನಗಿ ಪೃಥಕ್ಕವನಿ ಮೊದಲಾದಂತು ದುರ್ಗವರ್ಗಂಗಳಾಗಬೇಕೆನುತಿಹನು ತಂತ್ರ-ಇಷ್ಟೆಲ್ಲವ ವಹಿಸಿ ನಡಸುವದಕ್ಕೆ ಸಾಮ, ಭೇದ, ದಾನ, ದಂಡ

ವೆಂಬ ಚತುರ್ವಿಧುಪಾಯುವನ್ನು ಬಲ್ಲ ಶುಕ್ರಾಚಾರ್ಯನಿಗೆ ಸಮಾನರಾದ ಪ್ರಧಾನಿಗಳನ್ನು ಆಗಬೇಕೆನುತಿಹನು. ಭೂಚಕ್ರದ ಕೋಡೆಯುಹಿಡಿಸಿಕೊಳ್ಳಬೇಕೆನುತಿಹನು. ಮತ್ತಂತುಮಲ್ಲದೆ ಕನಕರಚಿತಮಾದ ಕಾವನುಳ್ಳ ಹಳದಿ, ಹಸುರು, ಕರಿದು, ಕೆಂಪು, ಬಿಳಿದಂಬರಗಳಿಂದ ಮುಸುಕಲ್ಪಟ್ಟ ತಂಪಿನ ಪೆಂಪಿನ ಜಗಜಂಪಿನ ಹೊಂಗಲಸ ರಂಗುಮಾಣಿಕ್ಯದಿಂದ ಲಂಕೃತಮಾದ ಸತ್ತಿಗೆಯು ಮೊತ್ತಂಗಳಾಗಬೇಕೆನುತಿಹನಾತ್ಮನು. ಉಭಯ ಪಾರ್ಶ್ವದೊಳು ನಿಂದು ಕಂಕಣರವಂಗಳಿಂದ ನಳಿತೋಳ್ಗಳನೆತ್ತಿ ಚೆಲ್ಲವೆರಿದು, ಮೆಲ್ಲನೆ ಬೀಸುವ ಚಾಮರಂಗಳಾಗಬೇಕೆನುತಿಹನಾತ್ಮನು. ಈ ಮದತಲೆದೋರಿಪಲ್ಲಿ ಇಷ್ಟೆಲ್ಲಾಗಬೇಕೆಂದಿಚ್ಛೈಸುತಿಹನು. ಸೂರ್ಯತತ್ವಸಂಬಂಧವಾದ ಮದಗುಣವು ಜೀವಾತ್ಮನಿಗೆ ತಲೆದೋರಿದಾಗ ಕೋಪಾಗ್ನಿಭರಿತನಾಗಿ ರೋಷವೆಂಬ ಕಿಚ್ಚಿನಲ್ಲಿ ತುಂಬಲ್ಪಟ್ಟಾತನಾಗಿ ಸಾಧಿಸಿ ತನಗಾಗದಂತ ವೈರಿಯುನ್ನುದಿನಸಾಮ್ಯದಿಂದಲು ಸಾಧಿಸಿ ಭೇದಿಸಿ ಹೋಗುವಸ್ಥಾನ, ಬರುವಸ್ಥಾನ, ಉಂಬುವಸ್ಥಾನ, ಉಡುವಸ್ಥಾನ, ಕುಂಡ್ರುವಸ್ಥಾನ, ನಿಲ್ಲುವಸ್ಥಾನ, ಮಾತುಕಥೆ ಪ್ರಸಂಗವನಾಡುವಸ್ಥಾನ, ಕೂಟನಾಟಸ್ಥಾನಂಗಳೊಳೆಲ್ಲಾ ಹುಲ್ಲುಮನೆಯುಲ್ಲಿ ಹೊಗೆಭೇದಿಸುವಹಾಗೆಯೂಚಾಪೆಯುಲ್ಲಿ ನೀರುಭೇದಿಸುವಹಾಗೆಯೂ, ಭೇದಕತ್ವದಿಂದಲೂ ಭೇದಿಸಿಕೊಂಡಿಹೆ. ಇಟ್ಟೆಡೆ ಮುಟ್ಟೆಡೆಗೆಸಿಕ್ಕಿದಲ್ಲಿ ಇರಿದು ಕೊಲಬೇಕೆನುತಿಹನು. ತಿಂದಿಹೆನೆನುತಿಹನು, ಅವನ ಹೆಣನು ಹದ್ದುಹರಿದು ಕೊಂಡು ತಿಂದಹಾಗೆ ತಿಂದಾನೇ ತಿನ್ನಲಾರನು, ತಿಂದೆನೆನುತಿಹನು, ಅವನೊಡವೆ ವಸ್ತುಗಳೆಲ್ಲವನ್ನು ತಾನಪಹರಿಸಿಕೊಂಡು ಅನುಭವಿಸಬೇಕೆನುತಿಹನು, ಮತ್ತು ಅವನ ಇರಿದು ಅರೆಹೆಣನ ಮಾಡಿಕೆಡಹಿ ಅವನ ಎದೆಯುಮೇಲೆ ಕುಳಿತುಕೊಂಡು ಕಂಚಿನತಟ್ಟೆಯುಲ್ಲಿ ಹಾಲೋಗರವನಿಡಿಕೊಂಡು ಎಲೊ ದಗಡೀ ಎನ್ನೊಡನೆ ಯುದ್ಧವಕಟ್ಟಿಕೊಂಡುದಕ್ಕೆ ಉಂಡೆಯುಲ್ಲ ಉಂಣು ಯೆಂದು ಮೊದಲಿಸಿಮೂದಲಿಸಿ ಊಟವಮಾಡಿ ಅವನರಕ್ತವ ತೆಗದು ಎನ್ನಹಣೆಗೆ ಬೊಟ್ಟಿಟ್ಟುಕೊಂಡಲ್ಲದೆ ಎನ್ನ ಛಲುಹೋಗದನುತಿಹನಾತ್ಮನು. ಚಂದ್ರತತ್ವಸಂಬಂಧವಾದ ಮದಗುಣವು ಜೀವಾತ್ಮನಿಗೆ ತಲೆದೋರಿದಾಗ ಚಿಂತಾಭರಿತನಾಗಿ ಆಲೋಚನಭಾವದಲ್ಲಿ ತುಂಬಲ್ಪಟ್ಟಾತನಾಗಿ ಆದೀತೋ ತಾನೆನದಂತ ಹೊನ್ನಿನಕಾರ್ಯ, ಹೆಣ್ಣಿನಕಾರ್ಯ, ಮಣ್ಣಿನ ಕಾರ್ಯವು ಕೈಸಾಧ್ಯವಾದೀತೋ ಆಗದೋ ಕುಹಕರಮುಖದಿಂದಲೇ ಕೆ

ಟ್ಟತೊ ಇದ್ದೀತೊ, ಏನಾದರೊಂದು ರಾಜಭಯ ಚೋರಭಯಂಗಳ್
ಬಂದೊದಗಿದಲ್ಲಿ ತಮ್ಮಲ್ಲಿಹ ಒಡವೆವಸ್ತುಗಳನ್ನು ಒಂದುಸ್ಥಳದಲ್ಲಿ
ಮರೆಯಮಾಡಿ ಹೋಗಿ ನಾವು ಮಡಗಿದವಸ್ತುವು ನಾವು ಮಡಗಿದಲ್ಲಿ
ಇದ್ದೀತೊ ಇಲ್ಲವೋ, ಪರಾರಿಯಾಗಿಯೇ ಹೋದೀತೊ ಏನೋ, ರಾ
ಭಯದಿಂದಲೇ ಹೋದೀತೋ ಯೆಂತೊ, ಚೋರಭಯದಿಂದಲೇ ಹೋ
ದೀತೋ ಎಂದು ಚಿಂತಿಸುತಿಹನು. ಸದಾಲೋಚನಭಾವದೊಡನೆ
ಡಿರುತಿಹನಾತ್ಮನು. ಆತ್ಮಮದವೆತ್ತಿದಲ್ಲಿ ಮೂಲಾತ್ಮತತ್ವಸಂಬಂಧ
ದ ಮದಗುಣವು ಜೀವಾತ್ಮನಿಗೆ ತಲೆದೋರಿದಾಗ ಅಹಂಕಾರಭರಿತನಾ
ನಾನೇನಾನೆಂಬ ಮೂಲಹಂಕಾರಭಾವದಲ್ಲಿ ತುಂಬಲ್ಪಟ್ಟಾತನಾಗಿ
ಗಿಂದಬಲ್ಲಿದರಿಲ್ಲ, ವಿದ್ಯದಲ್ಲಿಯೂ, ಬುದ್ಧಿಯಲ್ಲಿಯೂ, ಕುಲದಲ್ಲಿಯೂ
ಲದಲ್ಲಿಯೂ, ರೂಪಿನಲ್ಲಿಯೂ, ಯೌವನದಲ್ಲಿಯೂ, ಪಂಥದಲ್ಲಿಯೂ
ರಾಕ್ರಮದಲ್ಲಿಯೂ ನಾನೇ ಶ್ರೇಷ್ಠನಲ್ಲದೆ ನನಗಿಂತಲೂ ಶ್ರೇಷ್ಠರಾ
ವರೊಬ್ಬರಿಲ್ಲ. ಎನಗಿನ್ನು ಆರೋರ್ವರೂ ಇದಿರಿಲ್ಲ. ಮಲತು
ರಾಂತು ನಿಲ್ಲುವರಿಲ್ಲ ಯೆನುತಿಹನೆಂಬಲ್ಲಿ ಈಭೂಮಿಯೊಂದುವೇಳೆ ಎನ್ನ
ಮೇಲೆ ಮೀರೆದಪ್ಪಿಮುನಿದರೆ ಉಂಗುಷ್ಠದೆರಡು ಹೆಬ್ಬೆಟ್ಟಿನ ತುದಿ
ಒತ್ತಿನಿಲ್ಲಿಸುವೆನು. ಆಕಾಶಬಂದುವೇಳೆ ಎನ್ನಮೇಲೆ ಮೀರೆದಪ್ಪಿ
ನಿದರೆ ಹಿಡಿದಿರ್ದ ಖಡ್ಗದಮೊನೆಯಿಂದ ಆಂತುನಿಲ್ಲಿಸುವೆನು. ಅಷ್ಟದಿಕ್ಕು
ಗಳೊಂದುವೇಳೆ ಎನ್ನಮೇಲೆ ಮೀರೆದಪ್ಪಿಮುನಿದರೆ ಈ ಎರಡುಭುಜ
ಳೆಂಬ ಲೋಡುಗಳಿಂದ ಹೊಡೆದುನಿಲ್ಲಿಸುವೆನು. ಇಷ್ಟಾದಬಳಿಕ
ಮುಗಿಲಕೆಳಗೆ ತೋಳಬೀಸಿಕೊಂಡು ತಿರಿಗಾಡುವಂತಾ ಪಟುಭಟರುಗಳ
ಎನ್ನೊಡನೆ ಮಲತುಮಾರಾಂತು ಯುದ್ಧವಂ ಮಾಡಿ ಜೈಸಿಹೋಗಲ
ರು ಎನುತ್ತ ಅಹಂಭಾವದಿಂದ ನಾನು ನಾನೆಂಬಗರ್ವಭಾವದಿಂದ ಅಹಂ
ಕರಿಸುತಿಹನಾತ್ಮನು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾ
ತನ್ನಂಗಸಂಬಂಧವಾದಂತು ಭೂತಂಗಳನೇ ಆದಿಯಮಾಡಿಕೊಂ
ತೋರುವೆಂಟುಪ್ರಕಾರವಾದ ಮದಗುಣಂಗಳ ಹಸಿಗೆಯ ವಿಚಾರವನ್ನು
ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೧೪ಕ್ಕೆ ಮಂಗಳಮಹಾ.

———:(***):———

## ಸಪ್ತಧಾತುಗಳುತ್ಪತ್ತಿಯು.

ಇನ್ನು ತದನಂತರದಲ್ಲಿ ಸಪ್ತಧಾತುಗಳ ಜನನವು ಆತ್ಮಂಗೆ ಸಂಬಂಧವಾದ ದೇಹದಲ್ಲಿ ಏಳುಪ್ರಕಾರವಾದ ಧಾತುಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪವಮಂ ಹೇಳುತಿಹರು. ಅವು ಆವಾವೆಂದೊಡೆ—ಸಪ್ತಧಾತುಗಳು ಅವರ ಜನನ ವರ್ಣಕಾಯಕಾಂತಿಗಳೂ, ಅಂಶಿಕದ ಸಾಂಪ್ರದಾಯುವಾದ ತತ್ವಂಗಳ ಭೇದವಿಚಾರವೂ ಎಂತೆಂದೊಡೆ—ಹ್ಯಾಗಿರುವದೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಆ ವಿಚಾರವನ್ನು ಮುಂದೆ ಗ್ರಂಥೋಕ್ತವಾಗಿ ನಿರೂಪಿಸುತಿಹರು. ರಸಃ=ರಸವೆಂಬ ಧಾತು, ರುಧಿರಃ=ರಕ್ತವೆಂಬಧಾತು, ಮಾಂಸಃ=ಪಲಲವೆಂಬಧಾತು, ಮೇದಸ್ಸು=ಸೂಕ್ಷ್ಮಚರ್ಮವೆಂಬಧಾತು, ಮಜ್ಜೆ=ಕೊಬ್ಬುಕಂಡವೆಂಬಧಾತು, ಅಸ್ಥಿ=ಶಲ್ಯವೆಂಬಧಾತು, ರೇತಃ=ವೀರ್ಯವೆಂಬಧಾತು, ಈ ಏಳುಪ್ರಕಾರವಾದ ಧಾತುಗಳು ಸಕಲಪ್ರಾಣಿಗಳ ಶರೀರದಲ್ಲಿಯೂ ಹೆಚ್ಚು ಕಡಮೆಯಿಲ್ಲದೆ ಒಂದೇಸವುವಾಗಿ ನೆಲೆಗೊಂಡಿಪ್ಪವು. ಇದಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು. ರಸಃ=ಸರ್ವಾಂಗದಲ್ಲಿಒಂದಾನೊಂದು ಕನ್ನೆಹುವ್ವಿನ ಮರ್ಯಾದೆಯಲ್ಲಿ ಬಲಿದಿರುವಂತಾದ್ದೇ ರಸವೆಂಬಧಾತು, ರುಧಿರಃ=ಆ ರಸವೆಂಬ ಧಾತುವನ್ನು ಮರೆಗೊಂಡಿರುವ ರಕ್ತವೆಂಬಧಾತು, ಮಾಂಸ=ಆ ರಕ್ತವೆಂಬ ಧಾತುವನ್ನು ಮರೆಗೊಂಡಿರುವಂತಾ ಪಲಲವೆಂಬಧಾತು, ಮೇದಸ್ಸು=ಆ ಪಲಲವೆಂಬ ಧಾತುವಂ ಮರೆಗೊಂಡಿರುವಂತಾ ಸೂಕ್ಷ್ಮಚರ್ಮವೆಂಬಧಾತು, ಅಸ್ಥಿ=ಆ ಸೂಕ್ಷ್ಮಚರ್ಮವೆಂಬ ಧಾತುವನ್ನು ಮರೆಗೊಂಡಿರುವಂತಾ ಶಲ್ಯವೆಂಬಧಾತು, ಮಜ್ಜೆ=ಆ ಶಲ್ಯವೆಂಬಧಾತುವನ್ನು ಮರೆಗೊಂಡಿರುವಂತಾ ಕೊಬ್ಬುಕಂಡವೆಂಬಧಾತು, ಶುಕ್ಲ=ಆ ಕೊಬ್ಬುಕಂಡವೆಂಬ ಧಾತುವನ್ನು ಮರೆಗೊಂಡಿರುವಂತಾ ವೀರ್ಯವೆಂಬಧಾತು, ಇವುತಾವೇ ಸಪ್ತಧಾತುಗಳು. ಈ ಏಳುಪ್ರಕಾರವಾದ ಧಾತುಗಳಿಗೆ ವಿವರ ವಿಚಾರವಾಗಿ ನಿರೂಪಿಸುತಿಹರು. ಉಂಡಂತಾತ್ಮನು ಪ್ರಥಮದಿವಸದಲ್ಲಿ ಅನುಭವಿಸಿದಂತನ್ನವು ಏಳನೇ ದಿವಸಕ್ಕೆ ರಸವಹುದು. ಒಂದಾನೊಂದು ಕನ್ನೆಹುವ್ವಿನ ಮರ್ಯಾದೆಯಲ್ಲಿ ಶುದ್ಧರಸಾಕಾರವಾಗಿ ಬಲಿಯುತ್ತಿಹುದು. ಆತ್ಮನು ಪ್ರಥಮ ದಿವಸದಲ್ಲಿ ಅನುಭವಿಸಿದಂತನ್ನವೆಂಬುದು ತಾನಾವುದೈಯ್ಯಾ ಎಂದೊಡೆ, ತಾಯಿ ಕುಕ್ಷಿಯೊಳಗಿಪ್ಪ ಶಿಶುವಿನ ದೇಹಕ್ಕೆಂಟನೇ ತಿಂಗಳಿಗೆ ಪ್ರಾಣ ಚೈತನ್ಯವುಬಂದು ತಾಯಿ ತೆಗೆ

ದುಕೊಂಡಂತನ್ನ ರಸವನ್ನು ನಾಭಿಸೂತ್ರದಿಂದ ಸೇವಿಸುತಿಹುದು. ಆ
ದು ಪ್ರಥಮದಿವಸದಲ್ಲಿ ಅನುಭವಿಸಿದಂತನ್ನವು ಆತ್ಮರುಗಳಿಗೇನಾದ
ರೋಗ ರುಜಿಗಳೆಳಸಿ ಸಪ್ತಧಾತುಗಳೆಲ್ಲವೂ ಸಣ್ಣಿಸಿ, ಗಿಟಿಗಿಟಜಂತ್ರ
ವಾಗಿದ್ದಲ್ಲಿ ಆ ರೋಗವು ಶಿವಾಧೀನದಿಂದಲಾದರೂ, ಪಂಡಿತರಮುಖ
ದಲಾದರೂ ನಿವಾರಣವಾಗಿ ಹೋದಲ್ಲಿ ಅವರಾಪ್ತಬಂಧುಗಳು ಆರೋ
ಗ್ಯಸ್ನಾನನಂಮಾಡಿಸಿ ಘೃತಮುಖ್ಯವಾದ ಮೃಷ್ಟಾನ್ನಪಾನಂಗಳಂ ಮಾ
ಡಿಸಿ ನೀಡುವರು. ನೀಡಿದಲ್ಲಿ ಅವನಿಷ್ಟುದಿವಸಕ್ಕೆ ಈಹೊತ್ತು ಈ
ನ್ನ ಊಟವನಾಡುತಿದ್ದೇನೆಂದುಹೇಳಿ ಊಟವ ಮಾಡುವನು. ಅದು
ಪ್ರಥಮ ದಿವಸದಲ್ಲಿ ತೆಗದುಕೊಂಡಂತನ್ನವು ತಾನುದರಾಗ್ನಿಯಿಂದ ಪ
ಚನವಾಗಿ ಕಿಟ್ಟವೆಂದು ರಸವೆಂದೆರಡುತೆರನಪ್ಪುದು. ಆ ಕಿಟ್ಟವೇ ಗ
ದೆ ಗುಹ್ಯಂಗಳಲ್ಲಿ ಮಲಮೂತ್ರ ರೂಪಿನಿಂದ ಬಿದ್ದುಹೋಗುವುದು. ಆ
ರಸವೇ ಸಮಾನವಾಯುವಿನ ವ್ಯವಹಾರದಿಂದ ಸರ್ವಾಂಗಕ್ಕೆ ವೇದಿಸಿ
ಲ್ಲಲ್ಲಿ ಮಂದಾಗ್ನಿಯಿಂದ ಪಚನವಾಗಿ ಕಿಟ್ಟವೆಂದು ರಸವೆಂದೆರಡುತೆರ
ಪ್ಪುದು. ಆ ಕಿಟ್ಟವೇ ದ್ವಾದಶಸ್ಥಾನಂಗಳಲ್ಲಿ ದ್ವಾದಶ ಮಲರೂಪಿ
ದ ಬಿದ್ದುಹೋಗುವುದು. ಆ ಉಳಿದ ರಸವೇ ಮರಳಿ ಪಚನವಾಗಿ ಸ್ಥೂ
ಲರಸವೆಂದು ಸೂಕ್ಷ್ಮರಸವೆಂದೆರಡು ತೆರನಪ್ಪುದು. ಆ ಸ್ಥೂಲರಸ
ಕರಣೇಂದ್ರಿಯಗಳಂ ಪೋಷಿಸುವುದು. ಆ ಸೂಕ್ಷ್ಮರಸವೇಳುದಿವಸಕ್ಕೆ
ರಸವಹುದು, ಒಂದಾನೊಂದು ಕನ್ನೆಹುವ್ವಿನ ಮರ್‍ಯಾದೆಯಲ್ಲಿ ಶುದ್ಧ
ಸಾಕಾರವಾಗಿ ಬಲಿಯುತ್ತಿಹುದು. ಆರಸ-ಆ ರಸವೆಂಬಧಾತು ಮತ್ತೆ
ಳುದಿವಸಕೂಡಲು ಎರಡೇಳುಗಳು ಹದಿನಾಲ್ಕು ದಿವಸವಾಗುವುದು. ಆ
ಹದಿನಾಲ್ಕುದಿವಸ ಪರ್‍ಯಂತರವೂ ಬಲಿದು ರುಧಿರವಾಗುವುದು, ರಕ್ತವೆಂ
ಬ ಧಾತಾಗುತ್ತಿಹುದು. ಆ ರಕ್ತವೆಂಬಧಾತು ಮತ್ತೇಳುದಿವಸ ಕೂಡ
ಲು ಮೂರೇಳುಗಳು ಇಪ್ಪತ್ತೊಂದು ದಿವಸವಾಗುವುದು. ಆ ಇಪ್ಪ
ತ್ತೊಂದುದಿವಸ ಪರ್‍ಯಂತರವೂ ಬಲಿದು ಮಾಂಸವಾಗುವುದು, ಪಲವೆಂ
ಬಧಾತಾಗುವುದು. ಆ ಮಾಂಸವೆಂಬಧಾತು ಮತ್ತೇಳುದಿವಸ ಕೂಡಲು
ನಾಲ್ಕೇಳುಗಳು ಇಪ್ಪತ್ತೆಂಟು ದಿವಸವಾಗುವುದು. ಆ ಇಪ್ಪತ್ತೆಂಟು
ದಿವಸಪರ್‍ಯಂತರವೂಬಲಿದು ಮೇದಸ್ಸಹುದು, ಸೂಕ್ಷ್ಮಚರ್ಮವೆಂಬ ಧಾ
ತುವಾಗುತಿಹುದು. ಆ ಮೇದಸ್ಸು ಆ ಸೂಕ್ಷ್ಮಚರ್ಮವೆಂಬಧಾತು ಮ
ತ್ತೇಳುದಿವಸಕೂಡಲು ಐದೇಳುಗಳು ಮುವತ್ತೈದು ದಿವಸವಾಗುವುದು

ಆ ಮುವತ್ತೈದುದಿವಸ ಪರ್ಯಂತರದಲ್ಲಿಯೂ ಒಲಿದು ಅಸ್ಥಿಯಹುದು. ಶಲ್ಯವೆಂಬ ಧಾತುವಾಗುತ್ತಿಹುದು. ಅಸ್ಥಿ-ಶಲ್ಯವೆಂಬಧಾತು ಮತ್ತೇಳುದಿವಸಕೂಡಲಾಗಿ ಆರೇಳುಗಳು ನಾಲ್ವತ್ತೆರಡು ದಿವಸವಾಗುವುದು. ಆ ನಾಲ್ವತ್ತೆರಡುದಿವಸ ಪರ್ಯಂತರವೂ ಒಲಿದು ಮಜ್ಜೆಯಹುದು. ಕೊಬ್ಬುಕಂಡವೆಂಬಧಾತುವಾಗುತಿಹುದು. ಆ ಮಜ್ಜೆ-ಆ ಕೊಬ್ಬುಕಂಡವೆಂಬಧಾತು ಮತ್ತೇಳುದಿವಸಕೂಡಲು ಏಳೇಳುಗಳು ನಲ್ವತ್ತೊಂಭತ್ತು ದಿವಸವಾಗುವುದು. ಒಂದುದಿವಸ ಹೆಚ್ಚುಕಡಮೆ ಹೇಳಲಿಲ್ಲ. ಅಂತೊಂದು ಮಂಡಲವಾಗುವುದು. ಆ ಮಂಡಲಪರ್ಯಂತವೂ ಒಲಿದು ಶುಕ್ಲವಾಗುವುದು. ವೀರ್ಯವೆಂಬಧಾತು ಆಗುತಿಹುದು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಈ ಸಪ್ತಧಾತುಗಳ ಅಂಗಚೇಷ್ಟ ಗುಣಂಗಳೆಂತೆಂದೊಡೆ, ಹ್ಯಾಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ—ರಸವೆಂಬ ಧಾತುವಿಗೆ ಕಪಿಲವರ್ನದಧಾತು, ಕಪಿಲಾಕಳಕಾಂತಿಯುಂಟಾಗಿರುತಿಹುದು. ಪೃಥ್ವ್ಯಂಶಿಕ-ಅದು ಧರಣೀತತ್ವ ಸಂಪ್ರದಾಯದಿಂದ ವರ್ಧನವಾದಕಾರಣ ಪೃಥ್ವ್ಯಂಶಿಕವೆಂದು ತಿಳಿದುಕೊಂಬುವುದು. ಶರೀರವನಲುಕಿಸುತಿಹುದು. ಆಧಾತೋತ್ಕೃಷ್ಟವಾದಲ್ಲಿ ಅಳುಕುಭ್ರಮೆಯೆಂದು ಭೀತಿಯಹುಟ್ಟಿಸುತಿಹುದು. ಮತ್ತಂತುಮಲ್ಲದೆ ಇದ್ದಕಿದ್ದಹಾಂಗೆ ತಗ್ಗಿಕುಗ್ಗಿದಿಸುತಿಹುದು ರಕ್ತವೆಂಬ ಧಾತುವಿಂಗಾಯಿತ್ತಾದೊಡೆ ನೀಲವರ್ನದ ಧಾತು, ಪುರುಷರುಗಳು ಕರ್ನ-ಕಿಟ್ಟುಕೊಳ್ಳುವಂತಾ ನೀಲದರಳಿನ ಕಾಂತಿಯಿಂದುಂಟಾಗಿರುತಿಹುದು. ಅದು ಅಪ್ಪುತತ್ವ ಸಂಪ್ರದಾಯದಿಂದ ವರ್ಧನವಾದಕಾರಣ ಅಪ್ಪುವಿನಂಶಿಕವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಶರೀರವನ್ನು ನಡನಡುಗಿಸುತಿಹುದು ಧಾತೋತ್ಕೃಷ್ಟವಾದಲ್ಲಿ ಮಾಗಿಯದಿವಸ ಮಲಗಿದ್ದವರಹಾಗೆಯೂ, ತಣ್ಣೀರ ಮುಳುಗಿಬಂದವರಹಾಗೆಯೂ, ಚಳಿ ಜ್ವರ ಬಂದವರಹಾಗೆಯೂ, ಮಳೆಯಲ್ಲಿ ತೊಯ್ದುಬಂದವರಹಾಗೆಯೂ ಕಂಪನವನುಂಟುಮಾಡುತಿಹುದು. ಪಲಲವೆಂಬ ಧಾತುವಿಗೆ ರಕ್ತವರ್ನದಧಾತು, ಶೋಣವರ್ನದ ಕಾಂತಿಯುಂಟಾಗಿರುತಿಹುದು, ಅದು ತೇಜಸ್ತತ್ವ ಸಂಪ್ರದಾಯದಿಂದ ವರ್ಧನವಾದಕಾರಣ ಅಗ್ನ್ಯಂಶಿಕವೆಂದು ತಿಳಿದುಕೊಂಬುವುದು, ದೇಹವನ್ನು ಕಳವಳಿಸುತಿಹುದು, ಹಲವಂಬಲಿಕೆಯನುಂಟುಮಾಡಿಸುತಿಹುದು. ಮತ್ತಂತುಮಲ್ಲದೆ ಜಾಗ್ರದೊಳಗಣ ಸ್ವಪ್ನಾವಸ್ಥೆಯನ್ನುಂಟುಮಾಡಿಸುತಿಹುದು. ಪೇ

ಡಸ್ಸಿಗೆ ಸೂಕ್ಷ್ಮಚರ್ಮವೆಂಬ ಧಾತುವಿಂಗೆ ಮೊಂಜಿಷ್ಟವರ್ನದಧಾತ್ತು ಮೊಂಡಳಿರಿನ ಕಾಂತಿಯುಂಟಾಗಿರುತಿಹುದು. ಅದು ವಾಯುತತ್ವ ಸಂ ಪ್ರದಾಯದಿಂದ ವರ್ಧನವಾದಕಾರಣ ವಾಯುವಿನಂಶಿಕವೆಂದು ತಿಳಿದು ಕೊಂಬುವುದು, ದೇಹವನ್ನು ಬೆದರಿಸುತಿಹುದು, ಎಂತಪ್ಪ ದಿಟ್ಟಪುರು ಷಂಗಾದರೂ ಆಧಾತ್ವೋತ್ಕೃಷ್ಟವಾದಲ್ಲಿ ದಿವಾಕಾಲ ನಿಶಾಕಾಲಂಗಳ ಲ್ಲಿ ಭೂತ ಭೇತಾಳ ಬ್ರಹ್ಮರಾಕ್ಷಸರ ಕಂಡೋಪಾದಿಯಲ್ಲಿ ಭಯವ ಹು ಟ್ಟಿಸುತಿಹುದು. ಶಲ್ಯವೆಂಬ ಧಾತುವಿಗೆ ಕೃಷ್ಣವರ್ಣದ ಧಾತು, ಕಾಂ ತೆಯುರು ಕಣ್ಣಿಗೆ ಹಚ್ಚಿಕೊಂಬ ಕಾಡಿಗೆಯವರ್ನದ ಕಾಂತಿಯುಂಟಾಗಿ ರುತಿಹುದು. ಅದು ಅಂಬರತತ್ವ ಸಂಪ್ರದಾಯದಿಂದ ವರ್ಧನವಾದಕಾರ ಣ ಆಕಾಶದಂಶಿಕವೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು. ಎ ತ್ತರತತ್ತರವಂ ಮಾಡಿಸಿ ಆಧಾತೋತ್ಕೃಷ್ಟವಾದಲ್ಲಿ ತಲೆಯಕಡೆಗೆ ಕಾಲು, ಕಾಲುಕಡೆಗೆ ತಲೆಮಾಡಿಸಿ ಮರುಳಾಗಿ ನುಡಿಸುತಿಹುದು. ಹೀ ಗ್ಯಾಕೆ ಮಲಗಿಕೊಂಡಿದ್ದೀಯೋ, ನೇರಿತ್ತಾಗಿ ಮಲಗಿಕೊಳ್ಳಬಾರದೆ ಎಂ ದಾರಾದರೂ ತಟ್ಟಿ ಎಬ್ಬಿಸಿದಲ್ಲಿ ನನ್ನ ಹಾಸಿಗೆಯಮೇಲೆ ನಾಮಲಗಿ ದ್ದೇನೆ, ನಿನ್ನ ಹಾಸಿಗೆಯಮೇಲೆ ನೀಮಲಗಿದ್ದೀಯೋ, ನನ್ನಗೊಡವೆ ನಿನಗ್ಯಾಕೆಂದು ಒಂದಾನೊಂದು ಹುಚ್ಚುಹಿಡಿದವನೋಪಾದಿಯಲ್ಲಿ ಹು ಚ್ಚುಪ್ರಸಂಗವನ್ನಾಡಿಸುತ್ತಿಹುದು. ಮಜ್ಜಿಗೆ-ಕೊಬ್ಬುಗಂಡವೆಂಬ ಧಾ ತುವಿಗಾಯಿತಾತ್ತದೊಡೆ ತಾಂಬ್ರವರ್ನದಧಾತು ಬೆಳಗಿದ ತಾಂಬ್ರದಕಾಂತಿ ಯುಂಟಾಗಿರುತಿಹುದು. ಅದು ಸೂರ್ಯತತ್ವಸಂಪ್ರದಾಯದಿಂದ ವರ್ಧ ನವಾದಕಾರಣ ಸೂರ್ಯನಂಶಿಕವೆಂದೇ ತಿಳಿಯುವದು. ದೇಹವನ್ನು ವ ತ್ತರಿಸಿ ಆಧಾತೋತ್ಕೃಷ್ಟವಾದಲ್ಲಿ ಎದೆಯಮೇಲೊಂದಾನೊಂದು ತೊ ಲೆಯೇರಿದಹಾಂಗೆಯೂ, ಬೀಸುವಕಲ್ಲ ಪರಿದಹಾಂಗೆಯೂ, ಮೂಡೆಯೇ ರಿದಹಾಂಗೆಯೂ, ಗುಂಡುಯೇರಿದಹಾಂಗೆಯೂ, ಭೂತಪ್ರೇತ ಬ್ರಹ್ಮ ರಾಕ್ಷಸರು ಮೇಲೆಕುಳಿತಹಾಂಗೆಯೂ, ಭಾರವಾದ ಹೊರೆಯನ್ನುಂಟು ಮಾಡಿ ಕಳವಳಿಸಿ ಸ್ವಪ್ನದೊಳಗಣ ಹಲವಂಬಲಿಕೆಯನ್ನುಂಟುಮಾಡಿಸಿ ನುಡಿಸುತಿಹುದು. ಹಾಂಗ್ಯಾಕೋ ಹಲವಂಬಲಿಸುತ್ತಲಿದ್ದೀಯ, ಸು ಮ್ಮನೆ ಮಲಗಬಾರದೆಂದು ಆರಾದರೂ ತಟ್ಟಿ ಯೆಬ್ಬಿಸಿದಲ್ಲಿ ಮರನಹತ್ತಿ ಬೀಳುತ್ತಿದ್ದೆ, ಗಿರಿಯಹತ್ತಿ ಬೀಳುತ್ತಿದ್ದೆ, ತುಂಬಿದ ಹೊಳೆಯೊಳಗೆ ತೇ ಲಿಹೋಗುತ್ತಿದ್ದೆ, ಮನೆ ಕಿಚ್ಚುಹತ್ತಿ ಬೇಹುತ್ತಿತ್ತು, ಹುಲಿಮೆಟ್ಟಿ ಮು

ರಿವುತ್ತಿತ್ತು, ಕಳ್ಳರು ಸುಲಿವುತ್ತಿದ್ದರು, ಕಾಳರಕ್ಕಸಿಬಂಡೆಯಮೇಲೆ ಕುಳಿತುಕೊಂಡು ಹೊಟ್ಟೆಯ ಬಗೆವುತ್ತಿತ್ತು ಎಂಬ ಪ್ರಸಂಗವನ್ನಾಡಿಸುತಿಹುದು. ವೀರ್ಯವೆಂಬ ಧಾತುವಿಗೆ ಸ್ವೇತವರ್ನಧಾತು ಧವಳವರ್ನದ ಕಾಂತಿಯುಂಟಾಗಿರುತಿಹುದು. ಅದು ಚಂದ್ರತತ್ವ ಸಂಪ್ರದಾಯದಿಂದ ವರ್ಧನವಾದಕಾರಣ ಚಂದ್ರನಂಶಿಕವೆಂದು ತಿಳಿವುದು. ದೇಹವನ್ನು ಕಂಪಿಸಿ ಎಂತಪ್ಪ ಜಿತೇಂದ್ರಿಯ ಪುರುಷನಿಗಾಯಿತ್ತಾದರೂ ಆ ಧಾತೋತ್ಕೃಷ್ಟವಾದಲ್ಲಿ ಸ್ತ್ರೀಪ್ರಪಂಚಿನಮೇಲಣಿಚ್ಛೆಯನ್ನುಂಟುಮಾಡಿಸಿ ಕಳವಳಿಸಿ ಸ್ತ್ರೀಯರವಯವಂಗಳಮೇಲಣ ಭ್ರಾಂತಿಯೊಡನೆ ಕೂಡಿನುಡಿಸುತಿಹುದು. ಮಾತುಮಾತಿಗೂ ಕಾಮಕಲಾಪ್ರೌಢಿಯರ ಪ್ರಸಂಗವನ್ನಾಡಿಸುತಿಹುದು. ಈ ಪ್ರಕಾರದಿಂದ ಪೇಳಲ್ಪಟ್ಟಂತಾ ಇವು ತಾವೇ ಏಳುಪ್ರಕಾರವಾದ ಧಾತುಗುಣಂಗಳ ಹಸಿಗೆಯವಿಚಾರವನ್ನು ತಿಳಿದುಕೊಂಬುವದು ತತ್ವಜ್ಞಾನಿಗಳು.

ಅಂತು ಕಟ್ಟು ೯ಕ್ಕೆ ಮಂಗಳಮಹಾ.

---

## ಸಪ್ತವ್ಯಸನಗಳು.

ತದನಂತರದಲ್ಲಿ ಸಪ್ತವ್ಯಸನಂಗಳು ಶರೀರಸಂಬಂಧಿಗಳಾದಾತ್ಮರುಗಳಲ್ಲಿ ಏಳುಪ್ರಕಾರವಾದ ವ್ಯಸನಗುಣಂಗಳಿಂದುಂಟಾಗಿರುತಿಹವು. ಅವರ ಸ್ವಸ್ವರೂಪಮಂ ಪೇಳುತಿಹರು. ಆವಾವೆಂದೊಡೆ—ತನುವ್ಯಸನ, ಮನೋವ್ಯಸನ, ಧನವ್ಯಸನ, ರಾಜ್ಯವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ, ವಿಶ್ವವ್ಯಸನ, ಇವುತಾವೇ ಸಪ್ತವ್ಯಸನಗಳು. ಇವಕ್ಕೆ ವಿವರ—ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ತನುವ್ಯಸನವೆತ್ತಿದಲ್ಲಿ ದೇಹಸಂಬಂಧವಾದ ವ್ಯಸನಗುಣವು ಜೀವಾತ್ಮನಿಗೆ ಇದ್ದಕಿದ್ದಹಾಗೆ ಎತ್ತಾನಕೊಂಡುವೇಳೆ ತಲೆದೋರುವದು. ಆ ತಲೆದೋರಿದಾಗ ಶರೀರವು ಬಡವಾಯಿತೆನುತಿಹನು, ಇದ್ದಕಿದ್ದಹಾಂಗೆ ತನ್ನದೆಬದಿ ತೋಳುತೊಡೆಗಳನ್ನು ನೋಡಿಕೊಂಡು ಒಳ್ಳೇಕನ್ನಡಿಯನುಣುಪಿಂಗೆ ತನಿನಿಂಬೆಹಣ್ಣಿಗೆ ಸಮಾನವಾದ ದೇಹವೆಲ್ಲಾ ಕಂದಿಕಾರೊಡಲಾಯಿತಲ್ಲ, ಇದನ್ನು ವೃಷ್ಯಾನ್ನಪಾನ ವ್ಯಾಯೋಣ, ಮೆಟ್ಟಡಿಗಳಿಂದ ಸುರಕ್ಷಿತವಮಾಡಿಕೊಳ್ಳಬೇಕೆನುತಿಹನು. ಮನೋವ್ಯಸನವೆತ್ತಿದಲ್ಲಿ ಮನೋಸಂಬಂಧವಾದ ವ್ಯಸನಗುಣವು ಜೀವಾತ್ಮನಿಗೆ ಇದ್ದಕಿದ್ದಹಾಂಗೆ ತಲೆದೋ

ರುವದು. ಆ ತಲೆದೋರಿದಾಗೊಬ್ಬರಮೇಲಿಲ್ಲದಂತ ನೃತವನ್ನು ನೆಗಳ ಬೇಕೆನುತಿಹನು. ಕಳವು ಸುವರ್ಣ ಆಸ್ತಿಯೆಂದೊಬ್ಬರೊಡವೆಯನ್ನು ತಸ್ಕರವೃತ್ತಿಯಿಂದಪಹರಿಸಿ ತೆಗದುಕೊಳ್ಳಬೇಕೆನುತಿಹನು. ಪರಸ್ತ್ರೀಯರ ಸಂಸರ್ಗವ ಮಾಡಬೇಕೆಂದಿಚ್ಛೈಸುತಿಹನಾತ್ಮನು. ಧನವ್ಯಸನವೆತ್ತಿದಲ್ಲಿ ದ್ರವ್ಯಸಂಬಂಧವಾದ ವ್ಯಸನಗುಣವು ಜೀವಾತ್ಮನಿಗೆ ಯಿದ್ದ ಕಿದ್ದಹಾಂಗೆ ಯೆತ್ತಾನಕೊಂಡುವೇಳೆ ತಲೆದೋರುವದು. ಆ ತಲೆದೋರಿದಾಗ ಅರ್ಥವುಂಬುಯುಸುತಿಹನು. ಕಾಣಿಗೆಕಾಣಿ, ವೀಸಕ್ಕೆವೀಸ, ಹಾಗಕ್ಕೆಹಾಗ, ಚಕ್ರಕ್ಕೆಚಕ್ರ, ಹಣವಿಗೆಹಣ, ಹೊನ್ನಿಗೆಹೊನ್ನು, ವರಹಕ್ಕೆವರಹಗಳನ್ನು ಕೂಡಲಿಟ್ಟು ಲಕ್ಷಸಂಖ್ಯೆದ್ರವ್ಯಗಳನ್ನು ಗಳಿಸಿಕೊಳ್ಳಬೇಕೆನುತಿಹನಾತ್ಮನು. ರಾಜ್ಯವ್ಯಸನ-ರಾಜಗುಣಸಂಬಂಧವಾದ ವ್ಯಸಣಗುಣವು ಜೀವಾತ್ಮನಿಗಿದ್ದಕಿದ್ದಹಾಂಗೆ ಎತ್ತಾನಕೊಂಡುವೇಳೆ ತಲೆದೋರುವದು. ಆ ತಲೆದೋರಿದಾಗ ವಾಹನ ಕರಿತುರಗಾಂದೋಳರಥಾರೂಢನಾಗಬೇಕೆನುತಿಹನು. ವಸ್ತ್ರ-ಪಟ್ಟೆಪಟ್ಟಾವಳಿ, ಚೀನಿಚೀನಾಂಬರ, ಸಣ್ಣಬಣ್ಣ, ಹಳದಿ, ಹಸುರು, ಕೆಂಪು, ಕರಿದು, ಬಿಳಿದು ಮುಂತಾದ ದಿವ್ಯದುಕೂಲಂಗಳನ್ನು ಸರ್ವಾಂಗಕ್ಕಾಚ್ಛಾದಿಸಿಕೊಳ್ಳಬೇಕೆನುತಿಹನು. ಉಂಗುರ, ಉಡುದಾರ, ಗಂಟೆ, ಚವುಕಳಿ, ಕಡುಕು, ಕಂಠಮಾಲೆ, ಹಾರ, ಹೀರಾವಳಿ, ಉತ್ತರಿಕೆಮುಸರ, ಬಿಲ್ಲೀಸರ, ಮೊದಲಾದ ದಿವ್ಯಭೂಷಣಂಗಳನ್ನು ತತ್ತತ್ ಸ್ಥಾನಂಗಳಲ್ಲಿ ಅಲಂಕರಿಸಿಕೊಳ್ಳಬೇಕೆನುತಿಹನು. ಅನುಲೇಪನ-ಗಂಧಕಸ್ತೂರಿ, ಪುನುಗು, ಜವ್ವಾಜಿ, ಕಪ್ಪುರಣ್ಣೆ, ಶಿಲಾರಸ ಮೊದಲಾದ ಪರಿಮಳದ್ರವ್ಯಗಳನ್ನು ಸರ್ವಾಂಗಕ್ಕೆ ತಿಗುರನೆರಿಸಿಕೊಳ್ಳಬೇಕೆನುತಿಹನು. ಕಳಿಅಡಿಕೆ, ಬಿಳಿಯೆಲೆ, ಕೆನೆಸುಣ್ಣ, ಕೈರವದ ಗುಳಿಗೆಗಳಿಂದ ದಿನಕ್ಕೆಂಟುವೇಳೆ ವೀಳ್ಯವನೀಡಿಕೊಳ್ಳಬೇಕೆಂದಿಚ್ಛೈಸುತಿಹನಾತ್ಮನು. ವಿಶ್ವವ್ಯಸನವೆತ್ತಿದಲ್ಲಿ ಸಂಸಾರ ಸಂಬಂಧವಾದ ವ್ಯಸನಗುಣವು ಜೀವಾತ್ಮನಿಗೆ ಇದ್ದಕಿದ್ದಹಾಗೆ ಎತ್ತಾನಕೊಂಡುವೇಳೆ ತಲೆದೋರುವುದು. ಆ ತಲೆದೋರಿದಾಗ ಗೃಹ, ವಳ್ಳಿತಾದ ನವರಂಗ ತೊಟ್ಟಿ, ಸುಳಿಹಿನಮೊಳಿಗೆ ಮದೆಸಶಾಲೆಗಳಾಗಬೇಕೆನುತಿಹನು. ಕ್ಷೇತ್ರ-ಆ ಗೃಹಕ್ಕೆ ಹಿಂದೆ ಹಿತ್ತಲು, ಮುಂದೆ ಗೃಹದಂಗಳ ವಿಶಾಲವಾಗಬೇಕೆನುತಿಹನು. ಆ ಗೃಹದ ರಾತೀಪು ನಡೆಸುವುದಕ್ಕೆ ಹೊಲ, ಗದ್ದೆ ಪುರ, ಗ್ರಾಮ, ನಳನಳಿಪ ನಾನಾಬೆಳೆಗಳಿಂದೊಪ್ಪುವ ಇಷ್ಟೆಲ್ಲಾಗಬೇ

ಕೆನುತಿಹನು, ಪರದಾರವಂ ಬಯಸುತಿಹನು, ಸೀಮೆಗೆ ಸಂಪಾದಿಸು ತ್ತಿಹನು, ಭೂಮಿ ಯೆಲೆಕಟ್ಟಿಗೆ ಸದಾ ಹೋರುತ್ತಿಹನು, ವಾಣಿಜ್ಯಗಾ ಮಿತ್ತಾದೊಡೆ, ತನ್ನಂಗಡಿಯೆಲೆಕಟ್ಟಿಗೆ, ಒಕ್ಕಲವಳಿಯಾಯಿತ್ತಾದೊಡೆ ತನ್ನ ಹೊಲದ ಮೇರೆಕಟ್ಟಿಗೆ, ಗೌಡನಾಯಿತಾದೊಡೆ, ತನ್ನ ಯೆಲ್ಲೆವಾ ಸೆಯ ಮೇರೆಕಟ್ಟಿಗೆ, ರಾಜ್ಯಾಧಿಪತಿಯಾಯಿತಾದೊಡೆ ಪರರಾಯರ ದೇ ಶ ಕೋಶಂಗಳನ್ನು ಒತ್ತಿ ಆಳಬೇಕೆಂದು ಸದಾ ಹೋರುತ್ತಿಹನಾತ್ಮ ನು. ಉತ್ಸಾಹ ವ್ಯಸನವೆತ್ತಿದಲ್ಲಿ ಒಸಗೆ ಸಂಬಂಧವಾದ ವ್ಯಸನಗುಣ ವು ಜೀವಾತ್ಮನಿಗಿದ್ದಕಿದ್ದಹಾಂಗೆ ಎತ್ತಾನಕೊಂಡುವೇಳೆ ತಲೆದೋರು ವುದು. ಆ ತಲೆದೋರಿದಾಗ ಪುತ್ರ, ಜಯಂತ, ನಳಕೂಬರ, ಕಂದ ರ್ಪ, ಮಾರ್ತಾಂಡರಂತೆ ಭೋಗಭಾಗ್ಯ ಸೌಂದರ್ಯ ಆಯುಷ್ಯವೆನುಳ್ಳ ನಂದನರುಗಳಾಗಬೇಕೆನುತಿಹನು. ಮಿತ್ರ- ತನ್ನ ರೋಮಬಿದ್ದಲ್ಲಿ ಪ್ರಾ ಣವಕೊಟ್ಟಹೆನೆಂಬ ಜ್ಯೇಷ್ಠ ಕನಿಷ್ಠರು ಮುಂತಾದಾತ್ಮಸಖರುಗಳಾ ಗಬೇಕೆನುತಿಹನಾತ್ಮನು. ಕಳತ್ರ-ಅರುಂಧತಿ, ರತಿ, ಸರಸ್ವತಿ, ಲ ಕ್ಷ್ಮಿಯರಂತೆ ಪತಿಹಿತಮತಿಚಮತ್ಕಾರ, ಸೌಂದರ್ಯ, ಐಶ್ವರ್ಯವೆನುಳ್ಳ ಸ್ತ್ರೀಯರುಗಳಾಗಬೇಕೆನುತಿಹನಾತ್ಮನು. ಇವು ಮೊದಲಾದ ಅಷ್ಟ ಭೋಗೈಶ್ವರ್ಯವೆಲ್ಲಾಗಬೇಕೆಂದು ಬಯಸುತಿಹನಾತ್ಮನು. ಸೇವಕವ್ಯಸ ನವೆತ್ತಿದಲ್ಲಿ ಉದ್ಯೋಗಸಂಬಂಧವಾದ ವ್ಯಸನಗುಣವು ಜೀವಾತ್ಮನಿಗಿದ್ದ ಕಿದ್ದಹಾಂಗೆ ಎತ್ತಾನಕೊಂಡುವೇಳೆ ತಲೆದೋರುವುದು. ಆ ತಲೆದೋ ರಿದಾಗ ಹೋದೆಹೆ-ದೊಡ್ಡದೊಡ್ಡ ಪೇಟೆ ಪಟ್ಟಣಂಗಳಿಗೆ ಗಮಿಸಬೇಕೆ ನುತಿಹನು, ಬಂದೆಹೆ-ಅಲ್ಲಿಹೋಗಿ ದೊಡ್ಡದೊಡ್ಡ ಗೌಡ ದೇಶಾಯಿಗಳು ಮಂತ್ರಿ ಪ್ರಧಾನಿ ಅರಸುಗಳ ಕೈಕೆಳಗೆ ಆರು ಮೂರುತಿಂಗಳು ಸಂಬಳ ಕ್ಕನಿಂತು ನೂರಾರುಸಾವಿರ ವರಹಗಳನ್ನು ಗಳಿಸಿಕೊಂಡುಬಂದು ತಾ ಮುನ್ನಿರ್ದ ಸ್ಥಾನಕ್ಕೆ ಬರಬೇಕೆನುತಿಹನು. ಕೊಂಡೆಹೆ-ತಾನು ತೆಗ ದುಕೊಂಡು ಬಂದಂತಾ ಹಣವಿಗೆ ತನ್ನ ಸತಿಸುತಾದಿಗಳಿಗೆ ತನಗುಂಬು ವುದಕ್ಕೆ ಅನ್ನ, ಉಡುವುದಕ್ಕೆ ಸೀರೆ, ಇಡುವುದಕ್ಕಾಭರಣ, ತೊಡುವು ದಕ್ಕೆ ರವಿಕೆ, ಮಲಗುವುದಕ್ಕೆ ಪರ್ಯಂಕ, ಸೇವೆ ಸತ್ಕಾರವಂ ಮಾಡುವು ದಕ್ಕೆ ಹತ್ತೆಂಟು ತೊತ್ತು ಭಂಟರು, ಗೌಡಿಯರು, ತಕ್ಕಂತಾವರುಗಳ ನ್ನು ತಂದು ತನ್ನಮನೆಗೆ ತಕ್ಕಂತಾ ಸಾಧಕ ದ್ರವ್ಯಗಳನ್ನು ವಿಕ್ರಯ ವ ಮಾಡಿ ತೆಗದುಕೊಳ್ಳಬೇಕೆನುತಿಹನು, ಕೊಟ್ಟೆಹೆನೆನುತಿಹನು, ತಾನು

ಕೊಂಡಂತಾ ವಸ್ತುಗಳನ್ನು ತನ್ನ ಸತಿಸುತಾದಿಗಳು ಸುಖದಲ್ಲಿ ಊಟವ ಮಾಡಿಕೊಂಡಿರಬೇಕೆನುತಿಹನಾತ್ಮನು. ಈ ಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಏಳುಪ್ರಕಾರವಾದ ವ್ಯಸನಗುಣಂಗಳ ಹಸಿಗೆಯ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೬೦ಕ್ಕೆ ಮಂಗಳಮಹಾ.

## ಷ ಡೂ ರ್ಮಿ ಗ ಳು .

ತದನಂತರದಲ್ಲಿ ಷಡೂರ್ಮಿಗಳು ಆತ್ಮನಿಗೆ ಸಂಬಂಧವಾದ ದೇಹದಲ್ಲಿ ಆರುಪ್ರಕಾರವಾದೂರ್ಮಿಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ, ಆ ವಿಚಾರವನ್ನು ಮುಂದೆ ಗ್ರಂಥೋಕ್ತವಾಗಿ ನಿರೂಪಿಸುತಿಹರು. ಭುಭುಕ್ಷುಃ=ಹಸಿವು, ಪಿಪಾಂಸುಃ=ತೃಷೆಯು, ಪ್ರಾಣಸ್ಯ=ಈ ಎರಡು ಪ್ರಾಣನ ನಡವಳಿಗಳಾಗಿರುತಿಹವು, ಶೋಕ=ದುಃಖವು, ಮೋಹ=ಮಮಕಾರವು, ಮನಸಃ=ಈ ಎರಡು ಮನಸ್ಸಿನ ನಡವಳಿಗಳಾಗಿರುತಿಹವು, ಜನನ=ಉತ್ಪತ್ತಿಯು, ಮೃತ್ಯು=ಮರಣವು, ಶರೀರಸ್ಯ=ಈ ಎರಡು ದೇಹದ ನಡವಳಿಗಳಾಗಿರುತಿಹವು, ಆರುಪ್ರಕಾರವಾದೂರ್ಮಿಗಳನ್ನು ಹೇಳಲ್ಪಟ್ಟವು. ಇವಕ್ಕೆ ಮುಂದೆ ವ್ಯಾಖ್ಯಾನವಾಗಿ ನಿರೂಪಿಸುತಿಹರು. ಕ್ಷುತ್=ದೇವಾನ್ನ, ದಿವ್ಯಾನ್ನ, ದಧ್ಯನ್ನ, ದುಗ್ಧಾನ್ನ, ಹರಿದ್ರಾನ್ನ, ಮುದ್ಗಾನ್ನ, ಘೃತಾನ್ನ, ಗುಡಾನ್ನ ಮುಂತಾದ ವೃಷ್ಟಾನ್ನಪಾನಂಗಳನ್ನನುಭವಿಸಬೇಕೆಂಬುವುದುದರಾಗ್ನಿ, ಪಿಪಾಂಸೆ=ಶೀತಳ, ಶಿವದಾನ=ಎಳೆಯಗ್ಗಣಿ, ಕಬ್ಬಿನಹಾಲು, ಪಾನಕ, ಪನ್ನೀರು ಮೊದಲಾದ ಪಾನ್ಯದ್ರವ್ಯಂಗಳನ್ನೀಂಟಬೇಕೆಂಬ ನೀರಡಿಕೆಯು, ಶೋಕ=ತನಗಿಷ್ಟವಾದ ವಸ್ತು ತನ್ನಿಂದಗಲಿಹೋದಲ್ಲಿ ಆ ವಸ್ತುವನ್ನು ನೆನನೆನದು ಎದೆ ಬಾಯಿ ಬಸುರಬಡಿದುಕೊಂಡು ದುಃಖಿಸುವಂತಾ ದುಃಖವೇ ಶೋಕವು, ಮೋಹ=ಆ ಹೋದವಸ್ತುವನ್ನು ಮರಳಿ ತನಗೆ ದೊರಕೊಂಡಲ್ಲಿ ಆ ವಸ್ತುವನ್ನು ಕಣ್ಣಿನಲ್ಲಿ ನೋಡಿನೋಡಿ ಮಮಕರಿಸುವಂತಾ ಮಮಕಾರವೇ ಮೋಹವು. ಜನನ=ಸ್ಥೂಲಮಾನವದ ಪಿಂಡವು ಸೂಕ್ಷ್ಮವಾದ ಯೋನಿದ್ವಾರದಲ್ಲಿ ನುಸುಳಿಬರುವಲ್ಲಿ ಒಬ್ಬಾನೊಬ್ಬ ಕಾರಕನು ಉಕ್ಕಿನ ಕಂಬಚ್ಚಿನಲ್ಲಿ ಚಿನ್ನದ ಸಲಾಕಿಯನಿಕ್ಕಿ ಇಕ್ಕಳದಿಂದಹಿಡಿದು ತುಯಿದರೆ ಅದು ಹ್ಯಾಗೆ ಸಣ್ಣಿಸಿ

ಬರುತಿಹುದೋ ಹಾಂಗೆ ಸಪ್ತಧಾತುಗಳೆಲ್ಲಾ ಸಣ್ಣಿಸಿ ಗಿಟಗಿಟಜಂತ್ರ ವಾಗಿ ತನ್ನ ಪ್ರಾಣವೇ ಕಡೆಯಾಗಿ ತಾಯಿಪ್ರಾಣವೇ ಅಂತ್ಯವಾಗಿ ನಾ ನಾ ಪ್ರಯಾಸದಿಂದ ಹುಟ್ಟಬರುವಂತಾದ್ದೇ ಜನನವು. ಮರಣ-ಕಡೆ ಯಲ್ಲಿ ನಾನಾ ರುಜೆಗಳಿಂದ ನವೆದು ಸಪ್ತಧಾತುಗಳೆಲ್ಲಾ ಸಣ್ಣಿಸಿ ಗಿಟಗಿ ಟಜಂತ್ರವಾಗಿ ತನ್ನ ಮಲಮೂತ್ರಂಗಳಲ್ಲಿ ತಾನೇ ಬಿದ್ದುಹೊರಳಿ ಮೃತ ವನ್ನೈದಿ ಹೋಗುವಂತಾದ್ದೇ ಮರಣವು. ಈ ಪ್ರಕಾರದಿಂದ ಹೇಳ ಲ್ಪಟ್ಟಂತಾ ಇವುತಾವೇ ಷಡೂರ್ಮಿಗಳಭಿಧಾನಂಗಳು ಎಂಬಲ್ಲಿ ಊ ರ್ಮಿಗಳೆಂದರೆ ತೆರೆಗಳಿಗೆ ಹೆಸರು, ಇವಕ್ಕೂರ್ಮಿಗಳೆಂಬ ನಾಮವೇನು ಕಾರಣಕ್ಕೆ ಬಂದಿತ್ತಲೆಸ್ವಾಮಿ ಎಂದು ಬೆಸಗೊಂಡೊಡೆ, ಬಂದಾನೊಂದು ಸಮುದ್ರದಲ್ಲಿ ಹೆಣ್ಣುತೆರೆ ಗಂಡುತೆರೆಗಳೆಂದು ಹುಟ್ಟಿ ಸಮುದ್ರವದಾಂಟಿ ತಡಿಯಸೇರುವವೆಂಬ ಆತ್ಮರುಗಳ ಮುಖಕ್ಕೆ ಅಂಡಲೆದು ಹಿಂದಕ್ಕೆ ಹಾ ಕಿಬಿಡುತಿಹವು ಎಂಬ ದೃಷ್ಟೋಪಮಾನದಹಾಂಗೆ ಈ ದೇಹವೆಂಬಂಬು ಧಿಯಲ್ಲಿ ಷಡೂರ್ಮಿಗಳೆಂಬ ಕಲ್ಲೋಲಂಗಳು ಹುಟ್ಟಿ ಭವಾಂಬುಧಿಯ ನ್ನುದಾಂಟಿ ಭಕ್ತಿತಡಿಯ ಸಾರ್ವವೆಂಬ ಸುಜನರುಗಳ ಸುವಿವೇಕವೆಂಬ ಮುಖಕ್ಕೆ ಅಂಡಲೆದು ಹಿಂದಕ್ಕೆ ಆ ಭವಾಂಬುಧಿಯಲ್ಲಿಯೇ ಮುಳುಗಿಸಿ ಬಿಡುತಿಹವಾದಕಾರಣ ಇವಕ್ಕೂರ್ಮಿಗಳೆಂಬ ಹೆಸರು ಪ್ರಸಿದ್ಧವಾಯಿ ತೆಂದರಿವುದು. ಇದಕ್ಕೀ ಆರುಪ್ರಕಾರವಾದೂರ್ಮಿಗಳಿಗೆ ವಿವರ ವಿಚಾ ರವಾಗಿ ನಿರೂಪಿಸುತಿಹರು. ಕ್ಷುತ್ ಪಿಪಾಂಸೆ ಈ ಎರಡು ಪ್ರಾಣನ ಧ ರ್ಮ, ಪ್ರಾಣನ ನಡವಳಿಗಳಾಗಿರುತಿಹವು. ಅದು ಹ್ಯಾಗೆಂದೊಡೆ, ಹಸಿ ವಾದವ್ಯಾಳ್ಯಕ್ಕನ್ನವು ತೃಷೆಯಾದವ್ಯಾಳ್ಯಕ್ಕೆ ಪಾನ್ಯವು ದೊರಕೊಂಡೊ ಡೆ ಆತ್ಮನು ಘಟದೊಳಗೆ ಸುಖದಲ್ಲಿ ಜೀವಿಸಿಕೊಂಡಿರುತಿಹನು. ಎತ್ತಾ ನಕೊಂದುವೇಳೆ ಹಸಿವಾದವಾಳ್ಯಕ್ಕನ್ನವು ತೃಷೆಯಾದವ್ಯಾಳ್ಯಕ್ಕೆ ಪಾ ನ್ಯವು ದೊರಕೊಳ್ಳದಿದ್ದಲ್ಲಿ ಆತ್ಮನು ಘಟವಬಿಟ್ಟು ಹೋಗುತಿಹನು. ಅ ದುಕಾರಣವಾಗಿ ಹಸಿವು ತೃಷೆಗಳೆಂಬುಭಯವೂ ಪ್ರಾಣನ ನಡವಳಿಗ ಳಾಗಿರ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಶೋಕ ಮೋ ಹ ಈ ಎರಡು ಸುಖದುಃಖವೆಂಬುಭಯವೂ ಮನದ ಧರ್ಮವು ಮನ ಸ್ಸಿನ ನಡವಳಿಗಳಾಗಿ ತೋರುತಿಹವು. ಅದು ಹ್ಯಾಗೆಂದೊಡೆ, ತನಗಿ ಷ್ಟವಾದ ವಸ್ತುವು ತನ್ನಿಂದಗಲಿಹೋದಲ್ಲಿ ಆ ವಸ್ತುವನ್ನು ನೆನನೆನದು ದುಃಖಿಸುವಂತಾ ದುಃಖವು ಮನದೊಳಗೆ ಹುಟ್ಟಿಸುತ್ತಿಹುದು. ಆ ವ

ಸ್ತುವು ಮರಳಿ ದೊರಕೊಂಡಲ್ಲಿ ಆ ವಸ್ತುವನ್ನು ಕಣ್ಣಿನಲ್ಲಿ ನೋಡಿನೋ ಡಿ ಮಮಕರಿಸುವಂತಾ ಮಮಕಾರವೇ ಮನದೊಳಗೆ ಹುಟ್ಟುತಿಹುದು. ಅದುಕಾರಣವಾಗಿ ಸುಖದುಃಖವೆಂಬುಭಯವೂ ಮನದಧರ್ಮ, ಮನಸ್ಸಿನ ನಡವಳಿಗಳಾಗಿರ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಜನನ ಮರಣಗಳೆರಡೂ ದೇಹದಧರ್ಮ ಶರೀರ ನಡವಳಿಗಳಾಗಿರ್ಪವು. ಅದು ಹ್ಯಾಗೆಂದೊಡೆ, ಒಬ್ಬಾನೊಬ್ಬ ಕಾರಕನು ಉಕ್ಕಿನ ಕಂಬಚ್ಚಿನಲ್ಲಿ ಚಿನ್ನದ ಸಲಾಕಿಯನ್ನಿಕ್ಕಿಕ್ಕಾಳದಿಂದ ಹಿಡಿದು ತೆಗೆದರೆ ಅದು ಹ್ಯಾಗೆ ಸಣ್ಣಿಸಿ ಬರುತಿಹುದೋ ಹಾಂಗೆ ಆತ್ಮನ ಸ್ಥೂಲವಾದ ಪಿಂಡವು ತಾಯಿಯತಿಸೂಕ್ಷ್ಮವಾದ ಯೋನಿದ್ವಾರದಲ್ಲಿ ನುಸುಳಿ ಬರುವಾಗ ಸಪ್ತಧಾತುಗಳೆಲ್ಲಾ ಸಣ್ಣಿಸಿ ಗಿಟಗಿಟಜಂತ್ರವಾಗಿ ತನ್ನ ಪ್ರಾಣವೇಕಡೆಯಾಗಿ ತಾಯಿಪ್ರಾಣವೇ ಅಂತ್ಯವಾಗಿ ನಾನಾ ಪ್ರಯಾಸದಿಂದ ಹುಟ್ಟಿಬರುವಾಗ ತಟ್ಟುವಂತಾ ದುಃಖವು ದೇಹಕ್ಕೆ ತಟ್ಟುತಿಹುದು. ಕಡೆಯಲ್ಲಿ ನಾನಾ ರುಜೆಗಳಿಂದ ನವುದು ತನ್ನ ಮಲಮೂತ್ರಂಗಳಲ್ಲಿ ತಾನೇ ಬಿದ್ದುಹೊರಳಿ ಮೃತವಾಗಿಹೋಗುವಾಗಲು, ದೇಹಕ್ಕೆ ದುಃಖವು ತಟ್ಟುತಿಹುದು. ಆ ದುಕಾರಣವಾಗಿ ಉಭಯವೂ ದೇಹದ ನಡವಳಿಗಳಾಗಿಪ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಆರುಪ್ರಕಾರವಾದೂರ್ಮಿಗಳ ಹಸಿಗೆಯ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೧೭ಕ್ಕೆ ಮಂಗಳಮಹಾ.

——:(***):——

## ಅ ರಿ ಷ ಡ್ವ ರ್ಗಂ ಗ ಳು.

ಇನ್ನು ಅರಿಷಡ್ವರ್ಗಂಗಳು ಶರೀರಸಂಬಂಧಿಗಳಾದ ಆತ್ಮರುಗಳಲ್ಲಿ ಆರುಪ್ರಕಾರವಾದ ವೈರಿಗಳೆಂದುಂಟಾಗಿರುತಿಪವು, ಅವರ ಸ್ವರೂಪವಂ ಪೇಳುತಿಹರು. ಆವಾವೆಂದೊಡೆ, ಕಾಮ-ಗುರುದಾರ ಪರದಾರಗಮನಂಗಳಿಗೆ ಅಳುಪುವುದೇ ಕಾಮವು. ಕ್ರೋಧವು-ಒಡಲೊಡವೆಯ ನಾಶವಮಾಡಿ ಬಿಡುವುದೇ ಕೋಪವು. ಲೋಭ-ಇಹಪರ ಸಿದ್ಧಿಯ ಕೆಡಿಸಿ ಭವಕ್ಕೆ ತರುವುದೇ ಲೋಭವು. ಮೋಹ-ನಿತ್ಯಾನಿತ್ಯ ವಿವೇಕವ ಕೆಡಿಸಿ ಅನಿತ್ಯದೇಹವ ಮೆಚ್ಚುವುದೇ ಮೋಹವು. ಮದ-ನೀತಿಯೆಂಬಿಟ್ಟು ಅನೀತನವಮಾಡುವುದೇ ಮದವು. ಮತ್ಸರ-ಪರರಗುಣವ ನಿರಾಕರಣ

ಯ ಮಾಡುವಂತಾದ್ದೇ ಮತ್ಸರವು. ಇವುತಾವೇ ಅರಿಷಡ್ವರ್ಗಂಗಳು ಆತ್ಮನಿಗೆ ಶತೃಗಳಾದ ಆರುಪ್ರಕಾರವಾದ ಹಸಿಗೆಯು ವಿಚಾರವೆಂಬಲ್ಲಿ ಅರಿಗಳೆಂದರೆ ವೈರಿಗಳಿಗೆ ಹೆಸರು, ಅರಿಗಳೆಂದರೆ ಹದಿನೆಂಟು ಧಾನ್ಯಗಳ ಕೊಯ್ದು ಕೆಡಹಿದ ಮೆದೆಗಳಿಗೆ ಹೆಸರು, ಇವಕ್ಕೆ ಅರಿಗಳೆಂಬ ನಾಮವೇನುಕಾರಣಕ್ಕೆ ಬಂದಿತೆಲೆಸ್ವಾಮಿಯೆಂದು ಬೆಸಗೊಂಡೊಡೆ, ಒಂದಾನೊಂದರಣ್ಯದೊಳಗಿರುವ ಅಡ್ಡಗುಡ್ಡಗಳಲ್ಲಿ ಕಳ್ಳರು ಅಧಿಷ್ಠಿಸಿಕೊಂಡು ಅರಣ್ಯವನ್ನುದಾಂಟಿ ಗ್ರಾಮವಸಾರೆವೆಂಬಂತಾತ್ಮರುಗಳೊಡವೆ ವಸ್ತುಗಳನ್ನು ಅಪಹರಿಸಿಕೊಂಡು ಹಿಂದಕ್ಕೆ ಅರಣ್ಯವಾಸಿಗಳನ್ನೇ ಮಾಡಿಬಿಡುತಿಹರು ಎಂಬ ದೃಷ್ಟಾಂತೋಪಮಾನದಹಾಂಗೆ ಇತ್ತ ಭವಾರಣ್ಯವಾಸಿಗಳಾದ ತನುತ್ರಯಗಳೆಂಬ ಅಡ್ಡಗುಡ್ಡಂಗಳಲ್ಲಿ (ಶ್ಲೋ ॥ ಕಾಮಕ್ರೋಧಕ್ಷಲೋಭಶ್ಚ ದೇಹೆತಿಷ್ಠಂತಿ ತಸ್ಕರಃ । ಜ್ಞಾನರತ್ನಾಪಹಾರೇಣ ತಸ್ಮಾಜ್ಜಾಗ್ರತ ಜಾಗ್ರತ) ಎಂದು ಹೇಳುತಿಹುದಾದಕಾರಣ ಕಾಮಾದ್ಯರಿಷಡ್ವರ್ಗಂಗಳೆಂಬ ಕಳ್ಳರು ಅಧಿಷ್ಠಿಸಿಕೊಂಡು ಭವಾರಣ್ಯವಂದಾಂಟಿ ಭಕ್ತಿಗ್ರಾಮವ ಸಾರೆವೆಂಬ ಸುಜನರುಗಳ ಸುವಿವೇಕವೆಂಬ ಜ್ಞಾನರತ್ನವನ್ನಪಹರಿಸಿಕೊಂಡು ಹಿಂದಕ್ಕೆ ಆ ಭವಾರಣ್ಯವಾಸಿಗಳನ್ನೇ ಮಾಡಿಬಿಡುತಿಹವಾದ ಕಾರಣ ಇವಕ್ಕೆ ಅರಿಗಳೆಂಬ ನಾಮವು ಪ್ರಸಿದ್ಧವಾಯಿತು. ಅದುಕಾರಣವಾಗಿ ಅರಿಷಡ್ವರ್ಗಂಗಳ ಭೇದದ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೨೨ಕ್ಕೆ ಮಂಗಳಂ.

———:(***):———

## ಷ ಡ್ಭ್ರ ಮೆ ಗ ಳು .

ತದನಂತರದಲ್ಲಿ ಷಡ್ಭ್ರಮೆಗಳು ಶರೀರಸಂಬಂಧಿಗಳಾದಾತ್ಮರುಗಳಲ್ಲಿ ಆರುಪ್ರಕಾರವಾದ ಭ್ರಾಂತುಗುಣಂಗಳೆಂದೊಂಟಾಗಿರುತಿಹವು. ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ—ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮ ಇವುತಾವೇ ಷಡ್ಭ್ರಮೆಗಳು. ಈ ಆರುಪ್ರಕಾರವಾದ ಭ್ರಾಂತುಗುಣಂಗಳಿಗೆ ವಿವರ, ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಬ್ರಾಹ್ಮಣ-ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹವೆಂಬ ಷಟ್ಕರ್ಮಯುಕ್ತನಾಗಿ ಷೋಡಶಕರ್ಮದೊಡನೆ ಕೂಡಿದಾತನಾಗಿ ಶಿವಭಕ್ತಿಯಾದಿ ಸಕಲಸದ್ಗು

ಣಯುಕ್ತನಾದಾತನೇ ಬ್ರಾಹ್ಮಣನು. ಕ್ಷತ್ರಿಯ-ಪ್ರಜಾಪಾಲನ, ಯಜ್ಞ ನ, ಅಧ್ಯಯನ, ಕುಜನದುಷ್ಟಮೃಗಶತೃಸಂಹಾರ, ನಿಜದೇಶಕಾಲಪಾ ತ್ರಪರೀಕ್ಷೆ, ಷೋಡಶಮಹಾದಾನದೊಡನೆ ಕೂಡಿರುವನಾಗಿ ವಿಷ್ಣುಭ ಕ್ತ್ಯಾದಿ ಸಕಲಸದ್ಗುಣಯುಕ್ತನಾಗಿರುವಾತನೇ ಕ್ಷತ್ರಿಯನು. ವೈಶ್ಯ-ಮಹಾಕ್ರತುವಂ, ಗಣಿತಮಂ, ಜೇಕಾದ ಚಿನ್ನದವರೆ ಒಣ್ಣದವಟ್ಟ ನವವಿಭಾಕಾರರತ್ನದರೀತಿಯರಿದು, ಕರ್ಪೂರಾದಿತೂಕ, ಧಾನ್ಯಾದಿಗಳ ಳತೆಯನರಿದು, ವಾಣಿಜ್ಯ, ಕೃಷಿ, ಸೂರ್ಯಭಕ್ತ್ಯಾದಿ ಸಕಲಸದ್ಗುಣಯು ಕ್ತನಾದಾತನೇ ವೈಶ್ಯನು. ಶೂದ್ರ-ತ್ರೈವರ್ಣಸೇವಾ, ಕ್ಷೇತ್ರ, ಕೃಷಿ, ಹಲವುದೇವತಾಭಜನೆಯುಳ್ಳಾತನೇ ಶೂದ್ರನು. ಈ ನಾಲ್ಕುಜಾತಿಭ್ರ ಮೆ-ಒಂದು ಮಾತುಕಥೆ ಪ್ರಸಂಗವು ಬಂದಲ್ಲಿ ತಮ್ಮತಮ್ಮ ಜಾತಿಯೇ ವಿಶೇಷವೆಂದು ಭ್ರಮಿಸುತ್ತಿಹರು. ವರ್ಣ-ಹದಿನೆಂಟುವರ್ಣಗಳಲ್ಲಿ ಶ್ರೇ ಷ್ಠನೆಂಬುದು, ಅಹಂಶ್ರೇಷ್ಠಃ ಅಹಂಶ್ರೇಷ್ಠಃ ಎಂದು ನುಡಿಯುವ ದು. ವರ್ಣಭ್ರಮೆ-ಅದುತಾನೇ ವರ್ಣಭ್ರಾಂತೆಂದು ಹೇಳಿಸಿಕೊಂಬು ತು. ಗೃಹಸ್ಥ-ಮುನ್ನ ಬ್ರಹ್ಮಚಾರಿಯಾಗಿ ತಾನುರಾಗಯುಕ್ತನಾದ ತನ್ನಾರ್ಯನಾಜ್ಞೆಯಂಪಡೆದು ಕನ್ನಿಕಾರತ್ನವನ್ನು ತನ್ನ ಸ್ವಜಾತಿಯ ಲ್ಲಿಯೇ ಕೈಕೊಂಡು ಸಕಲಧರ್ಮಾಚಾರಯುಕ್ತನಾಗಿ ಶಿಖಿ, ಯಜ್ಞೋ ಪವೀತ, ವೇಣು, ದಂಡ, ಕಮಂಡಲು, ಧೋತ್ರ, ಬೈರ್ವಾಸಯುಕ್ತನಾಗಿ ತನ್ನ ತ್ರೈಸ್ಥಾನದಲ್ಲಿ ತ್ರೈವರ್ಣಧ್ಯಾನತತ್ಪರನಾಗಿ ಸದಾಲಿಂಗಾರ್ಚನ ಯುತನಾಗಿರುವಾತನೇ ಗೃಹಸ್ಥನು. ವಾನಪ್ರಸ್ಥ-ಆತಂಗೆ ವೈರಾಗ್ಯಜ ನಿಸಿ ಯತ್ಯಾಶ್ರಮವನ್ನೋತು ಸ್ವೀಕರಿಸಿ ವನಿತಾದಿ ಗೃಹಭಾರವಂ ತಾ ತನ್ನಪುತ್ರಂಗೆ ವಹಿಸಿ ಶುಭಲಗ್ನದೊಳ್ಪುಣ್ಯವನವನಾಶ್ರೈಸಿ ವೃಕ್ಷಜಾ ತಂಗಳೊಳ್ಪರ್ಣಶಾಲೆಯ ರಚಿಸಿ, ಜಡೆ, ಭೂತಿ, ರುದ್ರಾಕ್ಷಿಗಳ ಕ್ರಮ ದಿನಳವಡಿಸಿ ನಖರೋಮಾದಿಗಳಂತೆಗಸದೆ ಭೂಜಾತ ಶಾಖಕಬಳ ಷೋ ಡಶಕಬಳಪ್ರಮಾಣದಿಂದ ಸೇವಿಸುತ್ತಾ ಸದಾಲಿಂಗಾರ್ಚನಯುತನಾಗಿ ರುವಾತನೇ ವಾನಪ್ರಸ್ಥನು. ಕುಟೀಚ-ಅವಾಗಾದರೆಯೂ ವೈರಾಗ್ಯಜ ನಿಸಿ ಯತ್ಯಾಶ್ರಮವನವಧರಿಸಿ ಯಜ್ಞಸೂತ್ರ, ಶಿಖಾ, ತ್ರೈದಂಡ ಕಮಂ ಡಲು, ಭಿಕ್ಷಾಪಾತ್ರೆ, ಕಾಷಾಂಬರವಧರಿಸಿ ಭಸ್ಮತ್ರಿಪುಂಡ್ರಮಂ ಭಸ ಹಿತ ರುದ್ರಾಕ್ಷಾಭರಣ ಸಂಕತೊಟ್ಟು ವಿವಿಧಗಾಯತ್ರಿಯಂ ವಿಶ್ವಾಸದಿಂದ ಜಪಿಸಿ ತಮತನ್ನಗೋತ್ರ ಸ್ವಜಾತಿಯಲ್ಲಿ ಭಿಕ್ಷಮಂಗ್ರಹಿಸುವಾತನೇ ಕು

ಟೀಚಂ-ಅವಧೂತ,ಅರುಣೋದಯಕ್ಕೆ ಮುನ್ನ ಖದ್ಯೋತದೀಪವಿಡಿದು ವತಾರೆತೋರಿಸಲು ತರುಣಿಪ್ರಕಾಶಕ್ಕೆ ಇರದಡಗಿದವೊಲ್ ಜ್ಞಾನವಂು ದಿಸಿ ಚತುರಾಶ್ರಮಗಳಲ್ಲಿದು ಮನಶ್ಶುದ್ಧನಾಗಿ ಗುರುವಿತ್ತವೇದೋಕ್ತ ಶಿವಜೀವರೊಂದಾದವರ ಜ್ಞಾನದೊಳು ಹೊಂದಿ ಹೊಂದದಾಶ್ರಮನಾಗಿ ದುರಿತಪುಣ್ಯಗಳಲ್ಲಿದು ಸರ್ವಾಶ್ರಮಂಗಳೋಲ್ ಪೂಜ್ಯನೆನಿಸುವಾತನೇ ಅವಧೂತನು. ಈ ಚತುರ್ವಿಧವು ಆಶ್ರಮಭ್ರಮೆಯು, ತಾವುತಾವು ನಿಂದನಿಂದ ಸ್ಥಲಂಗಳೇ ವಿಶೇಷವೆಂದು ಭ್ರಮಿಸುತಿಹರು. ಕನ್ನಡಿಗ, ವಾಲೆಕಂಠ, ಬಳಪಸಂಪುಟ, ಲೇಕಣಿಕೆ, ಕಾಗದಂಗಳಂ ಪಿಡಿದು ಧೊರೆಗಳ ಕೈಕೆಳಗೆ ಸಂಬಳಕ್ಕೆ ನಿಂತು ಅವರಮನೆಯ ರಾಣಿವಾಸಿಯರಿಗೆ ದೇಶಕೋಶ, ರಾವುತ, ಬೊಕ್ಕಸಭಂಡಾರ ಮೊದಲಾದುದರ ಸಂದುದನಿಂದು ದೆಂಬರದು ಅವರುಕೊಟ್ಟ ರಾತೀಪಿನಿಂದ ತನ್ನಗೃಹಭಾರವನ್ನೈದಿಸಿಕೊಂಡು ಹೋಗುವಾತನೇ ಕನ್ನಡಿಗಕುಲದ ಬ್ರಾಹ್ಮಣನು. ವಾಣಿಜ್ಯ ಅಗ್ಗವಾದ ಸ್ಥಾನದಲ್ಲಿ ತಂದು ಪಿರಿಯವಾದ ಸ್ಥಾನದಲ್ಲಿ ಮಾರಿ ಅದರಿಂದ ಬಂದ ಲಬ್ಧದಿಂದ ತನ್ನ ಗೃಹಭಾರವನ್ನೈದಿಸಿಕೊಂಡು ಹೋಗುವಾತನೇ ವಾಣಿಜ್ಯಕುಲದ ಬ್ರಾಹ್ಮಣನೆನಿಸುವನು. ಕರ್ಮ್ಮೆರಕುಲ-ಕರ್ಮ್ಮೆರಕುಲದ ಬ್ರಾಹ್ಮಣನೆಂದರೆ ಹಾಮಿಗಹಾರುವನೆಂದರು, ಹೆಬ್ಬಹಾರುವನೆಂದರು, ಮರಹಾರುವನೆಂದರು, ಕೊಂಡವಿಡಿಯುಹಾರುವನೆಂದರು, ಒಂದೇನಾಮವರಿಯಾಯವಾಗಿಪ್ಪವು. ಅವರುಗಳು ಧೊರೆಗಳ ಕೈಕೆಳಗೆ ಭೂಮಿಯನ್ನು ಪಿಡಿದು ಬಹಳ ತೋಟತುಡಿಕೆಗಳಂಮಾಡಿ ಬಾಳೆ, ಬದನೆ, ಅಡಿಕೆ, ತೆಂಗು, ಕುಂಬಲ, ಸೌತೆ ಮೊದಲಾದ ಫಲವಸ್ತುಗಳನ್ನು ಬಿತ್ತಿ ಬೆಳೆದು ಅರಮನೆಯ ತೆರಿಗೆಯಕೊಟ್ಟು ಅದರಿಂದ ಬಂದ ಲಬ್ಧದಿಂದ ತನ್ನ ಗೃಹಭಾರವನ್ನೀಸಿಕೊಂಡು ಹೋಗುವಾತನೇ ಕರ್ಮ್ಮೆರಕುಲದ ಬ್ರಾಹ್ಮಣನು. ತಿಗಳ-ಹಲವು ಪ್ರಯತ್ನದಿಂದಕ್ಷರಾಭ್ಯಾಸವ ಮಾಡಿಸಿದರು ಬಾರದೆ ಹೆಗಲಮೇಲೆ ಹಡ್ಡಿಗಡಿಗೆ ಕೊಟ್ಟು ಧೋತ್ರವ ತೊಳಸುತ್ತ ಪತ್ರಾವಳಿಯ ಹತ್ತಿಸಿಕೊಳ್ಳುತ್ತಾ ಕುದುರೆಯಮೈಯ್ಯ ತಿಕ್ಕಿಸುತ್ತಾ ಗಂಟುಮೊಟ್ಟೆಯ ಹೊರಿಸಿಕೊಳ್ಳುತ್ತಾ ಅನ್ನಪಾನಾದಿಗಳಂ ಮಾಡಿಸಿಕೊಳ್ಳುತ್ತಾ, ನೀರುತರಿಸಿಕೊಳ್ಳುತ್ತಾ, ಸೇವಕವೃತ್ತಿಯಂ ಮಾಡಿಸುತಿಹರು. ಅವನಿಗೂ ತಿಗಳನೆಂಬ ಹೆಸರು. ಮತ್ತಂತುಮಲ್ಲದೆ ಸೂರ್‍ಯಸಿದ್ಧಾಂತ ಚಂದ್ರಸಿದ್ಧಾಂತಗಳನ್ನು ಗುಣಿಸಿ ವಾರ ತಿಥಿ ನಕ್ಷತ್ರಯೋಗಕರಣವೆಂ

ಬ ಪಂಚಾಂಗವ ಪುಸ್ತಕವನ್ನು ಕೈಯಲ್ಲಿ ಪಿಡಿದುಕೊಂಡು ಅವರವ್ವ ಮನೆಯಬಾಕಲಿಗೆ ಹೋಗಿ ಮದುವೆ ಮುಂಜಿಗೆಳಾಗುವದನ್ನು, ಹೆಣ್ಣು ಗಂಡುಗಳ ಹೆರುವದನ್ನು, ಮಳೆಬೆಳೆಗಳಾಗುವದನ್ನು, ಶಕುನಸಾಕ್ಷಾ ಳಿಗಳನ್ನು, ಶುಭಾಶುಭಗಳನ್ನು ಚಂದ್ರಬಲ ತಾರಾಬಲ ರಾಶಿಕೂಟ ಗಣ ಸಂಬಂಧಗಳನ್ನು ಹೇಳಿ ಅವರುಕೊಟ್ಟ ರಾತೀಪಿನಿಂದ ತನ್ನ ಗೃಹಾ ರವನ್ನಿೀಪಿಕೊಂಡು ಹೋಗುವಾತನೇ ತಿಗಳಕುಲದ ಬ್ರಾಹ್ಮಣನು. ಈ ನಾಲ್ಕು ಕುಲಭ್ರಮೆ; ಏನಾದರೊಂದು ಹೆಣ್ಣು ಗಂಡುಗಳ ಕೊಡುವಲ್ಲಿ ಯೂ ಕೊಂಬಲ್ಲಿಯೂ ತಮ್ಮತಮ್ಮ ಕುಲಾವಳಿಯೇ ವಿಶೇಷವೆಂದು ಭ್ರ ಮಿಸುತಿಹರು. ಕಶ್ಯಪ ಭರದ್ವಾಜ ಇವರೇ ಮೊದಲಾದ ಋಷಿಗಳ ತಂ ಡವು ಗೋತ್ರಭ್ರಮೆ, ತಮ್ಮತಮ್ಮ ವಂಶಾವಳಿಯೇ ವಿಶೇಷವೆಂದು ಭ್ರ ಮಿಸುತಿಹರು, ಅವರಿಗೆ ಆ ಭ್ರಾಂತಿಲ್ಲ, ಅವರವಂಶಾವಳಿಯವರಾದ ವಿಪ್ರ ಜನಂಗಳೇನಾದರೂ ಒಂದು ಮುಂಜಿಕರ್ಮವ ಮಾಡುವಲ್ಲಿಯೂ ಯಜ್ಞ ಕ್ರಿಯೆಗಳನ್ನಾಚರಿಸುವಲ್ಲಿಯೂ ತಮ್ಮತಮ್ಮ ವಂಶಾವಳಿಯೇ ವಿಶೇಷ ವೆಂದು ಭ್ರಮಿಸುತಿಹರು. ವಿಷ್ಣು ಬ್ರಹ್ಮ ಮೊದಲಾದ ದೇವತಾ ಸಮೂ ಹವು ನಾಮಭ್ರಮೆ, ತಮ್ಮತಮ್ಮಭಿಧಾನವೇ ವಿಶೇಷವೆಂದು ಭ್ರಮಿಸುತಿ ಹರು, ಅವರಿಗೆ ಆ ಭ್ರಾಂತಿಲ್ಲ. ಅವರಭಿಧಾನದವರಾದ ವಿಪ್ರಜನಂಗಳೇ ನಾದರೊಂದು ದಾನ ದಕ್ಷಿಣೆಗಳಂ ಕೊಡುವಲ್ಲಿ ತಮ್ಮತಮ್ಮಭಿಧಾನವೇ ವಿಶೇಷವೆಂದುಭ್ರಮಿಸುತಿಹರು. ಈ ಪ್ರಕಾರದಿಂದ ಹೇಳಲ್ಪಟ್ಟ ಇ ವುತಾವೇ ಷಡ್ಭ್ರಮೆಗಳು ಆರುಪ್ರಕಾರವಾದ ಭ್ರಾಂತಿಗುಣಂಗಳ ಹಸಿ ಗೆಯು ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟ ೩೩ಕ್ಕೆ ಮಂಗಳಮಹಾ.

---

## ಷ ಡ್ಭಾ ವ ವಿ ಕಾ ರ ಗ ಳು.

ಇನ್ನು ಮುಂದೆ ಷಡ್ಭಾವವಿಕಾರಂಗಳು ಆತ್ಮಂಗಂಗಸಂಬಂಧವಾ ದ ದೇಹದಲ್ಲಿ ಆರುಪ್ರಕಾರವಾದ ವೈಕಾರಂಗಳೆಂದುಂಟಾಗಿರುತಿಹವು ಅವರ ಸ್ವಸ್ವರೂಪವಂ ಹೇಳುತಿಹರು. ಅವಾವೆಂದೊಡೆ, ಅಸ್ತಿತೆ, ಜಾ ಯತೆ, ವಿಪರಿಣತೆ, ವಿವರ್ಧತೆ, ಅಪಕ್ಷತೆ, ವಿನಶ್ಯತೆ ಎಂಬ ಇವುತಾವೇ ಷಡ್ಭಾವ ವಿಕಾರಂಗಳು ಯೆಂಬಲ್ಲಿ (ಶ್ಲೊ॥ ಬಾಲವೃದ್ಧಬಲಂಚಕ್ಷುಸ್ತ್ವ

ಗ್ಬುದ್ಧಿಶ್ಶ್ರೋತ್ರಮಿಂದ್ರಿಯಂ । ಉತ್ಥಾನಪತನೇಚೈವವೈಕಾರಾಃಕಥ್ಯತೆ ದಶ॥) ಎಂದು ಹೇಳುತಿಹುದಾದಕಾರಣ, ಬಾಲ, ವೃದ್ಧ, ಬಲ, ಚಕ್ಷು, ತ್ವಕ್ಕು, ಬುದ್ಧಿ, ಶ್ರೋತ್ರ, ಇಂದ್ರಿಯ, ಉತ್ಥಾನ, ಪತನವೆಂಬ ಹತ್ತು ಪ್ರಕಾರವಾದ ವೈಕಾರಂಗಳೊಳಗೆ ಮುಖ್ಯವಾಗಿರುವಂತಾರುಪ್ರಕಾರವಾದ ವೈಕಾರಂಗಳಭಿಧಾನಂಗಳು. ಇವಕ್ಕೆ ವಿವರ ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ಅಸ್ತಿತೆಯೆಂಬ ವಿಕಾರವು ತಾನೆಂತಾದ್ದೆಯ್ಯಾ ಎಂದರೆ ಗರ್ಭವುಂಟೆಂದೆನಿಸುವುದು, ತಾಯಿ ಕುಕ್ಷಿಯೊಳಗೆ ಒಂಭತ್ತು ತಿಂಗಳು ಶಿಶುವಿರ್ಪುದೆಂದು ಹೇಳಿಸುತಿಹುದಾದಕಾರಣ, ಜಾಯತೆ ಎಂಬವಿಕಾರವು ತಾನೆಂತಾದ್ದೆಯ್ಯಾ ಎಂದರೆ ಜನನಿಯ ಗರ್ಭವಾಸದಿಂದ ಪೊರಮಡುವ ಬಹಿರ್ಗತವಾಗುತಿಹನಾತ್ಮನು. ವಿಪರಿಣತೆ ಎಂಬ ವಿಕಾರವು ಬಾಲ ಪಂಚವಿಂಶತಿ-ಆ ಬಾಲಪಂಚವಿಂಶತಿಯೊಳಗಾಗಿ ಪರಿಣಮಿಸುವ ತಮ್ಮ ತಂದೆತಾಯಿಗಳ ನಚ್ಚಿನ, ಮೆಚ್ಚಿನ, ಅಪ್ಪಿನ, ಮೋಹದ, ಮುದ್ದಿನ ಸುಖವನ್ನು ಕೈಕೊಂಡು ಸಂತೋಷಿಸುತಿಹನಾತ್ಮನು. ವಿವರ್ಧತೆ ಎಂಬವಿಕಾರವು ವರ್ಧಮಾನ ಪಂಚವಿಂಶತಿ-ಆ ವರ್ಧಮಾನ ಪಂಚವಿಂಶತಿಯೊಳಗಾಗಿ ಬೆಳೆವ ಮತ್ತೆ ಇಪ್ಪತ್ತೈದುವರುಷ ಕೂಡಲು ಐವತ್ತು ವರುಷವಾಗುವುದು. ಆ ಐವತ್ತು ವರುಷಪರಿಯಂತರ ಅಡ್ಡ ನೀಳಕ್ಕೆ ಹಗರುಹುಟ್ಟಿ ವರ್ಧಮಾನವಾಗುತಿಹನಾತ್ಮನು. ಅಪಕ್ಷತೆ ಎಂಬವಿಕಾರವು, ವೃದ್ಧಪಂಚವಿಂಶತಿ-ಆ ವೃದ್ಧಪಂಚವಿಂಶತಿಯೊಳಗಾಗಿ ಕುಸಿವ ಮತ್ತೆ ಇಪ್ಪತ್ತೈದುವರುಷ ಕೂಡಲು ಎಪ್ಪತ್ತೈದುವರುಷವಾಗುವದು, ಆ ಯೆಪ್ಪತ್ತೈದುವರುಷ ಪರಿಯಂತರ ನೆರೆಕೆನ್ನೆಗೆ, ತೆರೆಗಲ್ಲಕ್ಕೆ ಬಂದು, ಹಲ್ಲುಹೋಗಿ ಬೆನ್ನುಬಾಗಿ ಎದೆಗೂಡುಗಟ್ಟಿ ಕಾಲಮೇಲೆ ಕೈಯ್ಯನೂರಿ, ಕೋಲನೂರಿಯೇಳುತ್ತಾ ಮುಪ್ಪೆಂದಪ್ಪವಳಿದು ಅನ್ಯರಹಂಗಿಗೊಳಗಾಗುತ್ತಿಹನಾತ್ಮನು. ವಿನಶ್ಯತೆ ಎಂಬವಿಕಾರವು, ಮೃತಪಂಚವಿಂಶತಿ—ಆಮೃತಪಂಚವಿಂಶತಿಯೊಳಗಾಗಿ ಕೆಡುವ, ಮತ್ತೆ ಇಪ್ಪತ್ತೈದು ವರಷಕೂಡಲು ನೂರುವರುಷವಾಗುವದು, ಆ ನೂರುವರುಷದೊಳಗಾಗಿ ನಾನಾರುಜೆಗಳಿಂದನವೆದು ಸಪ್ತಧಾತುಗಳೆಲ್ಲಾ ಸಂಣಿಸಿ ದೇಹವು ಗಿಟಗಿಟಜಂತ್ರವಾಗಿ ಪತನ ಉತ್ಥಾನಗಳಿಂದ ತನ್ನಮಲಮೂತ್ರಂಗಳಲ್ಲಿ ತಾನೇಬಿದ್ದು ಹೊರಳಿ ಮೃತನಾಗಿ ಕರ್ಮವಶದಿಂದ ಪುನರ್ಭವಕ್ಕೆ ಬರುತಿಹನಾತ್ಮನು. ಈ ಪ್ರಕಾರದಿಂದ ಹೇಳಲ್ಪಟ್ಟ ಇವುತಾನೇ ಆರುಪ್ರ

ಕಾರವಾದ ವೈಕಾರಂಗಳ ಹಸಿಗೆಯುವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟ್ಟ ೨೪ಕ್ಕೆ ಮಂಗಳಮಹಾ.

---

## ಪಂಚಕೋಶಗಳು.

ತದನಂತರದಲ್ಲಿ ಪಂಚಕೋಶಂಗಳು ಆತ್ಮಂಗೆ ಸಂಬಂಧವಾದ ದೇಹದಲ್ಲಿ ಐದುಪ್ರಕಾರವಾದ ಕೋಶಂಗಳೆಂದುಂಟಾಗಿರುತಿಹವು. ಅವರ ಸ್ವಸ್ವರೂಪಮಂ ಪೇಳುತಿಹರು. ಆವಾವೆಂದೊಡೆ—ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಇವುತಾವೇ ಪಂಚಕೋಶಂಗಳಭಿಧಾನಂಗಳು ಎಂಬಲ್ಲಿ, ಕೋಶವೆಂದರೆ ಬತ್ತಳಿಕೆಗೂ, ಬೊಕ್ಕಸದ ಮನೆಗೂ, ಅರಚಟ್ಟಿಗಳಿಗೂ, ಹದಿನೆಂಟುಧಾನ್ಯಗಳಂ ತುಂಬುವ ಕಣಜಕ್ಕೂ ಹೆಸರು. ಇವಕ್ಕೆ ಕೋಶಗಳೆಂಬ ನಾಮವು ಏನುಕಾರಣಕ್ಕೆ ಬಂದಿತೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಇವು ಒಂದಾನೊಂದು ಬಾಳೆಮರದ ಪದರಿನೋಪಾದಿಯಲ್ಲಿ ತತ್ವಂಗಳಿಗೆ ತತ್ವಂಗಳೇ ಆಶ್ರಯವಾಗಿ, ಗುಣಂಗಳಿಗೆ ಗುಣಂಗಳೇ ಆಶ್ರಯವಾಗಿ, ಕರಣಂಗಳಿಗೆ ಕರಣಂಗಳೇ ಆಶ್ರಯವಾಗಿರುತಿಹುದಾದಕಾರಣ ಇವಕ್ಕೆ ಕೋಶಂಗಳೆಂಬ ನಾಮವು ಪ್ರಸಿದ್ಧವಾಯಿತು. ಇದಕ್ಕೆವಿವರ-ಆಪಂಚ ಕೋಶಂಗಳೊಳಗೆ ಪೃಥ್ವೀತತ್ವಸಂಬಂಧವಾದ ಸ್ಥೂಲದೇಹವೇ ಅನ್ನಮಯಕೋಶ, ಷಡ್ರಸಾನ್ನವ ಮಡಗಿಕೊಂಡಿರುವುದಕ್ಕೆ ಕೋಶ ಆಶ್ರಯವಾಗಿರುತಿಹುದು. ಆ ದೇಹಮಧ್ಯಸ್ಥವಾದ ಜ್ಞಾನಕರ್ಮೇಂದ್ರಿಯಂಗಳ ವ್ಯಾಪಾರವೇ ಪ್ರಾಣಮಯಕೋಶ, ಪ್ರಾಣಸ್ವರೂಪವನ್ನು ಮಡಗಿಕೊಂಡಿರುವದಕ್ಕೆ ಆಶ್ರಯವಾಗಿರುತಿಹುದು. ಮುಟ್ಟಿದರರಿವುದು, ಕರಪರೆ ಕೇಳುವುದು, ಕಣ್ದೆರದುನೋಡುವುದು, ಜಿಹ್ವೆತೆರದು ಮಾತನಾಡುವುದು, ಕೈಕಾಲುಚೇಷ್ಟೆ ಮುಂತಾದಗುಣಂಗಳುಂಟಾಗಿರ್ದಲ್ಲಿ ಘಟದೊಳಗಿನ್ನು ಪ್ರಾಣವಿದೆಯೆಂದು ತಿಳಿವರು. ಈ ಗುಣಂಗಳೊಂದಿಲ್ಲದೆಯಾದಲ್ಲಿ ಆತ್ಮನು ಘಟವನ್ನುಬಿಟ್ಟು ಹೋದನೆಂದೇ ತಿಳಿವುತಿಹರು. ಅದುಕಾರಣವಾಗಿ ಜ್ಞಾನಕರ್ಮೇಂದ್ರಿಯಂಗಳ ವ್ಯಾಪಾರಂಗಳೇ ಪ್ರಾಣಮಯಕೋಶವೆಂದು ತಿಳಿದುಕೊಂಬುವದು ತತ್ವಜ್ಞಾನಿಗಳು. ಆ ಪ್ರಾಣಮಧ್ಯಸ್ಥವಾದಅಂತ ರಂಗಸಮೇತವಾದ, ಚಿತ್ತ, ಬುದ್ಧಿ, ಅಹಂಕಾರವೆಂಬ ತ್ರಿಕರಣಂಗಳ

ವ್ಯಾಪಾರಂಗಳೇ ಮನೋಮಯಕೋಶ. ಮನಸ್ವರೂಪವನ್ನು ಮಡಗಿಕೊಂಡಿರುವುದಕ್ಕೆ ಆಶ್ರಯವಾಗಿರುತಿಹುದು ಎಂಬಲ್ಲಿ ನೆನಹುದು, ನಿರ್ಧರಿಸುವುದು, ಅವಧರಿಸುವುದು, ಅಹಂಕರಿಸುವುದು ಇವು ಮೊದಲಾದ ಗುಣಂಗಳುಂಟಾಗಿದ್ದಲ್ಲಿ ಆತ್ಮನೊಳಿನ್ನು ಒಂದುಮನಸ್ಸು ಇದೆಯೆಂಬೇ ತಿಳಿವರು. ಈ ಗುಣಂಗಳೊಂದಿಲ್ಲವೆಯಾದಲ್ಲಿ ಆತ್ಮನೊಳಗೊಂದು ಮನಸ್ಸಿಲ್ಲವೆಂದೇ ತಿಳಿಹುತಿಹರು. ಅದುಕಾರಣವಾಗಿ ಅಂತರಂಗಸಮೇತವಾದಕಾರಣ ಚಿತ್ತ, ಬುದ್ಧಿ, ಅಹಂಕಾರವೆಂಬ ತ್ರಿಕರಣಂಗಳ ವೃತ್ತಿಯೇ ಮನೋಮಯಕೋಶವೆಂದು ತಿಳಿದುಕೊಂಬುವುದು ತತ್ವಜ್ಞಾನಿಗಳು. ಆ ಮನೋಮಧ್ಯಸ್ಥವಾದ ಬುದ್ಧಿ, ಕುಹಕಬುದ್ಧಿ, ವಂಚನಾಬುದ್ಧಿ, ಪ್ರಪಂಚಬುದ್ಧಿ, ದುರ್ಬುದ್ಧಿಗಳ ಶಕ್ತಿಯೇ ವಿಜ್ಞಾನಮಯಕೋಶವು. ಅಜ್ಞಾನಸ್ವರೂಪವನ್ನು ಮಡಗಿಕೊಂಡಿರುವುದಕ್ಕೆ ಆಶ್ರಯವಾಗಿರುತಿಹುದು ವಿಜ್ಞಾನಮಯಕೋಶವು. ಆ ಬುದ್ಧಿ, ಆ ಕುಹಕಬುದ್ಧಿ, ಆ ವಂಚನಾಬುದ್ಧಿ, ಆ ಪ್ರಪಂಚಬುದ್ಧಿ, ಆ ದುರ್ಬುದ್ಧಿಗಳ ವ್ಯಾಪಾರವನ್ನಳಿದು ನಷ್ಟಮಾಡಿ ಬಾಹ್ಯವೇನೂತೋರದೆ ಬಹಿರಂಗದಲ್ಲಿ ಒಬ್ಬರಂದಾಢ್ಯರೆಂಬ ಲಜ್ಜಾಭಿಮಾನವು ಕಿಂಚಿತ್ಕುರುಹುಕಾಣಿಸದೆ ಅಂತರಂಗದಲ್ಲಿ ಆತ್ಮನು ತನ್ನಲ್ಲಿ ಸುಖವಿಷಯಾನಂದವು ಪೆಗ್ಗಳಿಸಲು ಆನಂದಮಯಕೋಶ. ಮುಖಾನಂದವನ್ನು ಮಡಗಿಕೊಂಡಿರುವುದಕ್ಕೆ ವಿಷಯಾನಂದವೇ ಆಶ್ರಯವಾಗಿರುತಿಹುದು. ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಐದುಪ್ರಕಾರವಾದಕೋಶಂಗಳ ಹಸಿಗೆಯವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೧೪ಕ್ಕೆ ಮಂಗಳಮಹಾ.

---

## ಪಂಚಕ್ಲೇಶಂಗಳು.

ಇನ್ನು ಪಂಚಕ್ಲೇಶಂಗಳು ಶರೀರಸಂಬಂಧಿಗಳಾದಾತ್ಮರುಗಳಲ್ಲಿ ಐದುಪ್ರಕಾರವಾದ ದುಖಂಗಳೆಂದುಂಟಾಗಿರುತಿಹವು. ಅವರ ಸ್ವಸ್ವರೂಪವಂ ಪೇಳುತಿಹರು. ಅವಾವೆಂದೊಡೆ—ಅನಾದಿಪ್ರಕೃತಿ, ನೀರನಾದಿಯ ಮಾಡಿಕೊಂಡು ಪಾಂಸೆತೋರುವಹಾಂಗೆ ಆತ್ಮನಾದಿಯಮಾಡಿಕೊಂಡು ತೋರುವದೇ ಅನಾದಿವಾಯಿಯು. ಮಲ-ಆ ಮಾಯಾಸಂಬಂಧ

ವಾದ ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮೂರುಮಲಂ
ಗಳು ಸಂಸಾರಕ್ಕೆ ಆ ಮಲಸಂಬಂಧವಾದ ಹೊನ್ನು, ಹೆಣ್ಣು, ಮಣ್ಣು
ಪುತ್ರ, ಮಿತ್ರ, ಕಳತ್ರರಾದಿಸಂಸ್ಕೃತಿಗಳು ಹುಟ್ಟುವುದಕ್ಕೆ ಪಂಚಕ್ಲೇಶ
ವೇ ಅವಿದ್ಯಾದ್ಯೈದು ದುಃಖಂಗಳೇ ಮೂಲ, ಮುಖ್ಯವಾಗಿರುತಿಹವು. ಆ
ವಾವೆಂದೊಡೆ—ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶವೆಂಬ
ವೃತಾವೇ ಪಂಚಕ್ಲೇಶಂಗಳು. ಇವಕ್ಕೆ ವಿಚಾರವಾಗಿ ಹಸಿಗೆಯುವಾಡಿ
ನಿರೂಪಿಸುತಿಹರು. ಪ್ರಥಮದಲ್ಲಿ ಅವಿದ್ಯೆಯೆಂಬ ಕ್ಲೇಶಸ್ವರೂಪವನ್ನೇ
ನಿರೂಪಣವ ಪಾಲಿಸುತಿಹರು. ಅವಿದ್ಯೆಯೆಂಬ ದುಃಖಸ್ವರೂಪವು ಹ್ಯಾ
ಗಿಪ್ಪುದೆಲೆಸ್ವಾಮಿಯೆಂದು ಬೆಸಗೊಂಡೊಡೆ—ಚಿದ್ರೂಪವೆಂಬುದಂ ಕೆಡಿ
ಸಿ ನಾನಾದಿಯಲ್ಲಿ ಚಿತ್ಸ್ವರೂಪವೊಬಂತ ಭಾವವನ್ನು ವಿನಾಶನವಮಾ
ಡಿಸಿ ಆನಂದವೆಂಬ ಲಿಂಗಾಂಗಸಮರಸ ಸಾನಂದವೆಂದು ಹೇಳುವ ಸುಖ
ಮಂ ಪರಿಣಾಮವನ್ನು ಮರೆಸಿ ವಿಮೋಚನಮಾಡಿಸಿ ಎಡೆಬಿಡುವಿಲ್ಲದಿರು
ಹ ಶಿವತತ್ವಕ್ಕೂ ತನಗೂ ವಹ್ನಿ ಉಷ್ಣದಂತೆಯೂ, ಚಿನ್ನಬಣ್ಣದಂ
ತೆಯೂ, ಪುಷ್ಪಪರಿಮಳದಂತೆಯೂ, ಆಕಾಶಮಾರುತನಂತೆಯೂ, ಸ
ತ್ತು ಚಿತ್ತುವಿನಹಾಂಗೆ ಭಿನ್ನವಿಲ್ಲವೆಂದು ತಿಳಿವ ಅವಿರಳಜ್ಞಾನಸ್ವಭಾವವ
ನ್ನೇ ನಾನೆಂಬಭಾವವನ್ನು ವಿಸರ್ಜನವ ಮಾಡಿಸಿ ನಾನು, ಜೀವನು, ನಾ
ನು ಮತ್ತೆಂತಾತನೈಯ್ಯ ಯೆಂದೊಡೆ, ಜೀವನು ೨೪, ೭೪ ತತ್ವಂಗಳ
ವ್ಯಾಪಾರಂಗಳೊಡನೆ ಕೂಡಿ ಚರಿಸುವಂತಾ ಆತ್ಮನವರ್ತನೆಯುಳ್ಳಾತನೇ
ನಾನು. ಆತ್ಮನು ಮತ್ತೆಂತಾತನೈಯ್ಯ ಯೆಂದೊಡೆ, ಸಂಸಾರಿ, ಸ್ಥೂ
ಲಸೂಕ್ಷ್ಮ ಸಕಲಸಂಸ್ಕೃತಿಗಳೊಡನೆ ಕೂಡಿ ಚರಿಸುವಂತಾ ಗಾಂಪದಾ
ಯು, ನಾನು ಆತ್ಮನು ಮತ್ತೆಂತಾತನೆಂದೊಡೆ, ಪಾಶಬದ್ಧನು. (ಶ್ಲೋ॥
ಘೃಣಾಲಜ್ಜಾಭಯುಂಶಂಕಾ ಜಿಗುಪ್ಸಮಿತಿಪಂಚಕಂ । ಕುಲಂಚಲಂತದಾ
ಚಾರ ಮಷ್ಟಪಾಶಾಃಪ್ರಕೀರ್ತಿತಾಃ ॥) ಎಂದು ಹೇಳುತಿಹುದಾದಕಾರ
ಣ ಆ ಅಷ್ಟಪಾಶ, ನವಪಾಶ, ಪಂಚಪಾಶಂಗಳಲ್ಲಿ ಕಟ್ಟುವಡೆದಿರುವಂತಾ
ಬದ್ಧಜೀವನು ನಾನು, ಬದ್ಧಜೀವನು ಆತ್ಮನು, ಮತ್ತು ಎಂತಾತನೆಂ
ದೊಡೆ—ಪಶುವೆನಿಸುವನು, ಏನೇನೂ ಅರಿಯದಮೂಢನೆಂದೇ ನುಡಿಸು
ವ ಅಜ್ಞಾನಮರವೆಯೇ ಅವಿದ್ಯೆ. ಅವಿದ್ಯೆಯೆಂಬ ಕ್ಲೇಶವು ಹ್ಯಾಗಿಪ್ಪು
ದೆಂದು ತಿಳಿಯಬೇಡ, ಹೀಗಿಪ್ಪುದೆಂದು ಕೈದೋರಿಕೆಯಾಗಿ ಕಾಣಿಸಿಕೊ
ಡುತಿಹವು. ಈ ಅಜ್ಞಾನದಿಂದ ಕಾಣಿಸಿದ ಸ್ಥೂಲಸೂಕ್ಷ್ಮಸಂಸ್ಕೃತಿಗಳ

ವಿಷಯದ ಇಂದ್ರಿಯಪ್ರಪಂಚಗಳ ಸುಖವೆಂಂ ಪರಿಣಾಮವನ್ನು ನಾನು ಆತ್ಮನೆಂದು ಯಾವಕಾಲಕ್ಕೂ ಬಿಡದೆ ಅಹಂಭಾವದ ನಾನು ನನ್ನದೆಂಬ ಗರ್ವಭಾವದ ತೊಡಕಿನ ಬಂಧನದ ಸುಖದಪರಿಣಾಮವೇ ಅಸ್ಮಿತೆ. ಅ ಸ್ಮಿತೆಯೆಂಬ ಕ್ಲೇಶವು, ಈಪ್ರಕಾರದಿಂದ ಹೇಳಲ್ಪಟ್ಟ ಇಂದ್ರಿಯಪ್ರಪಂ ಚಗಳ ಪರಿಣಾಮವನ್ನುಮೆಚ್ಚಿ ವೈರಾಗ್ಯಭಾವದಿಂದ ವಿಸರ್ಜಿಸಲಾರದೆ ಚಿಂತಿಸುವ ಈ ಸಂಸಾರಪ್ರಪಂಚವು ಯಾವಪ್ರಕಾರದಿಂದ ಬಂದು ದೊ ರಕೊಂಡಿತಲ್ಲೆಂದು ಆಲೋಚಿಸುವ ಬುದ್ಧಿಯನುಳ್ಳದೇ, ಅದಕೊಂದು ಯತ್ನವುಂಟಾದುದೇ ರಾಗ. ರಾಗವೆಂಬ ಕ್ಲೇಶವು, ಈ ಸಂಸಾರವನ್ನು ಇಂದ್ರಿಯ ವಿಷಯಪ್ರಪಂಚವನ್ನು ಪ್ರೀತಿಯಿಂದ ಹಿಡಿದು ಬಲ್ಲಿದರ ಬಳಿ ಯನಾಶ್ರೈಸಿ ದೃಢವಿಡಿದು ತಾಬಿಟ್ಟರೂ ಇವುಬಿಡದೆ ನೋವುಮಾಡಬಾ ರದ ದುಃಖಕರ್ಮವ ಮಾಡಿ ಘಾಸಿಯಾಗುವ ದುಃಖವನುಳ್ಳದ್ದೇ ನೋ ವು. ಉಂಟಾದುದ್ದೇ ದ್ವೇಷ, ದ್ವೇಷವೆಂಬ ಕ್ಲೇಶವು ಈಪ್ರಕಾರದಿಂ ದ ಹಲವುಪ್ರಕಾರವಾದ ಇಂದ್ರಿಯ ವಿಷಯಂಗಳ ಸುಖವನ್ನು ಮೆಚ್ಚಿ ಬಿಡಲಾರದೆ ಅವು ಬಿಟ್ಟರೂ ತಾಬಿಡಲಾರದೆ ಚಿತ್ತದ ದುಃಖವನುಳ್ಳದೇ ನೋವು, ಉಂಟಾದುದೇ ಅಭಿನಿವೇಶ, ಅಭಿನಿವೇಶವೆಂಬ ಕ್ಲೇಶವು ಈ ಪ್ರಕಾರದಿಂದೀಅವಿದ್ಯಾದ್ಯೈದು ದುಃಖಗಳೇಬೆಳೆದು ವರ್ಧನವಾಗಿಯೆಂ ಬಲ್ಲಿ ಅವಿದ್ಯೆಯೊಂದು ಗಡ್ಡೆಯಾಗಿ, ಅಸ್ಮಿತೆಯೇ ಒಂದುಮೊಳಕೆಯಾಗಿ, ರಾಗವೇ ಒಂದುಬಳ್ಳಿಯಾಗಿ ದ್ವೇಷವೇ ಒಂದು ಪತ್ರಪುಷ್ಪಂಗಳಾಗಿ ಅ ಭಿನಿವೇಶವೇ ಕಾಯಿಹಣ್ಣುಗಳಾಗಿ ಇಂತೊಪ್ಪದೊಂದು ಸಂಸಾರವೆಂಬ ಲತೆಯು ಬೆಳೆದು ಪಲ್ಲವಿಸಿ ಮಡಲರಿದು ಸರ್ವಜೀವರುಗಳಲ್ಲಿಯೂ ಉದು ಗಿಕೊಂಡಿಹುದು. ಸಕಲಾತ್ಮರುಗಳಂತರಂಗದಲ್ಲಿಯೂ ಗೋಪ್ಯವಾಗಿ ರುತಿಹುದು. ಈಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ ಪಂಚ ಕ್ಲೇಶಂಗಳಭೇದದ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿ ಗಳು.

ಅಂತು ಕಟ್ಟು ೬೬ಕ್ಕೆ ಮಂಗಳಮಹಾ.

## ಅಂಗಚತುಷ್ಟಯಗಳು.

ಇನ್ನುಮುಂದೆ ಅಂಗಚತುಷ್ಟಯಂಗಳು ಶರೀರಸಂಬಂಧಿಗಳಾದಾತ್ಮರುಗಳಲ್ಲಿ ನಾಲ್ಕುಪ್ರಕಾರವಾದಂಗಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ, ಅಂಗ=ಅಂಗವೆಂದು, ಪ್ರತ್ಯಂಗ=ಆತ್ಮನಿಗೆ ಪೃಥಕ್ಕರವಾದಂಗವೆಂದು, ಸಾಂಗಾಂಗ=ಆತ್ಮನೊಡನೆ ಕೂಡಿದಂಗವೆಂದು, ಉಪಾಂಗ=ಆತ್ಮನಿಗುಪಮೆಯಾದಂಗವೆಂದು, ಈ ಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾವೇ ಅಂಗಚತುಷ್ಟಯಂಗಳು. ಇವಕ್ಕೆ ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಆ ಅಂಗಚತುಷ್ಟಯಂಗಳೊಳಗೆ ಪ್ರಥಮದಲ್ಲಿ ಆಯುವಾದಂಗಂಗಳ ಸ್ವರೂಪವನ್ನೇ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ, ಶಿರಸ್ಸು, ಊರುದ್ವಯ, ಭುಜದ್ವಯ, ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಅಂಗಗಳು, ಆತ್ಮನು ಹುಟ್ಟುವಲ್ಲಿ ಹೊಂದುವಲ್ಲಿ ಅವೆಯುವಾದಂಗಂಗಳಾಗಿರುತಿಹವು: ಅದು ಹ್ಯಾಗೆಂದೊಡೆ, ಒಬ್ಬಾನೊಬ್ಬ ಭಾವಚಿತ್ರಕನು ಭಿತ್ತಿಯುಪಟಂಗಳಮೇಲೆ ಚಿತ್ರವಂಬರೆವಲ್ಲಿ ಮೊದಲು (ಸರ್ವಸ್ಯಗಾತ್ರಸ್ಯಶಿರಃಪ್ರಧಾನಂ) ಎಂದು ಹೇಳುತಿಹುದಾದಕಾರಣ ಶಿರಸ್ಸು ಹುಟ್ಟಿಸಿಕೊಂಡುಕಡೆಯಲ್ಲಿ ಆ ಶಿರಸ್ಸಿಗೆ ತಕ್ಕವೆಸುವಂಗಳನ್ನು ತಿದ್ದಿಕೊಳ್ಳುತಿಹನೆಂಬ ಹಾಂಗೆ ತಾಯಿಯ ಕುಕ್ಷಿಯೊಳಗೂ ಶಿಶು ಪುಟ್ಟುವಾಗಳು ತಿಂಗಳೊಂದಕ್ಕೆ ಶಿರತ್ತೋರ್ಪುದು. ತದನಂತರದಲ್ಲಿ ಎರಡು ಭುಜಗಳು ಹುಟ್ಟುತಿಹವು. ತದನಂತರದಲ್ಲಿ ಮೊಳ ಕಣ್ಣಿನಸ್ಥಾನಂಗಳು ಹುಟ್ಟುತಿಹವು. ತದನಂತರದಲ್ಲಿ ಸರ್ವಾಂಗವೆಲ್ಲವೂ ಸಂಪೂರ್ಣವಾಗುತಿಹವು. ಅದುಕಾರಣವಾಗಿ ಆತ್ಮನು ಹುಟ್ಟುವಲ್ಲಿಯೂ ಬೆಳೆಯುವಲ್ಲಿಯೂ ಆಯುವಾದಂಗಂಗಳಾಗಿರುತಿಹವು. ಇನ್ನು ಹೊರಡುವಲ್ಲಿಯೂ ಆಯುವಾದಂಗಂಗಳಾಗಿರುತಿಹವು. ಅದು ಹ್ಯಾಗೆಂದೊಡೆ, ಏನಾದರೊಂದು ರಾಜಭಯ ಚೋರಭಯಂಗಳಿಂದ ಶಿರಚ್ಛೇದನವಾದಲ್ಲಿ ಎರಡುಮೊಳ ಕಣ್ಣಿನಸ್ಥಾನದಲ್ಲಿ ವೆಯುಷ್ಟು ಗಾಯತಾಗಿದಲ್ಲಿ ಎರಡುಬಾಹುಗಳ ಹರಿಯುಹೋದ್ದಲ್ಲಿ ಆತ್ಮನು ಘಟವ ಬಿಟ್ಟುಹೋಗುತಿಹನು. ಅದುಕಾರಣವಾಗಿ ಆತ್ಮನು ಹುಟ್ಟುವಲ್ಲಿಯೂ ಹೊಂದುವಲ್ಲಿಯೂ ಆಯುವಾದಂಗಂಗಳಾಗಿರ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ವದನ=ಮುಖಮಂಡಲವು, ನಾಸಿಕ, ಕರ್ಣ, ಅಧರ, ಲೋಚನ, ಹಸ್ತ, ಪಾದಾದಿಪ್ಪತ್ತು ಬೆರಳುಗಳು

ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಪ್ರತ್ಯಂಗ. ಆತ್ಮನಿಗೆ ಪೃಥಕ್ಕರವಾದಂಗಂಗಳಾಗಿರುತಿಹವು. ಅದು ಹ್ಯಾಗೆಂದೊಡೆ, ಏನಾದರೊಂದು ರಾಜಭಯ ಚೋರಭಯಂಗಳಿಂದ ಮುಖದಮೇಲೆ ಗಾಯತಾಕಿದಲ್ಲಿಯೂ, ನಾಸಿಕಛೇದನವಾದಲ್ಲಿಯೂ, ಕಿವಿಗಳ ಹರಿಹೋಯಿದಲ್ಲಿಯೂ, ತುಟಿಗಳ ಛಿದ್ರಿಸಿದಲ್ಲಿಯೂ ಕಣ್ಣುಗಳೂನವಾದಲ್ಲಿಯೂ, ಹಸ್ತ ಪಾದ ಬೆರಳುಗಳು ಹರಿಯುಹೋಯಿದಲ್ಲಿಯೂ, ಆತ್ಮನು ಘಟವಬಿಟ್ಟು ಹೋಗದ ಮತ್ತೊಂದಭಿಧಾನವ ತಾಳಿಕೊಂಡು ಘಟದೊಳಗೆ ಜೀವಿಸಿಕೊಂಡಿರುತಿಹನು. ಅದುಕಾರಣವಾಗಿ ಇನ್ನು ಆತ್ಮನಿಗೆ ಪೃಥಕ್ಕರವಾದಂಗಂಗಳಾಗಿಪ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಕರಣಚತುಷ್ಟಯಂಗಳು, ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕುಪ್ರಕಾರವಾದ ಕರಣಂಗಳು ಸಾಂಗಾಂಗ, ಆತ್ಮನೊಡನೆ ಕೂಡಿದಂಗಂಗಳಾಗಿರುತಿಹವು. ಅದು ಹ್ಯಾಗೆಂದೊಡೆ, ಆತ್ಮನು ಘಟವಿದು ಹುಟ್ಟುವಲ್ಲಿಯೂ ಆತ್ಮನೊಡನೆಹುಟ್ಟಿ ಆತ್ಮನು ಘಟದೊಳಗೆ ಜೀವಿಸಿಕೊಂಡಿರುವಪರ್ಯಂತರವೂ ಆತ್ಮನ ಸಕಲ ವ್ಯವಹಾರಂಗಳಿಗೆ ತಾವೇ ಸಹಾಯಂಗಳಾಗಿ ಆತ್ಮನು ಘಟವಬಿಟ್ಟು ಹೋಗುವಾಗಲೂ ಒಂದಾನೊಂದು ಸೂರ್ಯನೊಡನೆ ಸೂರ್ಯನ ಕಿರಣಂಗಳೈದುವವಹಾಂಗೆ ಆತ್ಮನೊಡನೈದಿಹೋಗುತಿಹವು. ಅದುಕಾರಣವಾಗಿ ಇವು ಆತ್ಮನೊಡನೆ ಕೂಡಿದಂಗಂಗಳೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ವಸ್ತ್ರ-ಚೀನಿ, ಚೀನಾಂಬರ, ಪಟ್ಟೆ, ಪಟ್ಟಾವಳಿ, ಸೋಪು, ಸಕಲಾತಿ, ಸಣ್ಣಬಣ್ಣ, ಹಳದಿ, ಹಸುರು, ಕರಿದು, ಬಿಳಿದು, ಕೆಂಪು ಮೊದಲಾದ ದಿವ್ಯದುಕೂಲಂಗಳು, ಆಭರಣ-ಉಂಗುರ, ಉಡುದಾರ, ಗಂಟೆ, ಚವುಕಳಿ, ಕಡಗ, ಕಂಠಮಾಲೆ, ಹಾರ, ಹೀರಾವಳಿ, ಉತ್ತರಿಕೇಸರ, ಬಿಲ್ಲೇಸರ, ಹಸ್ತಕಡಗ, ಹವಿಸ್ಮಾರತಾಯತ, ವಜ್ರಪದಕ ಮುಂತಾದ ದಿವ್ಯಭೂಷಣಂಗಳು ಇವೇ ಮೊದಲಾದ ಪರಛಾಯಾಶೃಂಗಾರವೇ ಉಪಾಂಗ, ತೊಟ್ಟಲ್ಲಿಯೇ ಭೂಷಣವಾಗಿ ಕಡೆಗೆ ತೆಗದಿಟ್ಟಲ್ಲಿಯೇ ಬೇರೆಯಾಗಿರುತಿಹುದಾದಕಾರಣ ಇವು ಆತ್ಮನಿಗುಪಮೆಯಾದಂಗಂಗಳಾಗಿಪ್ಪವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಅನುಲೇಪನ-ಗಂಧ, ಕಸ್ತೂರಿ, ಪುನುಗು, ಜವ್ವಾಜಿ, ಶಿಲಾರಸ, ಕಮ್ಮೆಣ್ಣ ಮುಂತಾದ ಪರಿಮಳ ದ್ರವ್ಯಂಗಳು ಇವು ಮೊದಲಾದ ಪರಛಾಯಾಶೃಂಗಾರವೇ ಉಪಾಂಗವು ಧರಿಸಿದಲ್ಲಿ ಭೂಷಣವಾಗಿ ಧರಿಸದಿದ್ದಲ್ಲಿ ಬೇ

ಶಿಯಾಗಿರುತಿಹುದಾದಕಾರಣ ಇವು ಆತ್ಮನಿಗುಪಮೆಯಾದಂಗಂಗಳೆಂಸ್ತೀ ತಿಳಿದುಕೊಂಬುವುದು ತತ್ವಜ್ಞಾನಿಗಳು. ಈಪ್ರಕಾರದಿಂದ ಹೇಳಲ್ಪಟ್ಟ ಇವುತಾವೇ ಅಂಗಚತುಷ್ಟಯಂಗಳಭೇದ ಹಸಿಗೆಯ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೨೩ಕ್ಕೆ ಮಂಗಳಮಹಾ.

## ಗು ಣ ತ್ರ ಯಂ ಗ ಳು.

ತದನಂತರದಲ್ಲಿ ಗುಣತ್ರಯಂಗಳು ಶರೀರಸಂಬಂಧಿಗಳಾದಾತ್ಮರುಗಳಲ್ಲಿ ಮೂರುಪ್ರಕಾರವಾದ ಗುಣತ್ರಯಂಗಳೆಂದುಂಟಾಗಿರುತಿಪವು, ಅವರ ಸ್ವಸ್ವರೂಪಮಂ ಪೇಳುತಿಹರು. ಆವಾವೆಂದೊಡೆ, ಸತ್ವ, ರಜಃ, ತಮಃ ಎಂಬ ಇವುತಾವೇ ಗುಣತ್ರಯಂಗಳು. ಇವಕ್ಕೆ ವಿವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಸತ್ವಗುಣಕ್ಕೆ-ಶ್ವೇತವರ್ಣ, ಒಂದಾನೊಂದು ಬೆಳ್ಳಿಯ ಗುಂಡಿನೋಪಾದಿಯಲ್ಲಿ ಧವಳವರ್ಣದ ಕಾಂತಿಯುಂಟಾಗಿರುತಿಹುದು. ರಜೋಗುಣಕ್ಕೆ-ರಕ್ತವರ್ಣ, ಒಂದಾನೊಂದು ತಾಂಬ್ರದ ಗಟ್ಟಿಯೋಪಾದಿಯಲ್ಲಿ ಶೋಣವರ್ಣದಕಾಂತಿಯುಂಟಾಗಿರುತಿಹುದು. ತಮೋಗುಣಕ್ಕೆ-ಕಪ್ಪುವರ್ಣ, ಒಂದಾನೊಂದು ಅಯಃಕಾಂತದ ಮುದ್ದೆಯೋಪಾದಿಯಲ್ಲಿ ಕಾಡಿಗೆವರ್ಣದ ಕಾಂತಿಯುಂಟಾಗಿರುತಿಹುದು. ಇನ್ನು ಮುಂದೆ ಆ ವಿಚಾರವನ್ನು ಗ್ರಂಥಾರ್ಥದಲ್ಲಿ ವಿಸ್ತಾರವಾಗಿ ನಿರೂಪಿಸುತಿಹರು. ಸತ್ಯ, ಜ್ಞಾನ, ತಪಃ, ಮೌನ, ವಿವೇಕ, ಕ್ಷಮೆ, ಸಾಹಸ, ಹರುಷ, ನಿಶ್ಚಯ, ಧೈರ್ಯವೆಂಬ, ಸಾತ್ವಿಕಂ-ಸತ್ವಗುಣವೆನುಳ್ಳ ಪುರುಷರುಗಳಲ್ಲಿ ತೋರುವ ಗುಣಪಾತ್ರಂಗಳ ಲಕ್ಷಣವು ಇವುಗಳನ್ನು ವಿಸ್ತರಿಸಿ ನಿರೂಪಿಸುತಿಹರು. ಸತ್ಯ (ಏಕಮೇವವಾಕ್ಯಂದ್ವಂದ್ವಂನಸ್ಯಾತ್) ಎಂದು ಹೇಳುತಿಹುದಾದಕಾರಣ ನುಡಿದಮಾತಿಂಗೆ ತಪ್ಪದೆ ಹಿಡಿದಾಚರಣೆಯಬಿಡದೆ ಯಥಾಸ್ಥಿತಿಯಾದ ನಡವಳಿಯೊಡನೆಕೂಡಿ ಆಚರಿಸುವುದೇ ಸತ್ಯವು. ಮತ್ತಂತೆಮಲ್ಲದೆ ಇಂದ್ರಿಯತೂರವವದ್ಯೈವ, ಬಂಧುವಬಿಟ್ಟವದ್ಯೈವ, ಎಂದೆಂಪು ಹುಸಿಯ ನುಡಿಯುದವದ್ಯೈವ, ಲೋಕಕ್ಕೆ ಇಂದುಧರನೇದ್ಯೈವವೆಂದು ಹೇಳುತಿಹುದಾದಕಾರಣ ಅರಿದುಸುರದಾದರೂ ಎಂದೆಂದು ಸಟೆಯ ನುಡಿಯದಿಹುದೇ ಸತ್ಯವು. ಅನೇಕ ಮಾಣಿಕ್ಯವ ಕೊಟ್ಟೇನೆಂದರೂ, ಹಿ

ಛೇದನವಾದರೂ, ದೇಹವಿಭಾಗವಾದರೂ ಸಟೆಯನುಡಿಯದೆ ಪಾರಮಾ ರ್ಥಪ್ರಸಂಗವನಾಡುತಿಹುದೇ ಸತ್ಯವು. ಜ್ಞಾನ-(ಉತ್ತಮಂತತ್ವಚಿಂತಾನಾಂ) ಎಂದು ಹೇಳುತಿಹುದಾದಕಾರಣ ಕಾಕುಗೋಷ್ಠಿಗಳೆಂಬಿಟ್ಟು ಸದಾ ನಿತ್ಯಾನಿತ್ಯವಿವೇಕದ ಪರಾಂಬರಿಕೆಯೊಡನೆ ಕೂಡಿರುವಂತಾದ್ದೇ ಜ್ಞಾನವು. ತಪಃ-ಊರತೊರದು ಘೋರಾರಣ್ಯಕ್ಕೆಹೋಗಿ ಫಲಾಹಾರ, ಪರ್ನಾಹಾರ, ಪವನಾಹಾರ, ಜಲಾಹಾರ, ಶಿಲಾಹಾರ, ಉಕ್ಕಿನ ಚೂರ್ಣಂಗಳಂಕೊಂಡು ಕೋಡುಗಲ್ಲಮೇಲೆ ಪಂಚಾಗ್ನಿಮಧ್ಯದಲ್ಲಿ ಏಕಪಾದಸ್ಥಿತನಾಗಿನಿಂದು ಉಗ್ರತಪವಂ ಮಾಡುವುದೇ ತಪವು. ಮತ್ತಂತುಮಲ್ಲದೆ ಇಂದ್ರಿಯಂಗಳ ನಿಗ್ರಹಿಸಿಕೊಂಡು ಜಿತೇಂದ್ರಿಯನಾಗಿ ಶಿವಪೂಜೆಯಂಮಾಡಿಕೊಂಡು ಸದಾ ಶಿವಜ್ಞಾನವಮುಂದುಗೊಂಡು ಇರುವಂತಾದ್ದೇ ತಪವು. ಇನ್ನು ಗೃಹಸ್ಥಾಶ್ರಮಿಗಳಿಗೆ ತಪಸ್ಸಾವುದೈಯ್ಯಾ ಎಂದೊಡೆ, ಏಕಪತ್ನೀವ್ರತಭಾವವ ಮುಂದುಗೊಂಡಿರುವುದೇ ತಪವು. ಮತ್ತಂತುಮಲ್ಲದೆ ಕಂಭ, ಕುಂಭ, ಹಂದರ, ಹಸೆಜಗುಲಿ, ಕುಲದೈವ, ಮನೇದೈವ, ದೇವಭಕ್ತರು, ಕಲಶ, ಕನ್ನಡಿಸಾಕ್ಷಿಯಾಗಿ ಕೈವಿಡಿದಾಕೆಯೇ ತನ್ನ ಸ್ತ್ರೀಯಲ್ಲದೆ ಮಿಕ್ಕಿನವರೆಲ್ಲಾ ತನ್ನ ಮಾತೃಸಮಾನರೆಂದು ತಿಳಿದು ಆಚರಿಸುವುದೇ ತಪವು. ಮೌನಂ-(ಮೌನೇನಕಲಹೋನಾಸ್ತಿ) ಎಂದು ಹೇಳುತಿಹುದಾದಕಾರಣ ಕಲಹೋನಾಸ್ತಿಯಾಗಿ ವಾಙ್ನಿಯಮವ ಮುಂದುಗೊಂಡಿರುವುದೇ ಮೌನವು. ಹರುಷವು-ಸುಖವೊಂದು ಕೋಟಾನುಕೋಟಿಗಳು, ದುಃಖವೊಂದು ಕೋಟಾನುಕೋಟಿಗಳು ಬಂದುತಟ್ಟಿದರೂ ಆಗುವಂತೆ ಆದೀತು, ಹೋಗುವಂತೆ ಹೋದೀತು ಎಂದು ಕಂದದೆ ಕುಂದದೆ, ಮುಖದಲ್ಲಿ ಕಳಕಳನೆ ನಗುತ್ತಂತರಂಗದಲ್ಲಿ ಲವಲವಿಕೆಯ ಮುಂದುಗೊಂಡಿರುವಂತಾ ಸಂತೋಷವೇ ಹರ್ಷವು. ಕ್ಷಮೆ-ಒಬ್ಬರೊಂಪಂದಲ್ಲಿಯೂ, ಆಡಿದಲ್ಲಿಯೂ, ಕೊಂದಲ್ಲಿಯೂ, ಒಡಿದಲ್ಲಿಯೂ, ಜರಿದಲ್ಲಿಯೂ, ಝುಂಕಿಸಿದಲ್ಲಿಯೂ, ಏಹವಿಕ್ಕಿ ನುಡಿದಲ್ಲಿಯೂ ಮನಸ್ಸಿಗೆತಾರದೆ ತಾಳಿಕೊಂಡು ಹೋಗುವಂತಾ ಸರ್ವಸಮ್ಮತಭಾವವೇ ಕ್ಷಮೆಯು. ಸಾಹಸ-ಸಾವಿರಮುಖದಲ್ಲಿ ಬಂದ ಕಂಟಕವನ್ನಾದರೂ ಏಕಮುಖದಲ್ಲಿ ತೀರ್ಚಿ ಕಳೆದೇನೆಂಬಂತಾ ಸಾಮರ್ಥ್ಯತ್ವವೇ ಸಾಹಸವು. ನಿಶ್ಚಯವು-ಕೋಡುಗಲ್ಲಮೇಲಿದ್ದರೂ ಹುಟ್ಟಿಸುವ ಶಿವನು ಹುಟ್ಟಿಸಿನಲ್ಲದೆಬಿಡನು, ಇದಕ್ಕೆ ಮನೋಕಕ್ಕುಲತೆಯಾಕೆಂದು ಅಂತ

ರಂಗದಲ್ಲಿ ದೃಢಭಾವನ ಮುಂದುಗೊಂಡಿರುವಂತಹದ್ದೇ ನಿಶ್ಚಯವು. ಧೈರ್ಯ-ದಿವಾಕಾಲ ನಿಶಾಕಾಲಂಗಳಲ್ಲಿ ಭೂತ ಪ್ರೇತ ಭೇತಾಳ ಬ್ರಹ್ಮರಾ ಕ್ಷಸರಂ ಕಂಡರೂ ಹೆದರದೆ ಇರುವಂತಾ ಪರಮದಿಟ್ಟತನವೇ ಧೈರ್ಯವು. ವಿವೇಕ-ನಡೆವಲ್ಲಿಯೂ, ನುಡಿವಲ್ಲಿಯೂ, ಕೊಡುವಲ್ಲಿಯೂ, ಕೊಂಬಲ್ಲಿ ಯೂ, ಉಂಬುವಲ್ಲುಡುವಲ್ಲಿಯೂ, ಇಡುವಲ್ಲಿಯೂ ಮಲಗುವಲ್ಲೇಳುವಲ್ಲಿ ಯೂ, ಸರ್ವಾವಸ್ಥೆಗಳಲ್ಲಿಯೂ ವಿಚಾರಪರಾಯಣನಾಗಿರುವಂತಾದ್ದೇ ವಿವೇಕವು. ಮತ್ತಂತುಮಲ್ಲದೆ ಸದಾ ಸದ್ವಸ್ತುವಿಚಾರದಲ್ಲಿ ಪರಾಯಣ ನಾಗಿರುವಂತಾದ್ದೇ ವಿವೇಕವು. ಈ ಹತ್ತು ಸಾತ್ವಿಕಗುಣಂಗಳು, ಈ ಸತ್ವಗುಣಂಗಳು ಯಾವಪುರುಷನಲ್ಲುಂಟಾಗಿರುತಿಹವೋ ಆತನು ಸಾತ್ವಿ ಕಪುರುಷನೆಂದೇ ತಿಳಿದುಕೊಂಬುವದು ತತ್ವಜ್ಞಾನಿಗಳು. ಇನ್ನುಮುಂ ದೆ ಆ ವಿಚಾರವನ್ನು ಗ್ರಂಥೋಕ್ತವಾಗಿ ನಿರೂಪಿಸುತಿಹರು. ರಜೋ ಗುಣವು-ಗರ್ವ, ಕ್ರೋಧ, ಅಹಂಕಾರ, ಸತಿಸಂಗ, ಪ್ರಳಾಪನ, ಅಪ್ರಿಯ ವಾಚಕವು, ಕೋಪವು, ಉದ್ಯೋಗವು, ಮತ್ಸರವೆಂದು ; ರಾಜಸಂ-ರಾ ಜಸಪುರುಷರುಗಳಲ್ಲಿ ತೋರುವ ಗುಣಚರಿತ್ರಂಗಳ ಲಕ್ಷಣವು ಇನ್ನು ಮುಂದೆವಿಸ್ತರಿಸಿ ನಿರೂಪಿಸುತಿಹರು. ಗರ್ವ-(ಗರ್ವಸ್ಯತುಂಗೆನಶಿರಸಾ ಎಂದು ಹೇಳುತಿಹುದಾದಕಾರಣ ಅಯ್ಯ, ಜೀಯ, ಬನ್ನಿ, ಚಿತ್ತೈಸಿ ಮುಹೂರ್ತವಮಾಡಿ ಎಂದುಕರೆದಲ್ಲಿ ನಾನು ಪೂಜ್ಯನು, ನೀನು ಸಾಮಾ ನ್ಯನು, ನನ್ನ ನೀಕರೆಯಲ್ತಕ್ಕವನೇ ಎಂದುದ್ಧಕ್ಕೆತ್ತಿದಶಿರಸ್ಸುಳ್ಳಾತನಾ ಗಿ ಇದಿರಲೆಕ್ಕಿಸದೆ ಒಂದಾನೊಂದು ಕುಳುಪಾನವ ಮಾಡಿದನರಿಯುಹಾಗೆ ಯೂ, ಹಳೆಯಸೀರೆಗೆ ಗಂಜಿಯಿಕ್ಕಿದಹಾಗೆಯೂ, ತೋದವರಸಿನಹಾಗೆ ಯೂ, ವಂಟೆಯುಕತ್ತಿನಹಾಗೆಯೂ, ನನಗ್ಯಾರುಸರಿ, ಗೇರುಮಡಿಕೆ ಮಸಿಯೆಂದು ಇದಿರಲೆಕ್ಕಿಸದೆ ಇರುವಂತಾದ್ದೇ ಗರ್ವವು. ಕ್ರೋಧ ಈ ಗರ್ವದಿಂದೇನುಪ್ರಯೋಜನವೆಂದು ಆರಾದರೂ ಸತ್ಪುರುಷರು ಮಾ ನ್ಯರುಗಳು ನೀತಿವಂತಾದ್ದೊಂದು ಪ್ರಸಂಗವ ಹೇಳಿದರೆ ನನಗೆ ನೀನು ಮೇಲುಬುದ್ಧಿಯ ಹೇಳಬಂದಿಯಾ ಯೆಂದು ಆರುಹಡದವಳಿಗೆ ಮೂರು ಹಡದವಳು ಮೊಲುಕು ಕಲಿಸುವಹಾಂಗೆಯೂ, ಅಜ್ಜಿಗೆ ಮೊಮ್ಮಗ ಕೆಮ್ಮು ಕಲಿಸುವಹಾಂಗೆಯೂ, ನಾನು ಸಕಲ ಭೇದಾನುಭೇದಗಳ ಬಲ್ಲಾತನು, ನನಗೆ ನೀನು ಮೇಲುಬುದ್ಧಿಯ ಹೇಳಲು ತಕ್ಕಾತನೆಂ ದು ಅವರಮೇಲೆ ಕಡುಕೋಪವ ಮುಂದುಗೊಂಡಿರುವುದೇ ಕ್ರೋಧ

ಅಹಂಕಾರ, ವಿದ್ಯೆದಲ್ಲಿಯೂ, ಬುದ್ಧಿಯಲ್ಲಿಯೂ, ಕುಲದಲ್ಲಿಯೂ, ಛಲದ. ಲ್ಲಿಯೂ, ಪಂಥದಲ್ಲಿಯೂ, ಪರಾಕ್ರಮದಲ್ಲಿಯೂ ನಾನೇ ಶ್ರೇಷ್ಠನೆಂದು ಗರ್ವಿಸುವದೇ ಅಹಂಕಾರವು. ವಿಷಯವಾದ, ಶಿವಶಾಸ್ತ್ರ ಶಿವಗೋಷ್ಠಿ ಗಳಂಬಿಟ್ಟು ಸದಾ ಸ್ಮರಶಾಸ್ತ್ರಾನುಗ್ರಾಹಕದೊಡನೆ ಕೂಡಿರುವ ವಿ ಷಯವಾದವೇ ಸತಿಸಂಗವು. ಅಪ್ರಿಯವಾಚಕವು-ನಿನ್ನಮಾತೆನಗೆ ಸೊ ಗಸದು, ತೆಗೆಯೆಂದಲ್ಲಿ ನಾನು ನಿನಗೆ ಹೇಳುವದಿಲ್ಲ, ಇತ್ತಗೋಡೆಗೆ ಹೇ ಳುತ್ತೇದನೆ ಎಂದು ಹಿತವಲ್ಲದ ಪ್ರಸಂಗವನಾಡುವಂತಾದ್ದೇ ಅಪ್ರಿಯವಾ ಚಕವು. ಉದ್ಯೋಗ-(ಉದ್ಯೋಗಂಪುರುಷಲಕ್ಷಣಂ) ಎಂದು ಹೇಳು ತಿಹುದಾದಕಾರಣ ಅಟ್ಟಿಯಮುರಿದು ಗಿರಿಗಟ್ಟಿಯಮಾಡುತ್ತಾ ಗಿರಿಗ ಟ್ಟಿಯಮುರಿದು ಅಟ್ಟಿಯಮಾಡುತ್ತಾ ಸದಾ ಒಂದು ವ್ಯವಸಾಯದೊಡ ನೆ ಕೂಡಿರುವಂತಾದ್ದೇ ಉದ್ಯೋಗವು. ಮತ್ಸರ-ಒರ್ವರ್ವರುಗಳ್ಲಿ ಗೊಂದೊಂದು ಪ್ರಸಂಗವು ಬಂದಲ್ಲಿ ದೇಹಧರ್ಮಗತಿಯಿಂದ ಬರುವದುಂ ಟಾದುದು ಎಂದು ನೀರಮೇಲಣಲಿಪಿಯಂತೆಯೂ, ಅಗಳಂತೆಯೂ, ಹೋ ಗದೆ ಒಂದಾನೊಂದು ಕಾಡಹಂದಿಯಹಾಗೆಯೂ, ಬೇಡನ ಹಗೆಯಹಾ ಗೆಯೂ, ಕಾಡಕೋಣನಹಾಗೆಯೂ, ಕಾಲೋರಗನಹಾಗೆಯೂ, ವ್ಯಾ ಘ್ರನಹಾಗೆಯೂ, ಅಂತರಂಗದಲ್ಲಿ ಆರುಮೂರುತಿಂಗಳು ದೀರ್ಘದ್ವೇಷ ವತಾಳಿಕೊಂಡಿರುವಂತಾದ್ದೇ ಮತ್ಸರವು. ರೋಷ-ತ್ರೂಪುರದಕೊಳ್ಳಿ ಯೋಪಾದಿಯಲ್ಲಿ ಅಷ್ಟಕ್ಕಿಷ್ಟಕ್ಕೂ ಚಿಟಚಿಟಗುಟ್ಟುವಂತಾ ಕಟ್ಟು ಗ್ರದ ಕಡುಕೋಪವೇ ರೋಷವು. ಈ ಎಂಟುರಾಜಸಗುಣಂಗಳು. ಈ ಗುಣಂಗಳು ಯಾವಪುರುಷನಲ್ಲುಂಟಾಗಿರುತಿಹವೋ ಆತನು ರಾಜ ಸಪುರುಷನೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಇನ್ನುಮುಂ ದೆ ಗ್ರಂಥೋಕ್ತವಾಗಿ ಆ ವಿಚಾರವನ್ನು ವಿಸ್ತಾರವಾಗಿ ನಿರೂಪಿಸುತಿ ಹರು. ತಮೋಗುಣ-ಅಜ್ಞಾನ, ಮೋಹ, ನಿದ್ರಾ, ಚಾಪಲ್ಯ, ಹೀನವೃ ತ್ತಿ, ಪಾಪಿಷ್ಠತ್ವವು, ಪರನಿಂದೆಯು, ಪರಹಿಂಸೆಯು ಇವುತಮೋಗುಣಂ ಗಳು. ಯಾವಪುರುಷನಲ್ಲಿ ಈ ಗುಣಗಳು ತೋರುವವೋ ಅವನನ್ನು ತಾಮಸಪುರುಷನೆಂದು ಹೇಳುವುದು. ಮುಂದೆ ವಿಸ್ತರಿಸಿ ನಿರೂಪಿಸು ತಿಹರು. ಅಜ್ಞಾನ-ತಾನಾರೆಂಬ ತನ್ನನಿಜವನರಿಯದಿಹತನವೇ ಅಜ್ಞಾನ ವು. ಮೋಹ-ಒಂದಾನೊಂದು ಅವುದುಕಚ್ಚಿದ ಶ್ವಾನನೋಪಾದಿಯ ಲ್ಲಿ ಸದಾಸತಿಸುತಾದಿಗಳಮೇಲಣ ಮಮಕಾರವು ಮುಂದುಗೊಂಡಿರುವ

ಷೇ ಮೋಹವು. ನಿದ್ರೆ-ಒಂದಾನೊಂದು ಉಪ್ಪುಕಂಡವತಿಂದ ನರಿಯೋಪಾದಿಯಲ್ಲಿ ಅನ್ನೋದಕಂಗಳನ್ನು ಯಥೇಷ್ಟವಾಗಿ ದೇಹಕ್ಕೆ ತೆಗದುಕೊಂಡು ಒಂದಾನೊಂದು ಹೂಡಿಬಿಟ್ಟ ಕುಂಟೆಯದಿಂಡಿನಹಾಗೆಯೂ, ಜೋಳದ ಹೇರಕೆಡಹಿದ ಕೋಣನಹಾಂಗೆಯೂ, ತರಿದು ಕೆಡಹಿದಸ್ಥಾಣುವಿನಹಾಂಗೆಯೂ, ತುರಕರಮನೆಯ ಹೆಣವಿನಹಾಂಗೆಯೂ, ಕುಂಭಕರ್ಣನಹಾಂಗೆಯೂ, ದಿವಾಕಾಲನಿಶಾಕಾಲಂಗಳಲ್ಲಿ ಹೊಡಗೆಡದು ಮಲಗಿರುವದೇಹದ ಅತಿಜಾಡ್ಯವು, ಚಾಪಲ್ಯ. ಆರಾದರೂ ಸತ್ಪುರುಷರು ನೀತಿಯಾದೊಂದು ಪ್ರಸಂಗವನ್ನಾಡಿದರೆ ಆಟಕಾರರಹಾಗೆಯೂ, ಮಠಪತಿಗಳಹಾಂಗೆಯೂ, ಜೈನಚಾರ್ವಾಕರಹಾಗೆಯೂ, ಅದಕ್ಕೆ ಆಗಹೋಗದಂತಾ ಒಂಭತ್ತುಮಾತ ಗಂಟಿಕ್ಕಿ ವಾಗ್ಬಂಧನವಮಾಡುವಂತಾ ವಾಕ್ಚಾತುರ್ಯವೇ ಚಾಪಲ್ಯವು. ಹೀನವೃತ್ತಿ-ವರ್ತನೆಯಲ್ಲದೆ ಹೀನವರ್ತನೆಯ ವರ್ತಿಸುವದೇ ಹೀನವೃತ್ತಿಯು. ಪರನಿಂದೆ-ಪಾತಕವಾವುದು ಒಬ್ಬರಲ್ಲೊಂದುಗುಣವನ್ನು ಕಣ್ಣಿನಿಂದ ನೋಡದೆ ಕಿವಿಯಲ್ಲಿ ಕೇಳದೆ ಮನದಲ್ಲಿ ಭೇದಿಸದೆ ಅಜ್ಞಾನಿ ಜಾರಚೋರನೆಂದು ಅವರಗುಣಾಗುಣಂಗಳನ್ನೆತ್ತಿ ದೂಷಣೆಯ ಮಾಡುವಂತಾದ್ದೇ ಪರನಿಂದೆಯು. ಹಿಂಸೆ-ನಿರಪರಾಧಿಪ್ರಾಣಿಗಳ ಕೊಲ್ಲುವಂತಾದ್ದೇ ಹಿಂಸೆಯು. ಪಾಪಿಷ್ಟತ್ವ-ನಿರಪರಾಧಿಪ್ರಾಣಿಗಳ ಕೊಂದರೆ ಪಾಪಬರುವದೆಂದು ಯಾರಾದರೂ ಸತ್ಪುರುಷರು ಹೇಳಿದರೆ ನಾಳೆಬರುವ ಪಾಪಯಿಂದೆ ಬರಲಿ, ಇಂದುಬರುವಪಾಪ ಈಹೊತ್ತೇ ಬರಲಿ, ಈಗಬರುವಪಾಪ ಈ ಕ್ಷಣವೇಬರಲಿ ಎಂದು ಕೊಂದಲ್ಲದೆ ಬಿಡೆನೆಂಬ ಪಾಪದಮೇಲಣ ಬಯಕೆಯೇ ಪಾಪಿಷ್ಟತ್ವವು. ಈ ಎಂಟೂ ತಾಮಸಗುಣಂಗಳು. ಈ ಗುಣಂಗಳು ಯಾವ ಪುರುಷನಲ್ಲಿ ಉಂಟಾಗುವದೋ ಆತನು ತಾಮಸಪುರುಷನೆಂದೇ ತಿಳಿದುಕೊಂಬುವುದು. ಈಪ್ರಕಾರದಿಂದ ಪೇಳಲ್ಪಟ್ಟ ಇವುತಾವೇ ಗುಣತ್ರಯಂಗಳ ಭೇದವೆಂದು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೨೪ಕ್ಕೆ ಮಂಗಳಮಹಾ.

——:(***):——

## ಅ ಹಂ ಕಾ ರ ತ್ರ ಯ ಂ ಗ ಳು .

ಇನ್ನು ಅಹಂಕಾರತ್ರಯಂಗಳು ಶರೀರಸಂಬಂಧಿಗಳಾದ ಆತ್ಮರುಗಳಲ್ಲಿ ತೋರುವ ಮೂರುಪ್ರಕಾರವಾದಹಂಕಾರಗಳೆಂದುಂಟಾಗಿರುತ್ತವೆ

ವು. ಅವರ ಸ್ವಸ್ವರೂಪವಂ ಪೇಳುತಿಹರು. ಅವಾವೆಂದೊಡೆ—ರಜಸಾ ಹಂಕಾರವೊದಲು ನಿರಾಕಾರವಾದ ಪರವುವಸ್ತುವಿನಿಂದ ಶಾಂತಿಶಕ್ತಿ-ಆ ಶಾಂತಿಶಕ್ತಿಯಿಂದ ಪರಬ್ರಹ್ಮವು, ಆ ಪರಬ್ರಹ್ಮದಿಂದ ಚಿತ್ತು, ಆ ಚಿತ್ತಿನಿಂದ ಅವ್ಯಕ್ತವೆಂಬುವುಪ್ಪ ಕಲೆ, ಆಕಲೆಯಿಂದ ಪ್ರಕೃತಿ, ಆ ಪ್ರಕೃತಿಯಿಂದ ಮಹತ್ತು, ಆ ಮಹತ್ತಿನಿಂದ ಮೂಲಾಹಂಕಾರವೂ ಪುಟ್ಟಿತು. ಅಂತಪ್ಪ ಮೂಲಾಹಂಕಾರವೇ ರಜೋಗುಣವನೆವ್ವಿುದಲ್ಲಿ ರಾಜಸಾಹಂಕಾರವೆಂದು, ತಮೋಗುಣವನೆವ್ವಿುದಲ್ಲಿ ತಾಮಸಾಹಂಕಾರವೆಂದು, ಸತ್ವಗುಣವನೆವ್ವಿುದಲ್ಲಿ ಸಾತ್ವಿಕಾಹಂಕಾರವೆಂದು ಇವುತಾವೇ ಅಹಂಕಾರತ್ರಯಂಗಳು. ಈ ಮೂರುಪ್ರಕಾರವಾದ ಹಂಕಾರಗಳಿಗೆ ವಿವರ, ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ರಾಜಸಾಹಂಕಾರದಿಂದ ರಜೋಗುಣಸಂಬಂಧವಾದ ಹಂಕಾರವು ಜೀವಾತ್ಮನಿಗಿಪ್ಪಕಿದ್ದಹಾಂಗೆ ಎತ್ತಾನೊಂದುವೇಳೆ ತಲೆದೋರುವುದು. ಆ ತಲೆದೋರಿದಲ್ಲಿ ಅಂತಪ್ಪ ಹಂಕಾರದಿಂದೇ ಶಬ್ದಾದಿ, ಶಬ್ದವಿಷಯವೇ ಮೊದಲಾದ ಪಂಚವಿಷಯಂಗಳು ಐದುತನ್ಮಾತ್ರೆಗಳು ಪುಟ್ಟಿದವು ಎಂಬಲ್ಲಿ ರಜೋಸಂಬಂಧವಾದ ಹಂಕಾರವೆಲ್ಲಿಂತ್ಯೆಯ್ಯಾ ಎಂದು ಬೆಸಗೊಂಡೊಡೆ, ರಾಜಾಧಿಪತಿಗಳಲ್ಲುಂಟಾಗಿರುತಿಹವು. ಒಬ್ಬಾನೊಬ್ಬ ರಾಜಾಧಿಪತಿಯು ಹಲವುಪ್ರಕಾರವಾದ ಗಾನಂಗಳಂ ಕೇಳಿಹೆನೆಂದರು ಉಂಟಾಗಿರುತಿಹುದು, ಪಟ್ಟೆ ಮಂಚ ಸುಪತ್ತಿಗೆಮೇಲೆ ಪವಡಿಸಿಹೆನೆಂದರುಂಟಾಗಿರುತಿಹುದು, ಚಿತ್ರವಿಚಿತ್ರವಾದಾಟಗಳನ್ನು ನೋಡಿಹೆನೆಂದುರುಂಟಾಗಿರುತಿಹುದು, ಷಡ್ರುಚಿಗಳನ್ನೂಟವಮಾಡಿಹೆನೆಂದರುಂಟಾಗಿರುತಿಹುದು, ಚಂಪಕಾದಿಕುಸುಮ ಚಂದನಾದಿಗಂಧಗಳಾಘ್ರಾಣಿಸಿಹೆನೆಂದರುಂಟಾಗಿರುತಿಹುದು, ಸಾತ್ವಿಕಾಹಂಕಾರದಿಂದ ಸತ್ವಗುಣಸಂಬಂಧವಾದ ಹಂಕಾರವು ಜೀವಾತ್ಮನಿಗಿಪ್ಪಕಿದ್ದಹಾಗೆ ಎತ್ತಾನೊಂದುವೇಳೆ ತಲೆದೋರುವುದು. ಆತಲೆದೋರಿದಲ್ಲಿ ಅಂತಪ್ಪ ಹಂಕಾರದಿಂದ ಸೂರ್ಯನೆಮೊದಲಾದ ದೇವತೆಗಳು ಪುಟ್ಟಿದರೆಂಬಲ್ಲಿ ಸತ್ವಗುಣಸಂಬಂಧವಾದ ಹಂಕಾರವೇ ಭಕ್ತಿಭಾವವು, ಆ ಭಕ್ತಿಭಾವವೆಂಬುದು ಯಾವಾತನಿಗೆ ಯಾವದೇವರಮೇಲೆ ಮುಂದುಗೊಳುತಿಹುದೋ ಆ ವಿಶ್ವಾಸವುಳ್ಳಾತನಿಗೆ-ಆ ದೇವರು ಪ್ರತ್ಯಕ್ಷವಾಗುತಿಹುದು. ತಾಮಸಾಹಂಕಾರದಿಂದ-ತಮೋಗುಣಸಂಬಂಧವಾದ ಹಂಕಾರವು ಜೀವಾತ್ಮನಿಗಿದ್ದಕಿದ್ದಹಾಗೆ ಎತ್ತಾನೊಂದುವೇಳೆ ತಲೆದೋರುವದು. ಆ ತಲೆದೋ

ರಿವಲ್ಲಿ ಅಂತಪ್ಪಹಂಕಾರದಿಂದೆ ಪೃಥ್ವಿಯೇ ಮೊದಲಾದ ಪಂಚಭೂತಂಗಳು ಪುಟ್ಟಿದವು ಎಂಬಲ್ಲಿ ಪೃಥ್ವ್ಯಾದಿಪಂಚಭೂತಗಳೇ ಜಡ, ಆ ಜಡವೇ ಅಜ್ಞಾನ, ಆ ಅಜ್ಞಾನವರ್ತನೆಯುಂಟಾಗಿರುತಿಹುದು. ಅಹಂಕಾರವು ಪುಟ್ಟಿತು ಎಂಬುದರ್ಥ. ಮತ್ತಂತುಮಲ್ಲದೆ ರಾಜಸಾಹಂಕಾರದಿಂದ ರಜೋಗುಣಸಂಬಂಧವಾದಹಂಕಾರವು ಪರಮೇಶ್ವರನಿಗಿದ್ದಕಿದ್ದಹಾಗೆ ಎತ್ತಾನೊಂದುವೇಳೆ ತಲೆದೋರುವುದು. ಆ ತಲೆದೋರಿದಾಗ ಅಂತಪ್ಪಹಂಕಾರದಿಂದೇ ಶಬ್ದಾದಿವಿಷಯವೇ ಮೊದಲಾದ ಪಂಚವಿಷಯಂಗಳು ಐದುತನ್ಮಾತ್ರೆಗಳು ಪುಟ್ಟಿದವು. ಸಾತ್ವಿಕಾಹಂಕಾರದಿಂದ ಸತ್ವಗುಣಸಂಬಂಧವಾದಹಂಕಾರವು ಪರಮೇಶ್ವರನಿಗಿದ್ದಕಿದ್ದಹಾಗೆ ಎತ್ತಾನೊಂದುವೇಳೆ ತಲೆದೋರುವುದು. ಆ ತಲೆದೋರಿದಾಗ ಅಂತಪ್ಪಹಂಕಾರದಿಂದ ಸೂರ್ಯನೇ ಮೊದಲಾದ ದೇವತೆಗಳು ಇಪ್ಪತ್ತೈದು ಆತ್ಮಾಧಿಷ್ಠಾನಕರ್ತೃಗಳು ಪುಟ್ಟಿದರು. ತಾಮಸಾಹಂಕಾರದಿಂದಲೇ ತಮೋಗುಣಸಂಬಂಧವಾದಹಂಕಾರವು ಪರಮೇಶ್ವರನಿಗೆ ಇದ್ದಕಿದ್ದಹಾಗೆ ಎತ್ತಾನೊಂದುವೇಳೆ ತಲೆದೋರುವುದು. ಆ ತಲೆದೋರಿದಾಗ ಅಂತಪ್ಪಹಂಕಾರದಿಂದೇ ಪೃಥ್ವ್ಯಾದಿ ಪಂಚಭೂತಗಳು ಪುಟ್ಟಿದವು ಎಂಬಲ್ಲಿ ಆ ಬ್ರಹ್ಮಾಂಡಾವಳಿಯು ಚತುರ್ದಶಭುವನ ಸಚರಾಚರ ಪ್ರಾಣಿಗಳ ಸಮೂಹಂಗಳೆಲ್ಲವೂ ಪುಟ್ಟಿದವು ಎಂಬುದೀಗ ಈ ಪ್ರಕಾರವಾಗಿ ಹೇಳಲ್ಪಟ್ಟವು ತಾವೇ ಮೂರುಪ್ರಕಾರವಾದಹಂಕಾರಂಗಳ ಹಸಿಗೆಯು ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೬ಕ್ಕೆ ಮಂಗಳಮಹಾ.

---

## ಇಹಲೋಕದ ತಾಪತ್ರಯಂಗಳು.

ಇನ್ನು ಇಹಲೋಕದ ತಾಪತ್ರಯಂಗಳು ಮರ್ತ್ಯಲೋಕದಲ್ಲಿ ಸತ್ತು ಸತ್ತು ಹುಟ್ಟಲ್ಪಟ್ಟಂತಾ ಮಿಥ್ಯಾದಿ ಜೀವರುಗಳನ್ನು ಅಡಿಗಡಿಗೆ ಬಂದೆಂಡಲೆನಂತಾ ಮೂರುಪ್ರಕಾರವಾದ ದುಃಖಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ—ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂದೀಪ್ರಕಾರವಾಗಿ ಹೇಳಲ್ಪಟ್ಟಂತಾ ಇವುತಾವೇ ಇಹಲೋಕದ ತಾಪತ್ರಯಂಗಳು. ಈ ಮರ್ತ್ಯಲೋಕದಲ್ಲಿ ಸತ್ತು ಹುಟ್ಟಲ್ಪಟ್ಟಂತಾ ಮಿಥ್ಯಾದಿ ಜೀವರುಗಳಿಗೆ ಕ್ಷಣಕ್ಷಣಕ್ಕೆ

ಬಂದಂಡಲೆವಂತಾ ಮೂರುಪ್ರಕಾರವಾದ ದುಃಖಂಗಳಭಿಧಾನಂಗಳು. ಈ ಮೂರುಪ್ರಕಾರವಾದ ದುಃಖಂಗಳಿಗೆ ವಿವರ ವಿಚಾರವಾಗಿ ಹಸಿಗೆಯ ಮಾಡಿ ನಿರೂಪಿಸುತಿಹರು. ಅಧ್ಯಾತ್ಮಿಕವೆಂಬ ದುಃಖದೊಳಗೆ ಶರೀರ ವೆಂದು, ಅಧ್ಯವೆಂಬ ದೇಹಕ್ಕೆಬಂದು ತಪ್ಪುವಂತಾ ದುಃಖವೆನ್ನುತ್ತ ಮಾ ನಸವೆಂದು, ಆತ್ಮಿಕವೆಂಬ ಮನಸ್ಸಿಗೆಬಂದು ತಪ್ಪುವಂತಾ ದುಃಖವೆನ್ನು ತ್ತೆರಡುಪ್ರಕಾರವಾಗಿರುತಿಹುದು. ಎರಡುಪ್ರಕಾರವಾದ ದುಃಖಂಗಳೊ ಳಗೆ ಪ್ರಥಮದಲ್ಲಿ ಅಧ್ಯವೆಂಬ ದೇಹವೊಂದಕ್ಕೆಬಂದು ತಪ್ಪುವಂತಾ ದುಃಖವನ್ನೇ ನಿರೂಪಿಸುತಿಹರು. ಅದು ಹ್ಯಾಗೆಂದೊಡೆ—ಶೀತಜ್ವರ, ಉಷ್ಣಜ್ವರ, ಶ್ಲೇಷ್ಮಜ್ವರ, ಪಿತ್ತಜ್ವರ, ಕಾಮಜ್ವರ, ಮಹೇಶ್ವರೀ ಜ್ವರಮೊಂತಾದ ಇಪ್ಪತ್ತೆಂಟುತೆರದ ಜ್ವರರೋಗಂಗಳಿಂದ ಬಂದುತ ಪ್ಪುವಂತಾ ದುಃಖವೂ ; ಗುಲ್ಮ, ಎದೆಗುಲ್ಮ, ಬದಿಗುಲ್ಮ, ಪಕ್ಕಗುಲ್ಮ, ಸಂದುಗುಲ್ಮ, ಊರ್ಧ್ವಗುಲ್ಮ, ಅಧೋಗುಲ್ಮ, ಉದ್ಗಾರಗುಲ್ಮ ಮೊಂ ತಾದ ಹದಿಮೂರುತೆರದ ಗುಲ್ಮರೋಗಂಗಳಿಂದ ಬಂದುತಪ್ಪುವಂತಾ ದುಃಖವೂ ; ಮಂಡೆಶೂಲೆ, ನಸುನಶೂಲೆ, ಕರ್ನಶೂಲೆ, ದಂತಶೂಲೆ, ಎದೆಶೂಲೆ, ಬದಿಶೂಲೆ, ಬೆನ್ನಶೂಲೆ, ಸಂದುಶೂಲೆ ಮೊಂತಾದ ಹದಿನೆಂ ಟುತೆರದ ಶೂಲರೋಗಂಗಳಿಂದ ಬಂದುತಪ್ಪುವಂತಾ ದುಃಖವೂ; ತ್ರಿ ದೋಷ, ವಾತ, ಪಿತ್ತ, ಶ್ಲೇಷ್ಮವೆಂಬ ಮೂರುಪ್ರಕಾರವಾದ ದೋಷ ಗಳಿಂದ ಬಂದುತಪ್ಪುವಂತಾ ದುಃಖವೂ; ನವಗ್ರಹ-(ಶ್ಲೋ॥ ಆದಿತ್ಯೋ ಮಂಗಳಸ್ಸೋಮೋ ಬುಧಶ್ಚೈವಬೃಹಸ್ಪತಿಃ। ಶುಕ್ರಶ್ಶನಿರಿತಿಪ್ರೋಕ್ತ ರಾಹುಕೇತೂತಥೈವಚ ॥ ಇತ್ಯೇತೆನವಗ್ರಹಾಶ್ಚ ಬ್ರಹ್ಮಾಂಡಂದಿನಮೇ ವಚ ॥) ಎಂದು ಹೇಳುತಿಹುದಾದಕಾರಣ ಆದಿತ್ಯ, ಸೋಮ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತುಗಳೆಂಬೊಂಭತ್ತು ಗ್ರ ಹಂಗಳಿಂದ ಬಂದು ತಪ್ಪುವಂತಾ ದುಃಖವೂ , ಗೋವು, ಕೊಲ್ಲಿಗೋ ವು, ಕೊಟ್ಟಿಗೋವು ಮೊಂತಾದ ಚತುಃಪಾದಾದಿಗಳಿಂದ ಬಂದುತಪ್ಪು ವಂತಾ ದುಃಖವೂ ; ಅಧ್ಯವೆಂಬ ದೇಹವೊಂದನ್ನೇ ಪೀಡಿಸುತಿಹುದು. ಪಕ್ಷಿ ಹೆಬ್ಬರುದ್ದಾದಿಯಾಗಿ ಕಿರಿಹಕ್ಕಿಯಿಂ ಕಡೆಯಾದ ಅನೇಕ ಖಗನಿ ಕರಗಳಿಂದಬಂದು ತಪ್ಪುವಂತಾ ದುಃಖವೂಸಹ ಅಧ್ಯವೆಂಬ ದೇಹವೆಂ ದೆನ್ನೇ ಪೀಡಿಸುತಿಹುದು. ರಾಜಸದಿಂದ ರಾಜ್ಯಾಧಿಪತಿಗಳಿಂದುಂಟಾ ದ ದುಃಖಮುಂ ಶರೀರವೆಂಬುದು ಅಧ್ಯವೆಂಬ ದೇಹವೊಂದಕ್ಕೆ ಬಂದುತ

ಟ್ಟುವಂತಾ ದುಃಖವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಅ
ಸೂಯ-ಒಬ್ಬರುಂಬುತ್ತಲೂ ಉಡುತ್ತಲೂ, ಹೊದಿಯುತ್ತಲೂ, ಭೋ
ಗಿಸುತ್ತಲೂ, ಕೊಂಬುತ್ತಲೂ, ಕೊಡುವುತ್ತಲೂ, ಸುಖಸಂತೋಷದಲ್ಲಿ
ರುವಂತಾ ಜನರನ್ನು ಕಂಡು ನೋಡಿನೋಡಿ ಸೈರಿಸಲಾರದೆ ಕರುಬುವು
ದೇ ಅಸೂಯೆಯು. ನಾಸೂಯವು-ಅವರಿಗೆ ಚಿಂತಿಸಿದಕೇಡು ತನಗೆ
ಬಂದು ಪ್ರಾಪ್ತಿಯಾದಲ್ಲಿ ಅವರಿಗೆ ಐಶ್ವರ್ಯಕೊಟ್ಟಾತನೂ ಶಿವನೆ, ನಮಗೆ
ಬಡತನವು ಕೊಟ್ಟಾತನೂ ಶಿವನೆ, ಅವರು ಮೊದಲು ಶಿವನಪಾದಕ್ಕೆ ಮಿ
ಗಿಲಾಗೊಂದುಪುಷ್ಪವ ಸಮರ್ಪಣೆಯ ಮಾಡಿದ್ದರು, ಅದಕ್ಕೆ ಶಿವನು ಅ
ವರಿಗೆ ಐಶ್ವರ್ಯವಕೊಟ್ಟನು. ನಾವು ಪಾಪಿಗಳು. ಮೊದಲು ಶಿವನ ಪಾದ
ಕ್ಕೆ ಮಿಗಿಲಾಗೊಂದುಪುಷ್ಪವ ಸಮರ್ಪಣೆಯ ಮಾಡಲಿಲ್ಲ, ನಮಗೆ ಶಿವ
ನು ಐಶ್ವರ್ಯಕೊಡಲಿಲ್ಲ. ಅದಕ್ಕೆ ಕರುಬದಿರುವದೇ ನಾಸೂಯವು. ಮ
ದ-ಇದಿರಲೆಕ್ಕಿಸದೆ ಉನ್ಮತ್ತವಾಗಿರುವಂತಾದ್ದೇ ಮದವು. ಮತ್ಸರ-
ಪರರಗುಣವ ನಿರಾಕರಣೆಯ ಮಾಡುವುದೇ ಮತ್ಸರವು. ಚಿಂತೆಗಳಿಂದ
ಹೆಂಡರು ಸತ್ತಲ್ಲಿಯೂ, ಮಕ್ಕಳು ಹಾನಿಯಾದಲ್ಲಿಯೂ, ಅರ್ಥನಾಶವಾ
ದಲ್ಲಿಯೂ, ಹಿಡಿದ ಕಾರ್ಯವು ತನಗೆ ಸಾಧ್ಯವಾಗದಿದ್ದಲ್ಲಿಯೂ, ಮನದೊ
ಳಗೆ ವ್ಯಾಕುಲಹುಟ್ಟುವುದುಂಟು. ಅಂತಪ್ಪ ಮನೋವ್ಯಾಕುಲಗಳಿಂ
ದ ಹುಟ್ಟಿದ ದುಃಖವನ್ನು ಮಾನಸವೆಂಬುವುದು ಆತ್ಮಿಕನೆಂಬ ಮನಸ್ಸಿ
ಗೆ ಬಂದು ತಟ್ಟುವಂತಾ ದುಃಖವೆಂದೇ ತಿಳಿದುಕೊಂಬುವುದು ತತ್ವಜ್ಞಾನಿ
ಗಳು. ಈ ಎರಡೂ ಶೀತ, ಚಳಿ, ಮಳೆಗಳಿಂದ ಬಂದುತಟ್ಟುವಂತಾ ದುಃ
ಖವು ಅದು ಅಪ್ಪುತತ್ವಸಂಬಂಧವಾದ ದುಃಖವೆಂದೇ ತಿಳಿವುದು. ಉ
ಷ್ಣ-ಬಿಸಲು, ಬೆಂಕಿ, ಬಿಸಿಯಗ್ಗಣಿಗಳಿಂದ ಬಂದುತಟ್ಟುವಂತಾ ದುಃಖ
ವು, ಅದು ಅಗ್ನಿತತ್ವ ಸಂಬಂಧವಾದ ದುಃಖವೆಂದೇ ತಿಳಿದುಕೊಂಬು
ವುದು. ಚಂಡಮಾರುತನಿಂದ ಬಂದುತಟ್ಟುವಂತಾ ದುಃಖವು ಅದು ವಾ
ಯುತತ್ವಸಂಬಂಧವಾದ ದುಃಖವೆಂದೇ ತಿಳಿದುಕೊಂಬುವುದು. ಕೂ
ಡಿದಂತಾದ್ದುತಾನೇ ಅಧ್ಯಾತ್ಮಿಕವೇ ಇದು ಅಧ್ಯವೆಂಬದೇಹ, ಆತ್ಮಿಕ
ವೆಂಬಮನಸ್ಸಿಗೆ ಬಂದುತಟ್ಟುವಂತಾ ದುಃಖವೆಂದೇ ತಿಳಿವುದು. ಗ
ಡಿಲು, ಮುಗಿಲು, ಕಿಚ್ಚು, ಆರ್ಭಡಿಸಿಬಡಿದಲ್ಲಿ ಬಂದುತಟ್ಟುವಂತಾ ದುಃಖ
ವು, ಅದು ಭೌತಿಕಾಗ್ನಿಯೆಂದು ಪೃಥ್ವೀತತ್ವಸಂಬಂಧವೆಂದೇ ತಿಳಿವುದು.
ಮಿಂಚುಗಳಿಂದ-ಬಳ್ಳಿಮಿಂಚು, ಬಾಲಮಿಂಚು, ಕೋಲಮಿಂಚು, ಕತ್ತಿ

ಮಿಂಚುಗಳು, ಆಕಡೆಯೊಂದುಮಿಂಚು, ಈಕಡೆಯೊಂದುಮಿಂಚು ಮಿಂಚಿದಲ್ಲಿ ಕಣ್ಣುಕತ್ತಲೆಕೂಡಿಸಿಕೊಂಡು ನೆಲಕ್ಕೆಬಿದ್ದು ಪ್ರಾಣಹೋಗುತಿಹುದು. ಅಂತಪ್ಪ ವಿದ್ಯುಲ್ಲತೆಗಳಿಂದೆ ಬಂದುತಟ್ಟುವಂತಾ ದುಃಖವು ಅದು ಆಕಾಶತತ್ವಸಂಬಂಧ ದುಃಖವೆಂದೇ ತಿಳಿವುದು. ಇಂತಪ್ಪವುಗಳಿಂದ ಹುಟ್ಟಿದ ದುಃಖವನ್ನು ಆಧಿಭೌತಿಕವೆಂಬುದು ತನ್ನಂಗಸಂಬಂಧವಾದ ಪಂಚಭೂತಗಳಿಂದ ಬಂದು ತಟ್ಟುವಂತಾ ದುಃಖವೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು. ಜನನ-ಸ್ಥೂಲಾಯಮಾನವಾದ ಪಿಂಡವು ತಾಯಿಯ ಸೂಕ್ಷ್ಮವಾದ ಯೋನಿದ್ವಾರದಲ್ಲಿ ನುಸುಳಿ ಬರುವಲ್ಲಿ ಸಪ್ತಧಾತುಗಳೆಲ್ಲವೂ ಸಣ್ಣಿಸಿ ಗಿಟಿಗಿಟಿಜಂತ್ರವಾಗಿ ತಾಯಿಯ ಪ್ರಾಣವೇ ಕಡೆಯಾಗಿ ತನ್ನಪ್ರಾಣವೇ ಅಂತ್ಯವಾಗಿ ನಾನಾಪ್ರಯಾಸದಿಂದ ಹುಟುವಲ್ಲಿ ಬಂದು ತಟ್ಟುವಂತಾ ದುಃಖವು ಅದು ನಡುವೆ ಮತ್ತೊಬ್ಬರಿಂದಾದುದಲ್ಲ, ಅನಾದಿ ಪರಶಿವನಿಂದ ಬಂದು ತಟ್ಟುವಂತಾ ದುಃಖವೆಂದೇ ತಿಳಿದುಕೊಂಬುವುದು. ಮರಣ-ಕಡೆಯಲ್ಲಿ ನಾನಾರುಜೆಗಳಿಂದ ನವೆದು ಸಪ್ತಧಾತುಗಳೆಲ್ಲವೂ ಸಣ್ಣಿಸಿ ದೇಹವು ಗಿಟಿಗಿಟಜಂತ್ರವಾಗಿ ತನ್ನ ಮಲಮೂತ್ರಗಳಲ್ಲಿ ತಾನೇ ಬಿದ್ದುಹೊರಳಿ ಮೃತನಾಗಿ ಹೋಗುವಲ್ಲಿ ಆಗುವಂತಾ ದುಃಖವು ಅದು ನಡುವೆ ಮತ್ತೊಬ್ಬರಿಂದಾದುದಲ್ಲ, ಅನಾದಿ ಪರಶಿವನಿಂದುಂಟಾದ ದುಃಖವೆಂದೇ ತಿಳಿವುದು. ಬಿಳಿಯ ಕೂದಲು ಕೆನ್ನೆಗೆಬಂದಲ್ಲಿ ತಟ್ಟುವಂತಾ ದುಃಖವು ತೆರೆ ಒಳ್ಳೆಕನ್ನಡಿಯ ನುಣುಪಿಂಗೆ ಸಮಾನವಾದ ಗಲ್ಲವು ಸೀಗೆಕಾಯಿಯಹಾಗೆಯೂ, ಹಾವಿನ ಹೆರೆಯಹಾಂಗೆಯೂ, ಮಾವಿನಹಣ್ಣಿನಹಾಂಗೆಯೂ ಸುಕ್ಕುಗಟ್ಟಿದಲ್ಲಿ ಬಂದಾಗುವಂತಾ ದುಃಖವು, ಹಸಿವು, ಕ್ಷುಧೆ, ತೃಷೆಯಾದ ವೇಳೆಗೆ ಪಾನ್ಯವು ಅನ್ನವು ದೊರಕೊಳ್ಳದಿದ್ದಲ್ಲಿ ಬಂದುತಟ್ಟುವಂತಾ ದುಃಖವು, ಅಜ್ಞಾನ, ನಾಲ್ವರ ಮಧ್ಯದಲ್ಲಿ ಬಂದಲ್ಲದಪ್ರಸಂಗವನಾಡಿ ಛೀಯೆನಿಸಿಕೊಂಡು ಏಕಾಂತಸ್ಥಾನಕ್ಕೆಹೋಗಿ ಮುಖಕ್ಕೆ ಶರಗುಹಾಕಿಕೊಂಡು ದುಃಖಿಸುವಲ್ಲಾಗುವಂತಾ ದುಃಖವು, ಇಂತಪ್ಪವುಗಳಿಂದೆ ಹುಟ್ಟಿದ ನೋವನ್ನು ಆಧಿದೈವಿಕವೆಂಬುವುದು, ಅನಾದಿ ಪರಶಿವನಿಂದಬಂದು ತಟ್ಟುವಂತಾ ದುಃಖವೆಂದೇ ತಿಳಿದುಕೊಂಬುವುದು. ಈ ಪ್ರಕಾರದಿಂದ ಹೇಳಲ್ಪಟ್ಟವು ತಾವೇ ಈ ಮರ್ತ್ಯಲೋಕದಲ್ಲಿ ಸತ್ತು ಹುಟ್ಟುವಂತಾ ಮಿಥ್ಯಾಜೀವರುಗಳಿಗಡಿಗಡಿಗೆ ಬಂದಂಡಲೆವಂತಾ ಮೂರು ಪ್ರಕಾರವಾದ ದುಃಖಂ

ಗಳ ಹಸಿಗೆಯು ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩ಂಕ್ಕೆ ಮಂಗಳಮಹಾ.

---

## ಸ್ವರ್ಗಲೋಕದ ತಾಪತ್ರಯಂಗಳು.

ಇನ್ನು ಸ್ವರ್ಗಲೋಕದ ತಾಪತ್ರಯಂಗಳು ಇಹಲೋಕದವು ಹಾತಾಪತ್ರಯರೂಪೆಂದರಿದು. ಅಶ್ವಮೇಧಾದಿಯಜ್ಞಾಕ್ರಿಯೆಗಳನ್ನಾಚರಿಸಿ ಸ್ವರ್ಗಲೋಕವಾಸಿಗಳಾದ ದೇವತಾದಿಗಳನ್ನಡಿಗಡಿಗೆ ಬಂಡಂಡಲೆವಂತಾ ಮೂರುಪ್ರಕಾರವಾದ ದುಃಖಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಆವಾವೆಂದೊಡೆ—ಕ್ಷಯೆ, ಪ್ರಿಯವಿಷಯಭೋಗಕ್ಷಯದುಃಖವು, ಅತಿಶಯ-ಅನ್ಯರತಿಶಯಸುಖಮಂಕಂಡುಸೈರಿಸಲಾರದದುಃಖವು, ಸಹಸಪತನ-ಭಯ ದುಃಖವೆಂದು ಈ ಪ್ರಕಾರದಿಂದ ಪೇಳಲ್ಪಟ್ಟವುತಾವೇ ಸ್ವರ್ಗಲೋಕದ ತಾಪತ್ರಯಂಗಳು. ಈ ಮೂರುಪ್ರಕಾರವಾದ ದುಃಖಗಳಿಗೆ ವಿವರ, ವಿಚಾರವಾಗಿ ಹಸಿಗೆಯು ಮಾಡಿ ನಿರೂಪಿಸುತಿಹರು. ಕ್ಷಯವೆಂದರೆ-ಅರ್ಥವೇನೆಲೆಸ್ವಾಮಿ ಯೆಂದು ಬೆಸಗೊಂಡೊಡೆ, ಸುಕೃತತೀರುವದು, ಎಣ್ಣೆಯುಳ್ಳಪರಿಯಂತರ ದೀಪ ಉರಿವುದು, ಎಣ್ಣೆ ತೀರ್ಗಡೆಯಾಗಿ ಹೋಗಲು ದೀಪವುತಣ್ಣಗಾಗುವದೆಂಬ ಲೋಕದ ದೃಷ್ಟೋಪಮಾನದಹಾಗೆ ಆತ್ಮನು ಇಹಲೋಕದಲ್ಲಿ ಮಾಡಿದ ಸುಕೃತಾನುಸಾರ ಉಂಟಾಗಿರುವ ಪರ್ಯಂತರವೂ, ಪರಲೋಕದಲ್ಲಿ ಸುಖವನ್ನನುಭವಿಸುತಿಹನು. ಆತ್ಮನಿಹಲೋಕದಲ್ಲಿ ಮಾಡಿದ ಸುಕೃತಾನುಸಾರವು ತೀರಿಕಡೆಯಾಗಲು ಪರಲೋಕದ ಸುಖವನ್ನುಂಡು ತೀರ್ಗಡೆಯಾಗಿ ಹೋಗುತಿಹುದೆಂಬುದೀಗಕ್ಷಯವು. ಅತಿಶಯವೆಂದೊಡೆ-ಅರ್ಥವೇನೈಯ್ಯ ಸ್ವಾಮಿಯೆಂದು ಬೆಸಗೊಂಡೊಡೆ, ತನ್ನಿಂದ-ತನಿಗಿಂತಲೂ ಬಲ್ಲಿದರ್ಬಹಳವಾಗಿ ಸುಕೃತಾನುಸಾರವ ಮಾಡುವಂತಾ ಪುಣ್ಯಾತ್ಮರುಗಳುಂಟೆಂಬುದು ಇದ್ದಾರೆಂದು ಹೇಳುವದು. ಸಹಸಪತನವೆಂದಡೆ ಅರ್ಥವೇನೈಯ್ಯ ಸ್ವಾಮಿಯೆಂದು ಬೆಸಗೊಂಡೊಡೆ, ಸ್ವರ್ಗಲೋಕದಿಂದ ಕೆಳಕ್ಕೆ ತಳ್ಳಿಬಿಡುತಿಹುದು. ಈ ಪ್ರಕಾರದಿಂದ ಹೇಳಲ್ಪಟ್ಟವುತಾವೇ ಮೂರುಪ್ರಕಾರವಾದ ದುಃಖಂಗಳ ಹಸಿಗೆಯು ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಪಳು.

ಅಂತು ಕಟ್ಟು ೩ಂಕ್ಕೆ ಮಂಗಳಮಹಾ.

---

## ತನುತ್ರಯಂಗಳು.

ತದನಂತರದಲ್ಲಿ ತನುತ್ರಯಂಗಳು ಆತ್ಮಂಗೆಸಂಬಂಧವಾದ ದೇಹದಲ್ಲಿ ಮೂರುಪ್ರಕಾರವಾದಂಗಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪವಮಂ ಪೇಳುತಿಹರು. ಸ್ಥೂಲತನು, ಸೂಕ್ಷ್ಮತನು, ಕಾರಣತನು, ಇವುತಾವೇ ತನುತ್ರಯಂಗಳು ಮೂರುಪ್ರಕಾರವಾದಂಗಂಗಳಭಿಧಾನಂಗಳು. ಈ ಮೂರುಪ್ರಕಾರವಾದಂಗಂಗಳಿಗೆ ವಿವರ, ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಆ ತನುತ್ರಯಂಗಳೊಳಗೆ ಪಂಚಭೌತಿಕದಿಂದಾದುದೇ ಪೃಥಿವ್ಯಾದ್ಯೈತ್ರಡುತತ್ವಂಗಳಿಂದ ವ್ಯಕ್ತಿಕರವಾದಂಥಾದ್ದೇ ಸ್ಥೂಲತನು. ವಾಯುಪಂಚಕ-ಪಂಚಪ್ರಾಣವಾಯುಗಳು ಜ್ಞಾನಕರ್ಮೇಂದ್ರಿಯಗಳು ಹತ್ತು, ಮನಃ ಬುದ್ಧಿ ಈ ಎರಡಂತಃಕರಣಗಳು, ಈಪ್ರಕಾರದಿಂದ ಪೇಳಲ್ಪಟ್ಟ ಈ ಹದಿನೇಳುತತ್ವಂಗಳುಕೂಡಿ ಒಬ್ಬುಳಿಯಾಗಿ ಲಿಂಗಭೌತಿಕವೆಂದು ಹೇಳಲ್ಪಟ್ಟಂತಾದ್ದು ತಾನೇ ಸೂಕ್ಷ್ಮತನು. ಅಹಂಕಾರ-ಚಿತ್ತ ಮೂಲಾತ್ಮ ಈ ತ್ರಿಕರಣಂಗಳ ಕೂಟದಿಂದ ವ್ಯಕ್ತಿಕರವಾದುದುತಾನೇ ಕಾರಣತನು. ಈ ತನುತ್ರಯಂಗಳ ಹಸಿಗೆಯುನ್ನು ಮತ್ತೊಂದುಶಾಸ್ತ್ರದಲ್ಲಿ ಮತ್ತೊಂದುವಿಧವಾಗಿ ನಿರೂಪಿಸಲ್ಪಡುತಿದ್ದೀತು. ಪೃಥ್ವೀತತ್ವ ಅಪ್ಪುತತ್ವ ಈ ಎರಡುತತ್ವಗಳಿಂದ ವ್ಯಕ್ತಿಕರವಾದಂತಾದ್ದುತಾನೇ ಸ್ಥೂಲತನು. ಕೇವಲಸಾಕಾರವಾದ ಸ್ಥೂಲಶರೀರವು, ಅಗ್ನಿತತ್ವ ವಾಯುತತ್ವ ಈ ಎರಡುತತ್ವಂಗಳಿಂದ ವ್ಯಕ್ತಿಕರವಾದಂತಾದ್ದುತಾನೇ ಸೂಕ್ಷ್ಮತನು. ಸಾಕಾರ ನಿರಾಕಾರವಾದ ಸೂಕ್ಷ್ಮಾಂಗವೆಂದೆರು ಪುರ್ಯಷ್ಟಕದೇಹವೆಂದರೂ ಯಾತನಾಶರೀರವೆಂದರೂ ಲಿಂಗತನುವೆಂದರು ಒಂದೇನಾಮ, ಪರ್ಯಾಯಂಗಳಾಗಿಪ್ಪವು. ಆಕಾಶತತ್ವ-ಮೂಲಾಹಂಕಾರತತ್ವ ಈ ಎರಡುತತ್ವಂಗಳಿಂದವ್ಯಕ್ತಿಕರವಾದಂತಾದ್ದುತಾನೇ ಕಾರಣತನು. ಕೇವಲನಿರಾಕಾರವಾದ ಕಾರಣಾಂಗವು ಇನ್ನೊಂದುಪ್ರಕಾರದಿಂದ ಪೇಳಲ್ಪಡುಗುಂ. ಈ ತನುತ್ರಯಂಗಳ ಹಸಿಗೆಯುನ್ನು ಮತ್ತೊಂದುಶಾಸ್ತ್ರದಲ್ಲಿ ಮತ್ತೊಂದುವಿಧವಾಗಿ ನಿರೂಪಿಸಲ್ಪಡುತಿದ್ದೀತು. ಸರ್ವಾಧಾರಮಯವಾದ ಧರಣೀತತ್ವವು ಸರ್ವಪಾಪ್ಯಪ್ರಕ್ಷಾಳನರೂಪವಾದುದಕತತ್ವಂಗಳೆಂಬೆರಡೂ ಕೂಡಿ ಸ್ಥೂಲವಾದದೇಹವು ಕಾಯಸ್ವರೂಪವಾಗಿರುತಿಹುದು. ಸರ್ವದಾಹಕಪಾಚಕರೂಪವಾದ ಧನಂಜಯತತ್ವವು, ಸರ್ವಚಾಂಚಲ್ಯಮಯ

ವಾದ ಸವಿಾರತತ್ವವು, ಸರ್ವಾಕಾಶಪ್ರದವಾದಂಬರತತ್ವವು ಈ ಮೂರೂ ಕೂಡಿ ಜೀವನು ಜೀವಸ್ವರೂಪವಾಗಿಪ್ಪನು. ಅದುಹ್ಯಾಗೆಯ್ಯಾ ಪ್ರಥಮದಲ್ಲಿ ಪಂಚಭೂತಂಗಳು ಕೂಡಿ ಒಂದುದೇಹವೆಂದೇ ನಿರೂಪಣವಪಾಲಿಸಿದಿರಿ, ದ್ವಿತೀಯದಲ್ಲಿ ಎರಡೆರಡುತತ್ವಂಗಳು ಕೂಡಿ ಒಂದೊಂದುದೇಹವೆಂದೇ ನಿರೂಪಣವಪಾಲಿಸಿದಿರಿ, ಈಗ ತೃತೀಯದಲ್ಲಿ ಎರಡೆಕಾಯಸ್ವರೂಪು ಮೂರೇಜೀವಸ್ವರೂಪೆಂದು ನಿರೂಪಣವಪಾಲಿಸುತಿದ್ದೀರಿ. ಅದುಹ್ಯಾಗೆ ತಿಳಿದುಕೊಳ್ಳಬೇಕೆಲೆ ಸ್ವಾಮಿಯೆಂದು ಬೆಸಗೊಂಡೊಡೆ— ಆತ್ಮನು ಘಟದೊಳಗೆ ಜೀವಿಸಿಕೊಂಡಿರುವ ಪರ್ಯಂತರವೂ ಪಂಚಭೂತಂಗಳುಕೂಡಿ ಒಂದುದೇಹವೆಂಬಂತೆ ಕಾಣಬರುತಿಹನು. ಆತ್ಮನು ಘಟವ ಬಿಟ್ಟು ಹೋದಬಳಿಕ ಪೃಥ್ವೀತತ್ವಸಂಬಂಧವಾದ ಶಲ್ಯಾದಿಗಳು ಅಪ್ಪುತತ್ವಸಂಬಂಧವಾದ ಶ್ಲೇಷ್ಮಾದಿಗಳು ಆ ಪೃಥ್ವಿಯಲ್ಲಿಯೇ ಉಳಿಯುತ್ತಿಹವು. ಅಗ್ನಿತತ್ವಸಂಬಂಧವಾದ ಕ್ಷುದಾದಿಗಳು, ವಾಯು ತತ್ವಸಂಬಂಧವಾದ ಚಲನಾದಿಗಳು, ಆಕಾಶತತ್ವಸಂಬಂಧವಾದ ರಾಗಾದಿಗಳು, ಒಂದಾನೊಂದು ಸೂರ್ಯನೊಡನೆ ಸೂರ್ಯನಕಿರಣಂಗಳೈದುವಹಾಂಗೆ ಆತ್ಮನೊಡನೈದುತಿಹವು. ಅದುಕಾರಣವಾಗಿ ಎರಡೇ ಕಾಯಸ್ವರೂಪು, ಮೂರೇ ಜೀವಸ್ವರೂಪೆಂದೇ ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೨ಕ್ಕೆ ಮಂಗಳಮಹಾ.

———:(***):———

## ಜೀವತ್ರಯಂಗಳು.

ಇನ್ನುಮುಂದೆ ಜೀವತ್ರಯಂಗಳು ಶರೀರಸಂಬಂಧಿಗಳಾದ ಜೀವಾತ್ಮರುಗಳೊಳಗೆ ಮೂರುಪ್ರಕಾರವಾದ ಜೀವಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ—ವಿಶ್ವ, ತೈಜಸ, ಪ್ರಾಜ್ಞ. ಈಪ್ರಕಾರದಿಂದ ಪೇಳಲ್ಪಟ್ಟವುತಾವೇ ಜೀವತ್ರಯಂಗಳು. ಈ ಮೂರುಪ್ರಕಾರವಾದ ಜೀವಂಗಳಿಗೆ ವಿವರ, ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಆ ಜೀವತ್ರಯಂಗಳೊಳಗೆ ಜೀವನು ಆಶಾಪಾಶ, ಕ್ಲೇಶಪಾಶ, ಮೋಹಪಾಶ, ಭವಪಾಶವೆಂಬ ಚತುಃಪಾಶಂಗಳಲ್ಲಿ ಬಿಗಿವಡೆದಿರುವಂತಾ ಬದ್ಧಜೀವನು ವಿಶ್ವವ್ಯಾಪ್ತಿಯನೈದಲು (ವಿಶ್ವಸ್ಯಮಾಯಾಪ್ರಪಂಚರಚನಾ) ಎಂದು ಹೇಳುತಿಹುದಾದಕಾರಣ ವಿಶ್ವಾತ್ಮರುಗಳು ಮಾಡುವ ಬಹಿರಂಗದ ಷಟ್ಕೃಷಿ ವ್ಯಾಪಾರಂಗಳೊಡ

ನೆ ಕೂಡಿ ಚರಿಸಲು ವಿಶ್ವನು ಅವತಾನೇ ವಿಶ್ವಜೀವನನಿಸಿಕೊಂಬುವ ನು. ಜೀವತ್ರಯಂಗಳೊಳಗೆ ಜೀವನು ಚತುಃಪಾಶಂಗಳಿಂದ ಬಿಗಿವಡೆದಿರುವಂತಾ ಬದ್ಧಜೀವನು ತೈಜಸಸಂಬಂಧದಿಂ ಪರಿಯೆ ತೈಜಸವೆಂದಡೆ=ಇಂದ್ರಿಯಂಗಳು, ಸಂಬಂಧವೆಂದಡೆ=ವಿಷಯಂಗಳು, ಪರಿಯೆ=ಆ ಇಂದ್ರಿಯಸಂಬಂಧವಾದ ವಿಷಯಂಗಳೊಡನೆ ಕೂಡಿಚರಿಸಲು ತೈಜಸನು, ಅವತಾನೇ ತೈಜಸಜೀವನೆಂದೇ ಹೇಳಿಸಿಕೊಂಡನು. ತೈಜಸಜೀವನೆಂದರೂ ಇಂದ್ರಿಯಜೀವನೆಂದರೂ ಸ್ವಪ್ನಗ್ರಾಹನೆಂದರೂ ಒಂದೇನಾಮ ಪರ್ಯಾಯಂಗಳಾಗಿಪ್ಪವು. ಆ ಜೀವತ್ರಯಂಗಳೊಳಗೆ ಜೀವನು ಚತುಃಪಾಶಗಳಿಂದ ಬಿಗಿವಡವಿರುವಂತಾ ಬದ್ಧಜೀವನು ಲೇಸಾಗಿ ಕತ್ತಲೆಯೊಳಗೆ ಕಾರಣತನುವಿನ ಮರೆವೆಯುಳ್ಳಿರ್ದನಾಗಿ ಮಗ್ನನಾಗಿರ್ದಕಾರಣ ಪ್ರಾಜ್ಞನು ಅವತಾನೇ ಪ್ರಾಜ್ಞಜೀವನೆಂದೇ ಹೇಳಿಸಿಕೊಂಡನು. ಈಪ್ರಕಾರದಿಂದ ಪೇಳಲ್ಪಟ್ಟ ಇವುತಾವೇ ಜೀವತ್ರಯಂಗಳ ಭೇದದ ಹಸಿಗೆಯವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೩ಕ್ಕೆ ಮಂಗಳಮಹಾ.

——:(***):——

## ಆ ತ್ಮ ತ್ರ ಯಂ ಗ ಳು .

ಇನ್ನು ಆತ್ಮತ್ರಯಂಗಳು ಶರೀರಸಂಬಂಧಿಗಳಾದ ಆತ್ಮರುಗಳಲ್ಲಿ ಮೂರುಪ್ರಕಾರವಾದ ಆತ್ಮರುಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಅವಾವೆಂದೊಡೆ—ಜೀವಾತ್ಮ, ಅಂತರಾತ್ಮ, ಪರಮಾತ್ಮ, ಈಪ್ರಕಾರವಾದಿವುತಾವೇ ಆತ್ಮತ್ರಯಂಗಳು. ಈ ಆತ್ಮತ್ರಯಂಗಳಿಗೆ ವಿವರ, ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ಶಿವಾಂಶಿಕನಾದಾತ್ಮನು ಶಿವನಾಜ್ಞೆಯಿಂದ ಶರೀರಸಂಬಂಧಿಯಾದಾಗ ಆ ಆತ್ಮನು ಆ ಶರೀರಸಂಬಂಧಿಯಾದಾತ್ಮನು ಸಂಸಾರವ್ಯಾಪ್ತಿಯಾದಂತ ಸ್ಥೂಲಸೂಕ್ಷ್ಮವಾದ ಸಕಲಸಂಸೃತಿಗಳಲ್ಲಿಚ್ಛೆಯುಳ್ಳವನಾದಂತ ಜೀವನ ಬೆರಸಲಾಗಿ ಜೀವಾತ್ಮನ ವರ್ತನೆಯೊಡನೆಕೂಡಿ ತಾನು ಚರಿಸುವನಾಗಿ ಜೀವಾತ್ಮನು ಅವತಾನೇ ಜೀವಾತ್ಮನೆಂದೇ ಹೇಳಿಸಿಕೊಂಡನು. ಅಲ್ಲಿ ಆತ್ಮಂಗೆ ಕಿಂಚಿನ್ಮಾತ್ರವಿವೇಕ ತಲೆದೋರಿದಾಗ ಆತ್ಮನು ಆ ವಿವೇಕಿಯಾದಾತ್ಮನು ಸಂಸಾರವ ಹೊದ್ದಿಯು ಒಂದುವೇಳೆ ಅರಿವು ಮುಸಳಿಸಿ ಮರವೆಬಂದು ಮುಸುಕಿದಾಗ ಸಕಲ ಸಂಸೃತಿಗಳಲ್ಲಿ ಮನ ಬೆರದಾತ

ನಾಗಿಯೂ, ಹೊದ್ದನಾಗಿ ಯೊಂದುವೇಳೆ ಆ ಮೇರವೆ ಮುಸಲ್ಲಿಸಿ ಅರಿವು ತಲೆದೋರಿದಾಗ ಸಕಲ ಸಂಸ್ಕೃತಿಗಳಲ್ಲಿ ಮನ ಬೆರೆಯನಾದಕಾರಣ ಎಂ ಬುದರ್ಥ. ಮತ್ತಂತುಮಲ್ಲದೆ ಸಂಸಾರವಹೊದ್ದಿಯು ಪರಲೋಕದ ಸ್ತ್ರೀಯರು, ಸದ್ಗಂಧಿನಿಯರು, ಅಮೃತಾಹಾರಿಗಳು, ದಿವ್ಯಕಾಂತಿ ಲಾ ವಣ್ಯವನುಳ್ಳವರು, ದೀರ್ಘಾಯುಷ್ಯ ದೀರ್ಘಭಾಷೆಯನುಳ್ಳಂಥವರು, ಪರಲೋಕದ ಭೋಗವೇ ನಿತ್ಯವಾದ ಭೋಗವೆಂದರಿದು ಆ ಪರಲೋಕ ದ ಸಕಲ ಸಂಸ್ಕೃತಿಗಳಲ್ಲಿ ಮನಬೆರದಾತನಾಗಿಯೂ, ಸಂಸಾರ ಹೊದ್ದಿ ಯೂ ಹೊದ್ದದವನಾಗಿ ಇಹಲೋಕದ ಸ್ತ್ರೀಯರು, ದುರ್ಗಂಧಿನಿಯ ರು, ಕುರೂಪಿಗಳು, ಅಲ್ಪಾಹಾರಿಗಳು, ಅಪವಿತ್ರಶರೀರಿಯರು, ಅಲ್ಪಾಯು ಷ್ಯಾಲ್ಪಭಾಷೆಯನುಳ್ಳವರು ಇಹಲೋಕದ ಭೋಗವೇ ನಿತ್ಯವೆಂದರಿದು ಇಹಲೋಕದ ಸಕಲಸಂಸ್ಕೃತಿಗಳಲ್ಲಿ ಮನಬೆರೆಯದನಾದಕಾರಣ ಅವತಾ ನೇ ಅಂತರಾತ್ಮನೆಂದೇ ಹೇಳಿಸಿಕೊಂಡನು. ಅಲ್ಲಿ ಆತ್ಮಂಗೆ ಜ್ಞಾನವು ನಿ ರ್ಧರವಾದಾಗ ಆತ್ಮನು ಆ ನಿರ್ಧರವಾದ ಜ್ಞಾನಕಲಾತ್ಮನು ಸಂಸಾರನ ಆವ, ಹಾವಾದೊಡೇನು, ವಿಷವೊಂದೇ ಎಂಬಹಾಂಗೆ ಇಹಲೋಕದ ಸ್ತ್ರೀ ಯಳಾದೊಡೇನು, ಪರಲೋಕದ ಸ್ತ್ರೀಯಳಾದೊಡೇನು, ತನ್ನ ಪ್ರ ಪಂಚಿಗೊಳಗುವಮಾಡಿ ಭವಕ್ಕೆಹಾಕುವದಲ್ಲಾ ಒಂದೆಯೆಂದರಿದು ಇಹ ಲೋಕದ ಪರಲೋಕದ ಸಂಬಂಧವಾದ ಸಕಲಸಂಸ್ಕೃತಿಗಳನ್ನು ವಿಸರ್ಜಿ ಸಿ, ನಿಃಕಲನಾಗಿರಲು ಸಂಸಾರ ಕಲೆರಹಿತವಾದ ಬ್ರಹ್ಮವೇತಾನಾಗಿರುತ್ತಿ ರಲು ಎಂಬುದರ್ಥ. ಸಂಸಾರವಬಿಟ್ಟು, ಸ್ಥೂಲಸೂಕ್ಷ್ಮವಾದ ಸಕಲಸಂ ಸ್ಕೃತಿಗಳನ್ನು ವಿಸರ್ಜಿಸಿ, ನಿಃಕಲನಾಗಿರಲು ನಿರಾತಂಕಬ್ರಹ್ಮವೇ ತಾನಾ ಗಿರಲು ಪರಮಾತ್ಮನು ಅವತಾನೇ ಪರಮಾತ್ಮನೆನಿಸಿಕೊಂಡನು. ಈ ಪ್ರಕಾರದಿಂದ ಪೇಳಲ್ಪಟ್ಟ ಇವುತಾವೇ ಆತ್ಮತ್ರಯಂಗಳ ಭೇದದವಿಚಾ ರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೩ಕ್ಕೆ ಮಂಗಳಮಹಾ.

---

## ಅವಸ್ಥಾತ್ರಯಂಗಳು.

ಇನ್ನು ಅವಸ್ಥಾತ್ರಯಂಗಳು ಶರೀರಸಂಬಂಧಿಗಳಾದಾತ್ಮರುಗಳಿ ಗೆ ಮೂರುಪ್ರಕಾರವಾದವಸ್ಥೆಗಳೆಂದುಂಟಾಗಿರುತಿಹವು, ಅವರ ಸ್ವಸ್ವ ರೂಪವಂ ಪೇಳುತಿಹರು. ಆವಾವೆಂದೊಡೆ-ಜಾಗ್ರಾವಸ್ಥೆ, ಸ್ವಪ್ನಾವ

ಸ್ಥೆ, ಸುಷುಪ್ತ್ಯವಸ್ಥೆ, ಇವುತಾವೇ ಅವಸ್ಥಾತ್ರಯಂಗಳು. ಈ ಮೂರುಪ್ರಕಾರವಾದ ವಸ್ಥೆಗಳಿಗೆ ವಿವರ ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ಅಲ್ಲಿ ಆತ್ಮನು ಲೋಚನಾಗ್ರಸ್ಥಾನಕ್ಕೆಬಂದಾಗೆಚ್ಚ ತ್ತಿಹುದೇ ಇಪ್ಪತ್ತೈದುತತ್ವ ಸಮಷ್ಟಿಯಾಗಿನಿಂದು ಸ್ಥೂಲತನುವಿನ ಮರವೆಯೊಡನೆ ಕೂಡಿಕೊಂಡು ಎಚ್ಚರವುಳ್ಳಾತನಾಗಿ ಬಹಿರಂಗದದೃಶ್ಯ ಮಾದ ಸಕಲೇಂದ್ರಿಯಂಗಳ ವ್ಯಾಪಾರದೊಡನೆಕೂಡಿ ಚರಿಸುವದೆಂಬು ದೀಗ ಎಚ್ಚರಿಹುದೇ ಜಾಗ್ರಾವಸ್ಥೆಯೆನಿಸುವದು. ಅಲ್ಲಿ ಆ ಲೋಚನಾ ಗ್ರದಲ್ಲಿದ್ದಾತ್ಮನು, ಗಳಸ್ಥಾನಕ್ಕಿಳಿದುಬಂದಾಗ ಕನಸು ಕಾಂಬುದೇ ಸ್ವ ಪ್ನ, ಹದಿನೇಳುತತ್ವ ಸಮಷ್ಟಿಯಾಗಿನಿಂದು ಸ್ಥೂಲತನುವಿನ ಮರವೇ ಸೂಕ್ಷ್ಮತನುವಿನೊಡನೆ ಕೂಡಿಕೊಂಡು ದೃಶ್ಯಾದೃಶ್ಯಮಾದ ಕಲ್ಪಿತರೂ ಪಿನ ಕಾಣಿಕೆಯಾಗಿಪ್ಪ ಸುಖದುಃಖ ಮೋಹರೂಪಮಾದ ಸ್ವಪ್ನಂಗಳ ಕಾಣುವುದೇ ಸ್ವಪ್ನಾವಸ್ಥೆ, ಗಳಸ್ಥಾನದಲ್ಲಿದ್ದಾತ್ಮನು ಹೃತ್ಕಮಲಕುಹ ರಕ್ಕಿಳಿದುಬಂದಾಗ ಮೈಮರೆದಿಹುದೆ ಚಿತ್ತ. ಪ್ರಾಣವಾಯು-ಪ್ರಕೃತಿ ಯೆಂಬ ಮೂರುತತ್ವ ಸಮಷ್ಟಿಯಾಗಿನಿಂದು ಸ್ಥೂಲತನುವಿನ ಮ..ವೆ ಸೂಕ್ಷ್ಮತನುವಿನ ಅರಿವುಗಳೇನು ಇಲ್ಲದೊಂದಾನೋದು ಚರಣಾಯು ಧನು ಪರಿದು ಮೇವೃತ್ತಿರ್ಪ ಮರಿಗಳೆಲ್ಲವನ್ನು ತನ್ನಪಕ್ಷದ ಮರೆಯಲ್ಲಿ ಅಡಗಿಸಿಕೊಂಡು ತಾನೊಂದೆಡೆಯಲ್ಲಿ ನಿದ್ರೆಗೈಯ್ವಹಾಂಗೆ ಬಾಹ್ಯಾಭ್ಯಂ ತರ ಸಂಬಂಧವಾದ ಸಕಲತತ್ವಂಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡು ತಾನಾನಮಾಯಾನಂದಭೋಗದಲ್ಲಿ ಪರವಶವನೈದಿರುವಂತಾದ್ದೇ ಸುಷು ಪ್ತ್ಯವಸ್ಥೆಯೆನಿಸಿಕೊಂಡಿತು. ಈಪ್ರಕಾರವಾದವಸ್ಥಾತ್ರಯಂಗಳ ಭೇ ದನನ್ನು ವಿಚಾರವಮಾಡಿ ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೩ಕ್ಕೆ ಮಂಗಳಂ.

———:(***):———

ತ್ರಿ ದೋ ಷ ಂ ಗ ಳು .

ಇನ್ನು ಮುಂದೆ ತ್ರಿದೋಷಂಗಳು ಆತ್ಮಂಗೆ ಸಂಬಂಧವಾದ ಮೂ ರುಪ್ರಕಾರವಾದ ದೋಷಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪ ಮಂಪೇಳುತಿಹರು. ಅವಾವೆಂದೊಡೆ—೮೧ ತೆರದ ವಾತರೋಗವು, ೬೪ ತೆರದ ಪಿತ್ತರೋಗವು, ೨೧೫ ತೆರದ ಶ್ಲೇಷ್ಮರೋಗವೆಂದಿವುತಾವೇ ತ್ರಿ ದೋಷಂಗಳು. ೩೬೦ ವ್ಯಾಧಿರೂಪಮಾದ ಮೂರುಪ್ರಕಾರವಾದ ದೋ

ಷಂಗಳೂ ಈ ತ್ರಿದೋಷಂಗಳೂ ಕೂಡಿ ಒಂದು ಶರೀರಾಕೃತಿಯಾಗಿಪ್ಪು ದು. ಅದು ಹ್ಯಾಗೆಂದೊಡೆ—(ಪಾದಾದಿನಾಭಿಪರ್ಯಂತಂವಾತರೋಗವಿ ಹೋಚ್ಯತೆ॥) ಎಂದು ಹೇಳುತಿಹುದಾದಕಾರಣ, ಅರೆಪಾದದಿಂದಹಿಡಿದು ಕಟಿಪರ್ಯಂತರವೂ ವಾತರೋಗ ಪೂರಿತವಾಗಿಹುದು. ಕಟಿಯಿಂದಕ್ಕ ರಾಂತವಾಗಿ ಪಿತ್ತರೋಗಪೂರಿತವಾಗಿಹುದು. ಕಂಠದಿಂದ ಮಸ್ತಕಪ ರ್ಯಂತರವೂ ಶ್ಲೇಷ್ಮರೋಗ ಪೂರಿತವಾಗಿರುವುದು. ಹೀಂಗೆ ತ್ರಿದೋ ಷಂಗಳುಕೂಡಿಒಂದು ಶರೀರಾಕೃತಿಯಾಗಿರುತಿಹುದು. ಮತ್ತಂ ಈ ತ್ರಿ ದೋಷಂಗಳು ಕಾಲತ್ರಯಂಗಳಲ್ಲಿಯೂ ಪೀಡಿಸುತಿಹವು. ಅದು ಹ್ಯಾಗೆಂ ದೊಡೆ, ಬಾಲನಾಗಿಪ್ಪ ಕಾಲದಲ್ಲಿ ವಾತರೋಗ ಪೀಡಿಸುತಿಹುದು. ಯೌ ವನನಾಗಿದ್ದಾಗ ಪಿತ್ತರೋಗ ಪೀಡಿಸುತಿಹುದು. ವೃದ್ಧನಾಗಿದ್ದ ಕಾಲದ ಲ್ಲಿ ಶ್ಲೇಷ್ಮರೋಗ ಪೀಡಿಸುತಿಹುದು. ಮತ್ತಂತುಮಲ್ಲದೆಯು ಈ ತ್ರಿ ದೋಷಂಗಳು ಕ್ರೋಧ ಮೂಢ ಶಾಂತತ್ವದಿಂದಲೊಪ್ಪುತಿಹವು. ಅದು ಹ್ಯಾಗೆಂದೊಡೆ, ವಾತರೋಗಿಯಾದ ಪುರುಷನು ಮೂಢನಾಗಿರುತಿಹನು. ಪಿತ್ತರೋಗಿಯಾದ ಪುರುಷನು ಕೋಪಿಯಾಗಿರುತಿಹನು. ಶ್ಲೇಷ್ಮರೋ ಗಿಯಾದ ಪುರುಷನು ಶಾಂತನಾಗಿರುತಿಹನು. ಹೀಂಗೆ ತ್ರಿದೋಷಂಗ ಳು ಕ್ರೋಧ ಮೋಢ ಶಾಂತತ್ವದಿಂದಲೊಪ್ಪುತಿಹವು. ಮತ್ತಂತವು ಲ್ಲದೆ ವಾತರೋಗಿಯಾದ ಪುರುಷಂಗೆ ಕಡುಕಾರ, ಕಡುಬಿಸಿಯೇ ಚಿ ತ್ಸೆಯಾಗಿರುತಿಹುದು. ಸದಾ ಮೈಮುಚ್ಚಿಕೊಂಡಿರುತಿಹುದೇ ಅದು ಪ್ರಕೃತಿಯು. ಪಿತ್ತರೋಗಿಯಾದ ಪುರುಷಂಗೆ ಶೈತ್ಯಾಮ್ಲವಾದ ಪದಾ ರ್ಥಂಗಳೇ ಚಿಕಿತ್ಸೆಯಾಗಿರುವುದು. ಸದಾ ಮೈತೆರೆದುಕೊಂಡಿರುವು ದೇ ಅದರ ಪ್ರಕೃತಿಯು. ಶ್ಲೇಷ್ಮರೋಗಿಯಾದ ಪುರುಷಂಗೆ ಸೀಬೆ ಲವಣ ಪದಾರ್ಥಂಗಳೇ ಚಿಕಿತ್ಸೆಯಾಗಿರುತಿಹುದು. ಸದಾ ಮೈಮುಚ್ಚಿ ಯು ಮುಚ್ಚದಿರುವುದೇ ಅದರ ಪ್ರಕೃತಿಯು. ಅದುಕಾರಣವಾಗಿ ಇ ವುತಾವೇ ತ್ರಿದೋಷಂಗಳ ಭೇದವನ್ನು ವಿಚಾರವಾಗಿ ತಿಳಿದುಕೊಂಬು ವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೬ಕ್ಕೆ ಮಂಗಳಂ.

———:(***):———

ಸದ್ಭಾವತ್ರಯಂಗಳು.

ಇನ್ನು ಸದಾವತ್ರಯಂಗಳು ಶರೀರಸಂಬಂಧಿಯಾದಾತ್ಮರುಗಳ

ಗೆ, ಸತ್=ಸಲ್ಲಿತಾದ ಭಾವತ್ರಯಂಗಳು ಮೂರುಪ್ರಕಾರವಾದ ಭಾವಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪವಂ ಪೇಳುತಿಹರು. ಆವಾವೆಂದೊಡೆ, ಅರಿವು ಮರವೆಗಳಿಲ್ಲದೆ ಸದಾ ಬೆಳಗುವ ಸುಜ್ಞಾನಪ್ರಕಾಶವೇ ಪ್ರಕಾಶವೆಂಬ ಭಾವವು. ಸತ್ಯ, ಸದಾಚಾರ, ಸನ್ಮಾರ್ಗ, ಸದ್ವರ್ತನೆ ಹಿಡಿದು ನಡೆವುದೇ ಪ್ರವರ್ತನವೆಂಬಭಾವವು. ಸದ್ಭಾವತ್ರಯಂಗಳ ಹಸಿಗೆಯು ವಿಚಾರವೆಂಬ ಈ ಗುಣಂಗಳು ಸ್ತ್ರೀಯರುಗಳಲ್ಲಿರಲಿ, ಪುರುಷರುಗಳಲ್ಲಿರಲಿ ವೆಳ್ಳಿದಾದ ಭಾವಂಗಳಾಗಿರುತಿಹವು. ಇನ್ನೊಂದು ಪ್ರಕಾರದಿಂದ ಪೇಳಲ್ಪಡುಗುಂ, ಈ ಸದ್ಭಾವತ್ರಯಂಗಳೆಲ್ಲವಿಕರಿಸಿ ಕೆಟ್ಟ ಅಜ್ಞಾನಕೊಳಗಾದುದೇ ಪ್ರಕಾಶವಿಕೃತಿಭಾವವು. ಸತ್ಯ; ಸದಾಚಾರ, ಸನ್ಮಾರ್ಗ, ಸದ್ವರ್ತನೆಗಳೆಲ್ಲವಿಕರಿಸಿ ಕೆಟ್ಟ ದುರಾಚಾರ, ದುರ್ಮಾರ್ಗ, ದುರ್ವರ್ತನೆಗೊಳಗಾದುದೇ ವರ್ತನ ವಿಕೃತಿಭಾವವು. ತಮ್ಮಕುಲ ಗುರು ಇಷ್ಟದೈವದಮೇಲಣ ಮಮಕಾರವೆಲ್ಲವಿಕರಿಸಿ ಕೆಟ್ಟ ದುರ್ಮಾರ್ಗಕೊಳಗಾದುದೇ ಮೋಹನ ವಿಕೃತಿಭಾವವು. ಇವುತಾವೇ ದುರ್ಭಾವತ್ರಯಂಗಳು. ಈ ದುರ್ಭಾವತ್ರಯಂಗಳಿಗೆ ವಿಚಾರವಾಗಿ ಹಸಿಗೆಯ ಮಾಡಿ ನಿರೂಪಿಸುತಿಹರು. ಅರಿವಿಂದ=ತನ್ನ ಜಾತಿಗೋತ್ರ ಜ್ಞಾನದಿಂದ ನಾನೇ ನಾನೆಂದು ಅಹಂಕರಿಸುವ ಜಡಭಾವದಿಂದ ಅಚೇತನವಪ್ಪಜ್ಞಾನ ಭಾವನೆಯಿಂದ ವಿಪ್ರನೇಮೊದಲು ಮ್ಲೇಛನೇ ಕಡೆಯಾದ ನೂರೊಂದು ಕುಲ, ಹದಿನೆಂಟುಜಾತಿಗಳೊಳಗೆ ಆವನಾನೋರ್ವ ಪುರುಷನು ಅಹಂಕಾರವನ್ನೈದಿಹನಾಗಿ ನನ್ನಜಾತಿಯೇಹೆಚ್ಚು, ನನ್ನ ಕುಲವೇ ಹೆಚ್ಚೆಂಬ ಸರ್ವಭಾವವನ್ನೈದಿದನಾಗಿ ತಳದಿಪ್ಪನಾದಕಾರಣ ಜ್ಞಾನವಿಕೃತಿಭಾವವು ಜಡಾಜಡಮಿಶ್ರದಿಂ ಜಡವೆಂದಡೆ ದೇಹ, ಅ ಜಡವೆಂದಡೆ ಆತ್ಮನು, ಮಿಶ್ರದಿಂ ಈ ದೇಹಾತ್ಮರುಗಳ ಸಂಪರ್ಕದಿಂದೇ ಪೇಹಾದಿ ಶರೀರವನ್ನೇ ಆಸ್ಪದವಮಾಡಿಕೊಂಡು ಹಲವುಪ್ರಯತ್ನದಿಂದ ಅಂಡಲೆದು ತನ್ನಸಂಗಕ್ಕೆ ಬಾರದಿದ್ದಲ್ಲಿ ಕೊಂದು ಒಡಿದು ಬಾಧೆಬಡಿಸಿ ವ್ಯವಹರಿಸುತಿಹನಾಗಿ ಒಂದಾನೊಂದು ಕುಕ್ಕುಟನೋಪಾದಿಯಲ್ಲಿ ಬಲಾತ್ಕಾರದಿಂದ ವರ್ತಿಸುತಿಪ್ಪನಾದಕಾರಣ ವರ್ತನವಿಕೃತಿಭಾವವು ನಿಜಮಂಮರೆದು ತಾನಾರೆಂಬ ತನ್ನ ಸ್ವರೂಪವನ್ನು ವಿಮೋಚನಮಾಡಿ ಜಡಭಾವದಿಂದ ಅಚೇತನವಪ್ಪ ದೇಹಭಾವನೆಯಿಂದ ಅಹಂಭಾವವನೊಮ್ಮೆಯು ವಿಸರ್ಜಿಸದಿರುವ ಕಾರಣದಿಂದ ಮೋಹನ ವಿಕೃತಿಭಾವವು ಈ ಪ್ರಕಾರದಿಂದ ಹೇಳ

ಲ್ಪಟ್ಟವುತಾವೇ ದುಭ್ರಾಸವತ್ರಯಂಗಳ ಭೇದದ ವಿಚಾರವನ್ನು ತಿಳಿದು ಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೭ಕ್ಕೆ ಮಂಗಳಂ.

## ಮನತ್ರಯಂಗಳು.

ಇನ್ನು ಮನತ್ರಯಂಗಳು ಶರೀರಸಂಬಂಧಿಗಳಾದಾತ್ಮರುಗಳ್ಲಿ ಮೂರುಪ್ರಕಾರವಾದ ಮನಂಗಳೆಂದುಂಟಾಗಿರುತಿಹವು, ಅವರ ಸ್ವಸ್ವ ರೂಪವಮಂ ಪೇಳುತಿಹರು. ಆವಾವೆಂದೊಡೆ—ಮನ, ಮನನ, ಮನ ನೀಯುವೆಂದಿವುತಾವೇ ಮನತ್ರಯಂಗಳು. ಈಪ್ರಕಾರವಾದ ಮನಂಗ ಳಿಗೆ ವಿವರ ವಿಚಾರವಾಗಿ ಹಸಿಗೆಯುಮಾಡಿ ನಿರೂಪಿಸುತಿಹರು. ಮನ ವೆಂಬರ್ಥದೊಳಗೇನಹೇಳುವದೆಂಡಡೆ, ತನ್ನ ಹೇಳುವುದು ಜ್ಞಾತೃಸ್ವರೂ ಪವಾದ ಆತ್ಮಲಕ್ಷಣವೊಂದನ್ನೇ ಕುರುಹಿಡಿವುದು. ಮನವು-ಮನನವೆಂ ಬರ್ಥದೊಳಗೇನಹೇಳುವುದೆಂಡಡೆ, ತನ್ನಿಂದ ಆತ್ಮನಿಂದ ಅರಿವಜ್ಞಾನವ ನ್ನು ಹೇಳುವುದು, ಅರಿವುಲಕ್ಷಣವೊಂದನ್ನೇ ಕುರುಹಿಡಿವುದು. ಮನನ ವು, ಮನನೀಯವೆಂಬರ್ಥದೊಳಗೇನ ಹೇಳುವುದೆಂಡಡೆ, ಜ್ಞಾನದಿಂದ= ಅರಿವಿನಿಂದ, ಅರುಹಿಸಿಕೊಂಬ=ತಿಳಿಸಿಕೊಳ್ವ ವಸ್ತು ಒಂದೇಳುವುದು. ಘಟಪಟಾದಿ ಪದಾರ್ಥಂಗಳನ್ನೇ, ಕುರುಹಿಡಿವುದು=ಹೇಳುವುದು ಎಂಬ ಲ್ಲಿ ಮನ ಮನನ ಮನನೀಯುವೆಂದರು, ತತ್ಪದ ತ್ವಂಪದ ಅಸಿಪದವೆಂದ ರು, ಭರ್ಗಪದ ಮಹಿಮಾಪದ ದ್ವಿಪದವೆಂದರು, ತಾನು ತನ್ನರಿವು ಶಿವ ತತ್ವವೆಂದರು, ಆತ್ಮತತ್ವ ವಿದ್ಯಾತತ್ವ ಶಿವತತ್ವವೆಂದರು, ಜ್ಞಾತೃ ಜ್ಞಾನ ಜ್ಞೇಯುವೆಂದರೂ ಒಂದೇನಾಮಪರ್ಯಾಯವಾಗಿಪ್ಪದು. ಅದುಕಾರಣ ವಾಗಿ ಈ ಪ್ರಕಾರದಿಂದ ಹೇಳಲ್ಪಟ್ಟವುತಾವೇ ಮನತ್ರಯಂಗಳ ಭೇದ ದ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩೮ಕ್ಕೆ ಮಂಗಳಂ.

## ತ್ರಿ ಕ ರ ಣ ಂ ಗ ಳು .

ಇನ್ನು ತ್ರಿಕರಣಂಗಳು ಶರೀರಸಂಬಂಧಿಯಾದಾತ್ಮರುಗಳಿಗೆ ಮೂ ರುಪ್ರಕಾರವಾದ ಕರಣಂಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪ ಮಂ ಹೇಳುತಿಹರು. ಆವಾವೆಂದೊಡೆ—ಮಾನಸಕರಣ, ವಾಚಕಕರಣ,

ಕಾಯಕಕರಣವೆಂಬಿವುತಾವೇ ತ್ರಿಕರಣಂಗಳು. ಈ ಮೂರುಪ್ರಕಾರ ವಾದ ಕರಣಂಗಳಿಗೆ ವಿವರ ವಿಚಾರವಾಗಿ ಹಸಿಗೆಯಮಾಡಿ ನಿರೂಪಿಸುತಿಹರು. ಮಾನಸವೆಂದೆಡೆರ್ಥವೇನೈಯ್ಯಾ ಸ್ವಾಮಿಯೆಂದು ಬೆಸಗೊಂಡೊಡೆ, ಮನದಲ್ಲಿ ನೆನಹುವ ಅವುದಾನೊಂದು ಕಾರ್ಯವನ್ನು ತನ್ನಂತರಂಗದೊಳಗೆ ಯೋಚಿಸುವುದು. ವಾಚಕವೆಂದೆಡೆರ್ಥವೇನೈಯ್ಯಾ ಸ್ವಾಮಿಯೆಂದುಬೆಸಗೊಂಡೊಡೆ, ತನ್ನಂತರಂಗದೊಳಗೆ ಯೋಚಿಸುವಂತಾ ಕಾರ್ಯವನ್ನು ಪರರಕೂಡೆ ಹೇಳುವುದು. ಕಾಯಕವೆಂದೆಡೆರ್ಥವೇನಯ್ಯಾ ಸ್ವಾಮಿಯೆಂದು ಬೆಸಗೊಂಡೊಡೆ, ತನುಮುಟ್ಟಿ ಮಾಡುವುದು, ಅಪರರ ಕೂಡೆ ಹೇಳಿದಂತಾ ಕಾರ್ಯವನ್ನು ತನ್ನಂಗಬಳಲಿ ಆಯಾಸಂಬಟ್ಟು ಅನುಗೈಯ್ಯುವುದು. ಈ ತ್ರಿಕರಣಂಗಳು ಪರಶಿವನಿಂದುಂಟಾದ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳೇ ಲೋಕದ ಸಕಲಾತ್ಮರುಗಳಲ್ಲಿ ಮಾನಸ, ವಾಚಕ, ಕಾಯಕವೆಂಬ ತ್ರಿಕರಣಂಗಳಾಗಿರುತಿಹವು. ಅದು ಹ್ಯಾಗೆಂದೊಡೆ, ಒಬ್ಬಾನೊಬ್ಬ ಬ್ರಾಹ್ಮಣನಲ್ಲಿಯೂ ತ್ರಿಕರಣಂಗಳುಂಟು. ಅದು ಹ್ಯಾಗೆಂದೊಡೆ, ಒಬ್ಬಾನೊಬ್ಬ ಬ್ರಾಹ್ಮಣನು ನಾನು ಹೀಗೆಮೂಢನಾಗಿರಬಾರದೆಂದು ಇನ್ನು ಶಾಸ್ತ್ರವಹೇಳುವಂತಾ ಗುರುಗಳನಾಶ್ರೈಸಿ ಶಾಸ್ತ್ರಾಭ್ಯಾಸವಮಾಡಿ ದೊಡ್ಡ ವಿದ್ವಾಂಸನಾಗಬೇಕೆಂದು ತನ್ನಂತರಂಗದೊಳಗೆ ಯೋಚಿಸುವನು. ಅದೇ ಮಾನಸ, ವಾಚಕ, ಆ ಯೋಚಿಸಿದ ಹಾಂಗೆ ಉದಯಕಾಲದೊಳೆದ್ದು ಶುಚಿರ್ಭೂತನಾಗಿ ಆ ಶಾಸ್ತ್ರವ ಹೇಳುವಂತಾ ಗುರುಗಳ ಸಮೀಪಕ್ಕೆಹೋಗಿ ದೀರ್ಘದಂಡನಮಸ್ಕಾರ ಮುಂತಾದ ಭಕ್ತ್ಯೋಪಚಾರಂಗಳಿಂದ ಸ್ವಾಮಿ! ನಾನು ನಿಮ್ಮಪಾದಸೇರಿ ದೊಡ್ಡವನಾಗಬೇಕೆಂದು ಬಂದಿದ್ದೇನೆ. ಎನಗೆ ಶಾಸ್ತ್ರವ ನಿರೂಪಿಸಬೇಕೆಂದು ಹೇಳಿಕೊಂಬುವುದೇ ವಾಚಕ, ಕಾಯಕ, ಒಳ್ಳೆತು, ಹಾಗಾಗಲಿಯೆಂದು ಆ ಗುರುಗಳು ಸಮ್ಮತಿಬಟ್ಟಲ್ಲಿ ಆ ಗುರುಗಳು ಹಸ್ತದಿಂದ ಪುಸ್ತಕವತೆಗದುಕೊಂಡು ಶಿರಬಾಗಿ ಪಾಠವ ಹೇಳಿಸಿಕೊಂಡು ತನ್ನಂಗಬಳಲಿ ಆಯಾಸಬಟ್ಟು ಶಾಸ್ತ್ರಾಭ್ಯಾಸವ ಮಾಡುವುದೇ ಕಾಯಕ. ಹೀಗೊಬ್ಬಾನೊಬ್ಬ ಬ್ರಾಹ್ಮಣನಲ್ಲಿಯೂ ತ್ರಿಕರಣಂಗಳುಂಟಾಗಿರುತಿಹವು. ಮತ್ತಂತುಮಲ್ಲದೆ ಒಬ್ಬಾನೊಬ್ಬ ಕ್ಷತ್ರಿಯನು ನಾನು ಹೀಗೆ ಹತ್ತುಹಳ್ಳಿ, ಹತ್ತೂರು, ಹತ್ತುಗ್ರಾಮಗಳನಾಳಿಕೊಂಡಿದ್ದರೆ ನಮ್ಮ ಅರಮನೆಯ ರಾಣಿವಾಸಿಯರಿಗೆ ರಾವುತರೇ ಮುಂತಾದ ಪ್ರಜೆಪರಿವಾರಕ್ಕೆ ರಾ

ತೀಳು; ಸಂಬಳಸಾರಿಗೆ ಐದಿಬರುವುದಿಲ್ಲ. ಇನ್ನು ಪರರಾಯರುಗಳ ಜೇಕಕೋಶಂಗಳನ್ನು ಒತ್ತಿ ಆಳಬೇಕೆಂದು ತನ್ನಂತರಂಗದಲ್ಲಿ ಯೋಚಿಸುವನು, ಅದೇ ಮಾನಸ, ವಾಚಕ, ಆಲೋಚಿಸಿದಹಾಂಗೆ ಉದಯಕಾಲದಲ್ಲಿಎದ್ದು ಚಾವಡಿಗೆಬಂದು ಸದರಮೇಲೆ ಕೂತುಕೊಂಡು ಬಂದಂತಾ ಮಂತ್ರಿ ಪ್ರಧಾನಿಗಳಕೂಡೆ ಏನಿರಯ್ಯಾ ನಾವು ಇಂತಾದ್ದೊಂದು ಕಾರ್ಯವನ್ನು ಯೋಚಿಸಿದ್ದೇವೆ, ಆದೀತೊ ಆಗದೊ ಎಂದುಕೇಳುವನು. ಅದೇ ವಾಚಕ, ಕಾಯಕ, ಹಾಗೇಆಗಲಿ ಸ್ವಾಮಿ, ಮಾಡುವಕಾರ್ಯವೆ ಮಾಡಲೇಬೇಕು, ಸುಮ್ಮನಿದ್ದರಾಧೀತೆಂದು ನಾಲ್ವರು ಮಂತ್ರಿಪ್ರಧಾನಿಗಳು ಕೂಡಿ ಹೇಳಿದಲ್ಲಿ ಕರಿ ತುರಗ ರಥ ಪದಾತಿಯೆಂಬ ಚತುರಂಗಸೇನೆಯೊಡನೆ ಹೋಗಿ ಪರರಾಯರುಗಳ ಕೋಟೆಕೊತ್ತಳವನ್ನು ಮುತ್ತಿ, ತಳ್ಳಿ ಸುರಂಗವನಡಸಿ ತನ್ನಂಗಬಳಲಿ, ಆಯಾಸಂಬಟ್ಟು ಸಾಧಿಸುವನು. ಅದೇ ಕಾಯಕ. ಹೀಗೆ ಕ್ಷತ್ರಿಯನಲ್ಲಿಯೂ ತ್ರಿಕರಣಂಗಳುಂಟಾಗಿರುತಿಹವು. ಮತ್ತಂತುಮಲ್ಲದೆ ಒಬ್ಬಾನೊಬ್ಬ ವೈಶ್ಯನು ನಾವುಹೀಗೆ ಎಡಬಲದ ಸಂತೆಪೇಟೆಗಳಲ್ಲಿ ತಿರುಗಾಡಿಕೊಂಡಿದ್ದರೆ ನಮ್ಮ ಗೃಹಸಾಧನ ಐದಲಾರದು. ಇನ್ನು ದೂರದ ಪೇಟೆಮನೆಗಳಿಗೆಹೋಗಿ ಅನರ್ಘವಾದ ವಸ್ತುಗಳಂತಂದು ಕ್ರಯ ವಿಕ್ರಯಂಗಳಂಮಾಡಿ ದ್ರವ್ಯವಸಾಧಿಸಿ ಸುಖದಲ್ಲಿ ಊಟವಮಾಡಬೇಕೆಂದು ತನ್ನಂತರಂಗದಲ್ಲಿ ಯೋಚಿಸುವನು. ಅದೇ ಮಾನಸ, ವಾಚಕ, ಆಲೋಚಿಸಿದಹಾಗೆ ಉದಯಕಾಲದಲ್ಲೆದ್ದು ಎಡಬಲದ ವ್ಯಾಪಾರಿಗಳಕೂಡೆ ಏನಿಕ್ಕೆಯ್ಯಾ ನಾವಿಂತಾದ್ದೊಂದು ದೂರದಪೇಟೆಮನೆಗಳಿಗೆ ಹೋಗುತ್ತೇವೆ. ನೀವು ಬಂದೀರಾಯೆಂದು ಕೇಳುವನು. ಅದೇ ವಾಚಕ, ಕಾಯಕ, ಒಳ್ಳೇದು ಹಾಗೆಯೇಆಗಲಿ, ನಿಮ್ಮಸಂಗಡವಾದಬಳಿಕ ನಾವು ಬಂದೇವುಯೆಂದು ನಾಲ್ವರು ವ್ಯಾಪಾರಿಗಳೂ ಸಮ್ಮತಪಟ್ಟು ಅವರು ತಾವು ಎತ್ತು, ಕಂಟಲೆ, ತೊತ್ತುಭಂಟರು, ಬುತ್ತಿ, ರೊಟ್ಟಿಸಹವಾಗಿ ಕೈಯಲ್ಲಿ ವೆಚ್ಚಕ್ಕೆ ಸಾವಿರಸಂಖ್ಯೆ ಹೊನ್ನುಗಳನ್ನು ತೆಗದುಕೊಂಡು ನಾಗೂರು, ನಾಗಪಟ್ಟಣ, ಮುಂತಾದ ವ್ಯಾಪಾರವಿದ್ದಂತಾ ಸ್ಥಳಗಳಿಗೆಹೋಗಿ ತನ್ನಂಗಬಳಲಿ ಆಯಾಸಂಬಟ್ಟು ವ್ಯಾಪಾರವಮಾಡಿ ದ್ರವ್ಯವ ಗಳಿಸುವನು. ಅದೇ ಕಾಯಕ, ಹೀಗೆ ವೈಶ್ಯನಲ್ಲಿಯೂ ತ್ರಿಕರಣಂಗಳುಂಟಾಗಿರುತಿಹವು. ಒಬ್ಬಾನೊಬ್ಬ ಶೂದ್ರನು ನಾನುಹೀಗೆ ಕಾಡುಮೇಡಿನ ಹೊಲ ಗದ್ದೆಗಳ ಮಾಡಿಕೊಂಡಿದ್ದರೆ ನಮ್ಮ

ಗೃಹಕ್ಕೆ ಧಾನ್ಯಾದಿಗಳು ಐದಿಬರುವದಿಲ್ಲ. ಇನ್ನು ನೆತ್ತಗಂಟು ನೀರು ಹರಿಯುವ ಹೊಲ ಗದ್ದೆಗಳನ್ನು ಹಿಡಿದು ವಳ್ಳಿತಾಗಿ ವ್ಯವಸಾಯವಮಾಡಿ ಧಾನ್ಯಾದಿಗಳಬೆಳೆದು ಸುಖದಲ್ಲಿ ಊಟವಮಾಡಬೇಕೆಂದು ತನ್ನಂತರಂಗದಲ್ಲಿ ಯೋಚಿಸುವನು. ಅದೇ ಮಾನಸ, ವಾಚಕ. ಆಲೋಚಿಸಿದ ಹಾಗುದಯಕಾಲದಲ್ಲೆದ್ದು ಆ ಭೂಮಿಗೆ ಅಧಿಕಾರಿಗಳಾದ ಗೌಡ ಶಾನುಭೋಗರ ಸಮೀಪಕ್ಕೆಹೋಗಿ ಸ್ವಾಮಿ ಆ ಗೌಡ ತೆರುವದಕ್ಕಿಂತಲೂ ನಾನು ಒಂದುಹೊನ್ನು ಹೆಚ್ಚಾಗಿ ತೆತ್ತೇನು, ಆ ಭೂಮಿಯನ್ನು ನನಗೆ ಪಾಲಿಸಬೇಕುಯೆಂದು ಹೇಳಿಕೊಂಬನು. ಅದೇ ವಾಚಕ, ಕಾಯಕ. ಒಳ್ಳೇದು ಹಾಗೇಆಗಲಿ, ನಮಗಾರಾದರೇನು, ಒಂದುಹೊನ್ನು ನಮಗೆ ಹೆಚ್ಚಾಗಿ ತೆತ್ತವನೇ ವಕ್ಕಲು ಎಂದು ಗೌಡ ಶಾನುಭೋಗರು ನಂಬಿಗೆಯಚೀಟಿಯನ್ನುಬರದು ಅಪ್ಪಣೆಕೊಟ್ಟು ಕಳುಹಿಸಿದಲ್ಲಿ ಎತ್ತು, ಜತ್ತಿಗೆಗಳಿಹ, ಮುಟ್ಟುಸಹವಾಗಿ ಹೋಗಿ ತನ್ನಂಗಬಳಲಿ ಆಯಾಸಂಬಟ್ಟು ವ್ಯವಸಾಯಮಾಡಿ ಧಾನ್ಯಾದಿಗಳನ್ನು ಬೆಳೆಯುವನು. ಅದೇ ಕಾಯಕ, ಹೀಗೆ ಶೂದ್ರನಲ್ಲಿಯೂ ತ್ರಿಕರಣಂಗಳುಂಟಾಗಿರುತಿಹವು. ಇದೇ ರೀತಿಯಲ್ಲಿ ಆವುದಾನೊಂದು ಕಾರ್ಯವನ್ನು ತನ್ನಂತರಂಗದಲ್ಲಿ ಯೋಚಿಸುವದು, ಆಲೋಚಿಸಿದಹಾಗೆ ಆ ಕಾರ್ಯವನ್ನು ಪರರಕೂಡೆ ಹೇಳುವದು, ಆ ಹೇಳಿದಕಾರ್ಯದಹಾಗೆ ಆ ಕಾರ್ಯವನ್ನು ಅನುಗ್ರೈಯ್ವುದು, ಹೀಗೆ ಸಕಲಾತ್ಮರುಗಳಲ್ಲಿಯೂ ತ್ರಿಕರಣಂಗಳುಂಟಾಗಿರುತಿಹವು. ಅದುಕಾರಣವಾಗಿ ತ್ರಿಕರಣಂಗಳ ಭೇದದ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟ್ಟು ೩ಕ್ಕೆ ಮಂಗಳಮಹಾ.

---

## ಪಂಚಾಗ್ನಿಗಳುತ್ಪತ್ತಿಯು.

ಇನ್ನು ಮುಂದೆ ಪಂಚಾಗ್ನಿಗಳ ಉತ್ಪತ್ತಿಯು ಶರೀರಾತ್ಮಂಗೆ ಸಂಬಂಧವಾದ ದೇಹದಲ್ಲಿ ಐದುಪ್ರಕಾರವಾದ ಅಗ್ನಿಗಳೆಂದುಂಟಾಗಿರುತಿಹವು, ಅವರ ಸ್ವಸ್ವರೂಪಮಂ ಪೇಳುತಿಹರು. ಆವಾವೆಂದೊಡೆ, ಉದರಾಗ್ನಿ-ಆತ್ಮನು ಅನುಭವಿಸಿದಂತಾ ಅನ್ನ ಪಾನಾದಿಗಳನ್ನು ಜೀರ್ಣೀಕರಿಸಿ ಒಡಲತಾಪಿಸುವಂತಾ ದೀಪನತಾಪವೇ ಉದರಾಗ್ನಿಯು. ಮಂದಾಗ್ನಿ-ಶರೀರಕ್ಕೆ ಶೈತ್ಯವಾವರಿಸಿ ಹಸಿವು ತೃಷೆಗಳುನಿಂದ ನಿರ್ದೀಪನ

ತಾಪವೇ ಮಂದಾಗ್ನಿಯು. ಕಾಮಾಗ್ನಿ-ವಿಷಯವಿಕಾರದ ವಿರಹಸಂತಾಪವೇ ಕಾಮಾಗ್ನಿಯು. ಶೋಕಾಗ್ನಿ-ನಾನಾ ದುಃಖಾಗ್ನಿಯಲ್ಲಿ ಜೀವನ ತಾಪವೇ ಶೋಕಾಗ್ನಿಯು. ವಡಬಾಗ್ನಿ-ಮಹೇಶ್ವರಜ್ವರತಾಪವೇ ಬಡಬಾಗ್ನಿಯು. ಇಂತೀಪ್ರಕಾರದಿಂದ ಹೇಳಲ್ಪಟ್ಟಂತಾ ಇವುತಾಪೇ ಪಂಚಾಗ್ನಿಗಳ ಭೇದವು ಐದುಪ್ರಕಾರವಾದ ಅಗ್ನಿಗಳ ಹಸಿಗೆಯ ವಿಚಾರವನ್ನು ತಿಳಿದುಕೊಂಬಲ್ಲಿ ಇವಕ್ಕೆ ನಿವೃತ್ತಿಯುಂಟೋ ಇಲ್ಲವೋ ಎಲೆ ಸ್ವಾಮಿಯೆಂದು ಬೆಸಗೊಂಡೊಡೆ, ಉಂಟು ಅದುಹ್ಯಾಗೆಂದೊಡೆ—ಉದರಾಗ್ನಿ ವೆಗ್ಗಳಿಸಿದರೆ ಅನ್ನಪಾನಂಗಳ ತೆಗದುಕೊಂಡಲ್ಲಿ ಪರಿಹಾರವಪ್ಪುದು. ಮಂದಾಗ್ನಿವೆಗ್ಗಳಿಸಿದರೆ ಕಟುಕ ಕಷಾಯಂಗಳಂ ತೆಗದುಕೊಂಡಲ್ಲಿ ಪರಿಹಾರವಪ್ಪುದು. ಶೋಕಾಗ್ನಿವೆಗ್ಗಳಿಸಿದಲ್ಲಿ ಹೋದಂತಾವಸ್ತು ಮರಳಿ ದೊರಕೊಂಡಲ್ಲಿ ಪರಿಹಾರವಪ್ಪುದು. ವಡವಾಗ್ನಿ ವೆಗ್ಗಳಿಸುವುದೇಇಲ್ಲ. ಅಥವಾ ಒಂದುವೇಳೆ ವೆಗ್ಗಳಿಸಿದ್ದೇಯಾದರೆ ಪ್ರಾಣವೇ ಪ್ರಾಯಶ್ಚಿತ್ತವಲ್ಲದೆ ಮರಳಿ ಅದಕ್ಕೆ ಪ್ರಾಯಶ್ಚಿತ್ತವಿಲ್ಲ. ಅದು ಹ್ಯಾಗೆಂದೊಡೆ, ವೆಳ್ಳಿತಾಗಿ ಒಂದುಕೊಪ್ಪರಿಗೆಯಲ್ಲಿ ನೀರುಕಾಯಿಸಿ ಒಂದು ಕಡಲೇಕಾಳಷ್ಟು ಹಾಕಿದರೆ ಆ ಅಗ್ಗಣಿಯೆಲ್ಲಾ ತಣ್ಣಗಾಗುವಂತಾ ಜಾತಿಸ್ಪಟೀರವನ್ನು ಸರ್ವಾಂಗಕ್ಕೆ ಲೇಪಿಸಿದರೆ ಅಗ್ನಿ ಉಪಶಮನಮಾತ್ರವೆಲ್ಲದೆ ಜ್ವರಪರಿಹಾರವಾಗಲರಿಯದು. ಈ ಐದುಪ್ರಕಾರವಾದ ಅಗ್ನಿಗಳ ಹಸಿಗೆಯ ವಿಚಾರವನ್ನು ತಿಳಿದುಕೊಂಬುವುದು ತತ್ವಜ್ಞಾನಿಗಳು.

ಅಂತು ಕಟಸ್ಟು ೪ಂಕ್ಕೆ ಮಂಗಳಮಹಾ.

ಕರಣಹಸಿಗೆ ಸಂಪೂರ್ಣವು.



ಶ್ರೀಗುರುಬಸವಲಿಂಗಾಯನಮಃ.

## ಮಿಶ್ರಾರ್ಪಣ ಪ್ರಾರಂಭವು.

ಶ್ರೀ, ಷಡ್ಗುಣೈಶ್ವರ್ಯಸಂಪತ್ಕರವೆನಸುಳ್ಳಂತ ಗುರು ಗುಣಗಂಭೀರ
ರುಚಿಯುನುಳ್ಳಂತಾ, ಬಸವ, ಬಕಾರವೇ ಭವಹರಸದ್ರೂಪವಾದ ಗುರುಸ್ವ
ರೂಪು. ಸಕಾರವೇ ಸಕಲಚೈತನ್ಯಸ್ವರೂಪವಾದ ಲಿಂಗಸ್ವರೂಪು. ವ
ಕಾರವೇ ಆನಂದಜಂಗಮಸ್ವರೂಪು. ಅಂತಪ್ಪ ಸದ್ರೂಪವಾದ ಗುರುವ
ನೇ ತನ್ನಂಗದಲ್ಲಿ ಚಿದ್ರೂಪವಾದಲಿಂಗವನೇ ತನ್ನಮನದಲ್ಲಿ ಆನಂದಸ್ವ
ರೂಪವಾದ ಜಂಗಮವನೇ ತನ್ನಾತ್ಮಾಂಗದಲ್ಲಿ ಸಾಹಿತ್ಯವಮಾಡಿಕೊಂಡ
ಸಂಗನಬಸವೇಶ್ವರನೆಂಬ ಗುರುಮೂರ್ತಿಯು, ಲಿಂಗಾಯ=ಲಯಾಗಮಂ
ಗಳಿಗೆ ಕಾರಣವಾದ ತ್ರಿಮುಕ್ತಿಪ್ರದ ಪ್ರವರೇಷ್ಟಲಿಂಗದೇವೇಶಗೋಸ್ಕ
ರನಮಸ್ಕಾರವು ಎಂದು ತತ್ವಾತ್ಮಕ ನಿರ್ಣಯಶಾಸ್ತ್ರವನಿರ್ಮಿಸುವ ಪ್ರ
ಥಮಪ್ರಾರಂಭದಲ್ಲಿ ವಿಘ್ನವಾಗದೆ ನಿರ್ವಿಘ್ನವಾಗಲಿ ಎಂದು ಆಚಾರ್ಯರು
ಗುರುನಮಸ್ಕಾರವಂ ಮಾಡಿ ಈ ಶಾಸ್ತ್ರವನುದ್ಧರಿಸುತ್ತಿದ್ದಕಾರಣ ಶ್ರೀ
ಗುರುಬಸವಲಿಂಗಾಯನಮಃ ಎಂಬ ಶಬ್ದಕರ್ಥವು. ಎನ್ನ ಪರಮೇಶ್ವ
ರನ ಕುಮಾರಕರಾದ ಷಣ್ಮುಖಸ್ವಾಮಿಗಳೇ ಕಕ್ಕಯ್ಯಗಳ ಪ್ರಸಾದ
ಸ್ವರೂಪಿನಿಂದ ಅಕ್ಕನಾಗಲಾಂಬಿಕೆಯೆಂಬ ಚಿಚ್ಛಕ್ತಿಯ ಚಿದ್ಗರ್ಭದಲ್ಲಿ
ಹುಟ್ಟುತ್ತಲೇ ಮರುಗದೆ ಗಿಡದೋಪಾದಿಯಲ್ಲಿ, ಭಕ್ತಿ, ಜ್ಞಾನ, ವೈರಾಗ್ಯ
ವಿಧಿದಾಚರಿಸುವ ಸುರುಚಿರಪಿಂಡಾಂಡಜ್ಞಾನಶೂನ್ಯಾಂತಮಾಡ ಸರ್ವಾ
ಚಾರಸಂಪನ್ನರಾದ ಪರಮವೀರಶೈವ ಷಟ್‌ಸ್ಥಲಜ್ಞಾನಕೋವಿದಚಕ್ರವ
ರ್ತಿಯಪ್ಪ ಚಿಕ್ಕಡನಾಯಕರೆಂಬ ಮಹಾನುಭಾವನ ದಿವ್ಯಕಾಂತಿಮೂ
ರ್ತಿಯಾದ ಚನ್ನಬಸವೇಶ್ವರಸ್ವಾಮಿಗಳು ತಮ್ಮ ಅಂತರಂಗದಲ್ಲಿ ಹು
ಟ್ಟಿದ ಸ್ವಾತ್ಮಜ್ಞಾನವನೇ ಉತ್ಕರಿಸಿ ತಮ್ಮಚಿತ್ತಿನ ಚಿದಂಗಸ್ವರೂಪ
ವಾದ ಜ್ಞಾನಿಗಳು ಅರಿದು ಆನಂದಿಸಿ ಮುಕ್ತಿಯನೈದಲೆಂದು ಕಲ್ಯಾಣಪ
ಟ್ಟಣದ ಅನುಭವಮಂಟಪದಲ್ಲೊಪ್ಪುವ ಸಕಲ ಪ್ರಮಥಗಣಂಗಳಿಗೆ ಸ
ದ್ಬೋಧನಿಮಿತ್ತವಾಗಿ ಚನ್ನಬಸವೇಶ್ವರಸ್ವಾಮಿಗಳು ನಿರೂಪಿಸಿದ ಮಿ
ಶ್ರಾರ್ಪಣವು. ಮತ್ತಂತುಮಲ್ಲದೆ ತಮ್ಮ ಮೌನೀಭೂತರಾದ ನಿತ್ಯಾನಿ
ತ್ಯವಸ್ತುವಿವೇಕ ಇಹಮುತ್ರಾರ್ಥಫಲಭೋಗವಿರಾಗ, ಸಮಾಧಿಷಟ್ಕ
ಸಂಪತ್ತಿ, ಮುಮುಕ್ಷುತ್ವವೆಂಬ ಸಾಧನಚತುಷ್ಟಯಸಂಪನ್ನರಾದ ಸಕ
ಲಸದ್ಭಕ್ತ ಶರಣಜನಂಗಳು ಅರಿದಾಚರಿಸಿ ಕೃತಾರ್ಥರಾಗಲಿಯೆಂಬ ಕೃ

ಪಾಮನಸ್ಸಿನಿಂದೇ ಹಾಲುವುಕ್ಕಿ ಮೇಲುವರಿದೋಪಾದಿಯಲ್ಲಿ ತಮ್ಮ ಸ್ವಾನುಭಾವಪ್ರಸನ್ನೋತ್ಕೃಷ್ಟವಾಕ್ಯಂಗಳಿಂದುಪದೇಶಿಸಿದ ಮಿಶ್ರಾರ್ಪಣವೆಂಬ ಅಭಿಧಾನವನುಳ್ಳ ಉತ್ತರಪ್ರಕರಣವು ಎಂಬಲ್ಲಿ ಈ ಶಾಸ್ತ್ರಕ್ಕೆ ಮಿಶ್ರಾರ್ಪಣವೆಂಬಭಿಧಾನವು ಏನುಕಾರಣಕ್ಕೆ ಬಂದಿತೆಲೆಸ್ವಾಮಿಯೆಂದು ಬೆಸಗೊಂಡೊಡೆ, ಮಿಶ್ರವೆಂದೊಡೆ, ಪದಾರ್ಥ, ಅರ್ಪಣವೆಂದೊಡೆ ಲಿಂಗಾರ್ಪಣವು. ಆ ಲಿಂಗಾರ್ಪಣದಸಕೀಲಂಗಳನ್ನು ಹೇಳುವಶಾಸ್ತ್ರವು. ಅದು ಹ್ಯಾಗೆಂದೊಡೆ, ಹಿಂದೆ ತತ್ವವಿಭಾಗೆಯೆಂಬ ಅಭಿಧಾನವನುಳ್ಳ ಪೂರ್ವಪ್ರಕರಣದಲ್ಲಿ ಹೇಳಿದ ಸಕಲತತ್ವಂಗಳೂ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆಕೂಡಿ ಪ್ರಕೃತಿತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರಗತಿಗಲೊಳಗೆ ತಂದು ಸಂಹರಿಸುವದಕ್ಕೆ ಕಾರಣವಾಗಿರುತ್ತಿಹವು. ಇತ್ತ ಗುರುಕಾರುಣ್ಯಮಂಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಅವೆಲ್ಲಾ ನಿವೃತ್ತಿಯಾಗಿಹೋಗಿ ಮಂತ್ರತತ್ವಂಗಳಾಗಿರುತಿಹವು. ಅಂತಪ್ಪ ಮಂತ್ರತತ್ವಂಗಳಾದ ನಿರ್ಮಲಪದಾರ್ಥಂಗಳನ್ನು ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಮುಖದಿಂದ ಇಷ್ಟಪ್ರಾಣಭಾವಲಿಂಗಂಗಳಿಗೆ ಸಮರ್ಪಿಸಿಕೊಂಬಂತಾ ಭೇದವನೇ ಹೇಳುತಿಹುದಾದಕಾರಣ ಈ ಶಾಸ್ತ್ರಕ್ಕೆ ಮಿಶ್ರಾರ್ಪಣವೆಂಬ ಅಭಿಧಾನವು ಪ್ರಸಿದ್ಧವಾಯಿತೆಂದರಿವುದು. ಅರ್ಪಿತರೂಪಾಗಿಬಂದ ಸಕಲಪದಾರ್ಥಂಗಳನ್ನು ಕಾಯದಕ್ಕೈಯಿಂದ ಇಷ್ಟಲಿಂಗಕ್ಕೆಕೊಟ್ಟುಕೊಂಬಕ್ರಿಯೆಯಾರ್ಪಣದಸ್ವರೂಪು ಅನಾರ್ಪಿತವೆಂದು ರುಚಿತೃಪ್ತಿಪದಾರ್ಥಂಗಳನ್ನು ಪ್ರಾಣಭಾವಲಿಂಗಂಗಳಿಗೆ ಮನಭಾವಂಗಳಿಂದ ಅರ್ಪಿತವೆಂದು ಕೊಡದಕೊಂಬಜ್ಞಾನಾರ್ಪಣದ ಸ್ವರೂಪುವಿದೀಗಯೆನುತ್ತಾ ಒಪ್ಪಕ್ಕೆನುಡಿಯುಬಹುದು. ರಂಭಾಪರ್ಣದಮೇಲೆ ತುಪ್ಪವಕೊಡದಹಾಂಗೆಯೂ, ನವನೀತದೊಳಗೆ ಕುಂತಳವತೆಗೆದಹಾಂಗೆಯೂ, ತಿಪ್ಪೆಯಸಾರಿಸಿದಹಾಂಗೆಯೂ, ಕೇಳುವಕರ್ಣಕ್ಕೆ ಕರ್ಣಾಮೃತವಾಗಿ ನುಂಣಿಸಿಬಂಣಿಸಿ ಬಂಣವಿಟ್ಟುಹೇಳುವದು. ಅದಲ್ಲದೆ ಅದರಿಂದಹೊರ್ತಾಗೀ ಷಟ್ಸ್ಥಲಬ್ರಹ್ಮಮಂ ಷಟ್ಸ್ಥಲವೆಂದಡೆ ಷಡ್ವಿಧಾಂಗ, ಬ್ರಹ್ಮವೆಂದೊಡೆ-ಷಡ್ವಿಧಲಿಂಗ, ಒಡಗೂಡಿಯೆನೆಂದೊಡೆ, ಈ ಷಡಂಗದಲ್ಲಿ ಷಡ್ವಿಧ ಲಿಂಗವ ಸಂಬಂಧವಮಾಡಿಕೊಂಡು ಷಡ್ವಿಧಭಕ್ತಿವಿಡಿದಾಚರಿಸಿ ಆ ಷಡ್ವಿಧಲಿಂಗ ಭಕ್ತಿಗಳಿಗೆ ಮಾತೃಸ್ಥಾನವಾದ ನಿಃಕಲಬ್ರಹ್ಮವನ್ನೊಂದಾಗಿ ಬೆರದಿಹೆ

ನೆಂದುಪ್ಯೋಗಿಸಿದಡೆಯೆಂಬಲ್ಲಿ ಷಡ್ವಿಧಾಂಗಲಿಂಗಭಕ್ತಿಗಳು ಹ್ಯಾಗೆ ಉತ್ಪತ್ತಿಯಾದವೆಲೆ ಸ್ವಾಮಿಯೆಂದು ಬೆಸಗೊಂಡೊಡೆ, (ಶ್ಲೋ ॥ ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂತದ್ವಿಧಂಭವೇತ್ । ಏಕಂಲಿಂಗಸ್ಥಲಂಪ್ರೋಕ್ತಮನ್ಯದಂಗಸ್ಥಲಂಸ್ಮೃತಂ॥) ಎಂದು ಹೇಳುತಿಹುದಾದಕಾರಣ ಸರ್ವಾಚಾರಸಂಪತ್ತಿನಾಚರಣೆಯುದಯಾಧಾರ ವಿಶ್ರಾಂತಿಗೆ ಮೂಲಕಾರಣವಾದ ನಿಃಕಲಬ್ರಹ್ಮವು ತಾನೊಂದೇ ತನ್ನ ಚಿಚ್ಛಕ್ತಿಯ ನೆನಹುಮಾತ್ರದಿಂದ ಅಂಗಲಿಂಗವೆಂಬುಭಯಸ್ವರೂಪವನಾತಳೆಯಿತು. ಆ ಅಂಗದಲ್ಲಿ ಅಖಂಡಭಕ್ತಿಯೆಂಬುದು ಹುಟ್ಟಿತು, ಆ ಅಂಗಲಿಂಗಭಕ್ತಿವಿಡಿದು ಆಚರಿಸುತ್ತಿರ್ದಹಾಂಗೆ ಒಂದೆಲಿಂಗವೇ ಮುಂದಕ್ಕಾಚರಣೆಯನು ಕುರಿತು ಇಷ್ಟಪ್ರಾಣಭಾವವೆಂದು ತ್ರಿವಿಧಲಿಂಗಂಗಳಾಯಿತು. ಆ ಲಿಂಗಂಗಳ ಬಳಿವಿಡಿದು ಒಂದೆಂಗವೇ ತ್ಯಾಗಭೋಗಯೋಗಾಂಗವೆಂಬ ತ್ರಿವಿಧಾಂಗಂಗಳಾಯಿತು, ಆ ಅಂಗಂಗಳ ಬಳಿವಿಡಿದು ಅಖಂಡಭಕ್ತಿಯೆಂಬುದು ತಾನೊಂದೇ ಕ್ರಿಯಾಭಕ್ತಿ, ಜ್ಞಾನಭಕ್ತಿ, ಮಹಾಜ್ಞಾನಭಕ್ತಿಯೆಂದು ಮೂರುತೆರನಾಯಿತು. ಹೀಗೆ ಒಂದೆಂಗಲಿಂಗಭಕ್ತಿಗಳೇ ತ್ರಿವಿಧಾಂಗಲಿಂಗಭಕ್ತಿಗಳಾದವು. ಅದುಕಾರಣವಾಗಿ ಆ ತ್ರಿವಿಧಾಂಗದಲ್ಲಿ ತ್ರಿವಿಧಲಿಂಗಸಂಬಂಧವ ಮಾಡಿಕೊಂಡು ತ್ರಿವಿಧಭಕ್ತಿವಿಡಿದು ಆಚರಿಸುತಿರ್ದಹಾಂಗೆ ಆ ತ್ರಿವಿಧಲಿಂಗಾಂಗಗಳೇ ಮುಂದಕ್ಕಾಚರಣೆಯನ್ನು ಕುರಿತು ಷಡ್ವಿಧಲಿಂಗಂಗಳಾದವು. ಅದು ಹ್ಯಾಗೆಂದೊಡೆ, ಭಾವಲಿಂಗವೆಂಬುದು ತಾನೊಂದೇ ಮಹಾಲಿಂಗ ಪ್ರಸಾದಲಿಂಗವೆಂದೆರಡುತೆರನಾಯಿತು. ಪ್ರಾಣಲಿಂಗವೆಂಬುವದು ತಾನೊಂದೇ ಜಂಗಮಲಿಂಗ ಶಿವಲಿಂಗವೆಂದುಭಯಭೇದವಾಯಿತು. ಇಷ್ಟಲಿಂಗವೆಂಬುವದು ತಾನೊಂದೇ ಗುರುಲಿಂಗ ಆಚಾರಲಿಂಗವೆಂದು ದ್ವಿವಿಧಪ್ರಕಾರವಾಯಿತು. ಆ ಲಿಂಗಗಳ ಬಳಿವಿಡಿದು ತ್ರಿವಿಧಅಂಗಗಳೇ ಷಡ್ವಿಧ ಅಂಗಗಳಾದವು. ಅದು ಹ್ಯಾಗೆಂದೊಡೆ, ಯೋಗಾಂಗವೆಂಬುವದು ತಾನೊಂದೇ ಐಕ್ಯಶರಣನೆಂದೆರಡುತೆರನಾಯಿತು. ಭೋಗಾಂಗವೆಂಬುವದು ತಾನೊಂದೇ ಪ್ರಾಣಲಿಂಗಿ, ಪ್ರಸಾದಿ ಎಂದುಭಯಭೇದವಾಯಿತು. ತ್ಯಾಗಾಂಗವೆಂಬುವದು ತಾನೊಂದೇ ಮಹೇಶ್ವರಭಕ್ತನೆಂದು ದ್ವಿವಿಧ ಭೇದವಾಯಿತು. ಆ ಅಂಗಗಳ ಬಳಿವಿಡಿದು ತ್ರಿವಿಧಭಕ್ತಿಗಳೇ ಷಡ್ವಿಧಭಕ್ತಿಗಳಾದವು. ಅದು ಹ್ಯಾಗೆಂದೊಡೆ, ಮಹಾ ಜ್ಞಾನಭಕ್ತಿ ಎಂಬುದೆದುತಾನೊಂದೇ ಸಮರಸಭಕ್ತಿ ಆನಂದಭಕ್ತಿಯೆಂದೆರಡುತೆರನಾಯಿತು.

ಜ್ಞಾನಭಕ್ತಿಯೆಂಬುವದು ತಾನೊಂದೇ ಅನುಭಾವಭಕ್ತಿ, ಸಾವಧಾನಭಕ್ತಿ ಎಂದುಭಯಭೇದವಾಯಿತು. ಕ್ರಿಯಾಭಕ್ತಿಯೆಂಬುವದು ತಾನೊಂದೇ ನೈಷ್ಠಿಕಾಭಕ್ತಿ, ಶ್ರದ್ಧಾಭಕ್ತಿಯೆಂದು ದ್ವಿವಿಧಭೇದವಾಯಿತು. ಹೀಗೆ ತ್ರಿವಿಧ ಭಕ್ತಿಗಳೇ ಷಡ್ವಿಧಭಕ್ತಿಗಳಾದವು. ಈರೀತಿಯಲ್ಲಿ ಷಡ್ವಿಧಾಂಗ ಲಿಂಗಭಕ್ತಿಗಳುತ್ಪತ್ತಿಯಾದವು. ಅದುಕಾರಣವಾಗಿ ಷಟ್ಸ್ಥಳವೆಂದಡೆ ಷಡ್ವಿಧಾಂಗ, ಬ್ರಹ್ಮವೆಂದಡೆ ಷಡ್ವಿಧಲಿಂಗ, ಒಡಗೂಡಿಯೆಂದಡೆ ಈ ಷಡಂಗದಲ್ಲಿ ಷಡ್ವಿಧಲಿಂಗನ ಸಂಬಂಧಮಾಡಿಕೊಂಡು ಷಡ್ವಿಧಭಕ್ತಿವಿಡಿದು ಆಚರಿಸಿ ಆ ಷಡ್ವಿಧಾಂಗ ಲಿಂಗಭಕ್ತಿಗಳಿಗೆ ಮಾತೃಸ್ಥಾನವಾದ ನಿಃಕಲಬ್ರಹ್ಮವನ್ನು ಒಂದಾಗಿ ಬೆರದಿಹನೆಂದು ಉದ್ಯೋಗಿಸಿದಡೆ ಅದು ಅಂತಪ್ಪ ಆಚರಣೆಯು ಆರಿಗೆನಿಲುಕುವುದೈಯ್ಯಾ, ಯಾವಾತಂಗೆ ಯಟಕೀತಲೆಸ್ವಾಮಿ ಎಂದುಬೆಸಗೊಂಡಲ್ಲಿ ಕ್ರಿಯಾಬಾಹ್ಯನಾದ ವೇದಾಂತಿಗೆ, ಜ್ಞಾನಬಾಹ್ಯರಾದ ಸಿದ್ಧಾಂತಿಗಳಿಗೆ, ಜ್ಞಾನಕ್ರಿಯಾಬಾಹ್ಯರಾದ ಯೋಗಾಭ್ಯಾಸಿಗಳಿಗೆ ಯಟಕೀತೆ ಯಟಕದು, ಅರ್ಪಣದ ಅಂಗಸಂಬಂಧವಾದ ರೂಪು ಷಡ್ವಿಧಪದಾರ್ಥಂಗಳನ್ನು ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಷಡ್ವಿಧಲಿಂಗಂಗಳಿಗೆ ಷಡ್ವಿಧಸಕೀಲಂಗಳಿಂದ ಸಮರ್ಪಿಸಿಕೊಂಬ ಕಾಯಾರ್ಪಣದೊಳಗರ್ಪಣವ ಮನೋಸಂಬಂಧವಾದ ಮೂವತ್ತಾರು ರುಚಿಪದಾರ್ಥಂಗಳನ್ನು ಪ್ರಾಣಲಿಂಗದೊಡನೆಕೂಡಿದ ಮೂವತ್ತಾರು ಲಿಂಗಂಗಳಿಗೆ ಮೂವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಬ ಕರಣಾರ್ಪಣದ ಭೇದಾರ್ಪಣದ ಆತ್ಮಸಂಬಂಧವಾದ ಇನ್ನೂರಹದಿನಾರು ತೃಪ್ತಿಪದಾರ್ಥಂಗಳನ್ನು ಭಾವಲಿಂಗದೊಡನೆಕೂಡಿದ ಇನ್ನೂರಹದಿನಾರು ಲಿಂಗಂಗಳಿಗೆ ಇನ್ನೂರಹದಿನಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಬ ಭಾವಾರ್ಪಣದ ಭೇದವಂ ಕಾಯಾರ್ಪಣವರ್ಪಿತವಾಗಿ ಉಳಿದುದೇ ಶುದ್ಧಪ್ರಸಾದ, ಕರಣಾರ್ಪಣವರ್ಪಿತವಾಗಿ ಉಳಿದುದೇ ಸಿದ್ಧಪ್ರಸಾದ, ಭಾವಾರ್ಪಣವಾಗಿ ಉಳಿದುದೇ ಪ್ರಸಿದ್ಧಪ್ರಸಾದವೆಂಬ ನಿಲುಕಡೆಯನ್ನರಿದು ಸೊಪ್ಪಡಗಿದ ಒಂದಾನೊಂದೆಲೆಗಳದವೃಕ್ಷದಲ್ಲಿ ಹುಳುವಿಲ್ಲ ಯೆಂಬಹಾಗೆ ಈ ತ್ರಿವಿಧಪ್ರಸಾದವ ಪಡೆದನುಭವಿಸಿದ ಶಿವಶರಣನ ತನುಕರಣೇಂದ್ರಿಯ ಶಬ್ದಜಾಲಂಗಳುಪಟಲವಳಿದ ನಿಃಪತಿ ತನ್ನಲ್ಲಿತಾನೇ ಪರಮಕಾಂತಿಯನೈದಿದ ಸ್ವಕೀಯವಾದ ಮಹಾಲಿಂಗದಲ್ಲಿ ಐಕ್ಯದಿರವು ಅವಿರಳಭಾವದಿಂದೊಡವೆರದ ನಿಲುಕಡೆಯು

ಅಪೇಂತ್ರೈಯ್ಯಾ ಯೆಂದೊಡೆ, ಆ ವಿಚಾರವು ಹ್ಯಾಂಗಿಪ್ಪುದೆಲೆ ಸ್ವಾಮಿ ಎಂದು ಬೆಸಗೊಂಡೊಡೆ, ಗುರುಕಾರುಣ್ಯವಪಡೆದು ಲಿಂಗಾಂಗಸಂಬಂಧಿಯಾಗಿ ಆಚರಿಸುವ ಶಿವಶರಣನು ಶಿವಾರ್ಚನೆಗೆ ಮುಹೂರ್ತಮಾಡಿದುದೇ ಮೊದಲಾಗಿ ಶಿವಾರ್ಪಿತ ಮುಗಿಯುವಷ್ಟರೊಳಗೆ ಅವೆಲ್ಲಾ ಷಟ್ಸ್ಥಲಗಳಾಗಿಪ್ಪವು. ಅದುಹ್ಯಾಗೆಂದೊಡೆ—ಶಿವಶರಣನು ಶಿವಯೋಗನಿದ್ರಾಮುದ್ರೆಯಲ್ಲಿ ಪವಡಿಸಿರ್ದು (ಬ್ರಾಹ್ಮೀಮುಹೂರ್ತೇಚೋತ್ಥಾಯ) ಎಂದು ಹೇಳುತ್ತಿಹುದಾದಕಾರಣ ಬ್ರಾಹ್ಮೀಮುಹೂರ್ತದಲ್ಲಿ ಶಿವಧ್ಯಾನದಿಂದೆದ್ದು ಶಿವಮಂತ್ರೋಚ್ಚಾರಣೆ ಶಿವಲಿಂಗನಿರೀಕ್ಷಣೆಯಂಮಾಡಿ, ಸ್ಥೂಲಶೌಚಾಚಮನಂಗಳಿಗೆ ಹೋಗಿಬಂದು ಆಮಳಕಪ್ರಮಾಣ ಮೃತ್ತಿಕೆಯು ಹಾಕಿ ಗುದ ಗುಹ್ಯಂಗಳಂ ಪ್ರಕ್ಷಾಳಿಸಿ ಕರಚರಣ ಮುಖಪ್ರಕ್ಷಾಲನಂಗೈದು, ದಂತಧಾವನನಂಮಾಡಿ, ಸ್ನಾನಂಗೈದು ಕುಸುಮಂಗಳಂ ಶೋಧಿಸಿಕೊಂಡು ಪಾವಗೊರಡಂಮೆಟ್ಟಿಕೊಂಡು ಬಂದು (ಭಕ್ತಿಸ್ಥಲಸುಖಾಸನಮೆಂದು) ಹೇಳುತ್ತಿಹುದಾದಕಾರಣ, ಉನ್ನತಾಸನದ ಗದ್ದುಗೆಯ ಮೇಲೆ ಸುಖಾಸನದಲ್ಲಿ ಮುಹೂರ್ತವಮಾಡಿಕೊಂಡು, ಶ್ರೀ ವಿಭೂತಿ ರುದ್ರಾಕ್ಷಿಗಳನ್ನು ಜಲಮಿಶ್ರಪುಷ್ಪಗಳಿಂದರ್ಚಿಸಿ ತತ್ತತ್ಸ್ಥಾನಂಗಳಲ್ಲಿ ಅತ್ಯಂತವಿಶ್ವಾಸದಿಂದ ಅಲಂಕರಿಸಿಕೊಂಬುವುದೇ ಶ್ರದ್ಧಾಭಕ್ತಿಯನುಳ್ಳ ಭಕ್ತಸ್ಥಲವಾಗಿಪ್ಪುದು. ತದನಂತರದಲ್ಲಿ ಪರಶಿವನ ದ್ವಿಯಾಭಿಧಾನವಾದ ಮೂಲಪಂಚಾಕ್ಷರೀಮಂತ್ರವನ್ನು ಮಾನಸ, ವಾಚಕ, ಉಪಾಂಶುಕವೆಂಬ ತ್ರಿಕರಣಂಗಳಲ್ಲಿ ಅತ್ಯಂತನೈಷ್ಠಿಕೆಯಿಂದ ಪುನಶ್ಚರಣೆ ಜಪಂಗೈಯ್ಯುವದೇ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರಸ್ಥಲವಾಗಿಪ್ಪುದು. ತದನಂತರದಲ್ಲಿ ಸಜ್ಜೆವಸ್ತ್ರಂಗಳಲ್ಲಿರ್ಪ ಶಿವಲಿಂಗಮೂರ್ತಿಯನ್ನು ಒಂದಾನೊಂದು ಸಪ್ಪೆಯನೂಡಹರಿವಹಾಗೆಯೂ, ಕುಪ್ಪಸದಗಲಿಗೆತಗಿಯುವ ಹಾಗೆಯೂ, ಅಡ್ಡಮೊರೆಯಹಾಕಿಕೊಂಡು ತೆಗೆಯದೆ ಎಡದಹಸ್ತವನ್ನು ಸಜ್ಜೆಪಾಲಿಕೆಯ ತಾವುಮಡಿಗಿಕೊಂಡು ಬಲಹಸ್ತದಿಂದ ಲಿಂಗಪಷಟ್ಸ್ಥಲಂಗಳನ್ನು ಬಿಮ್ಮಗೆ ಪಿಡಿದುಕೊಂಡು ಅತ್ಯಂತಸುಮಿದಾನದಿಂದ ವಾಮಭಾಗದ ಕರಸ್ಥಲಕ್ಕೆ ಬಿಜಯಂಗೈಸಿಕೊಂಬುವದೇ ಸಾವಧಾನಭಕ್ತಿಯನುಳ್ಳ ಪ್ರಸಾದಿಸ್ಥಲವಾಗಿಪ್ಪುದು. ತದನಂತರದಲ್ಲಿ ಆ ಲಿಂಗಕ್ಕೆ ಭಸ್ಮೋದಕ, ಕುಸುಮೋದಕ, ಕೂರ್ಪೋದಕ, ಕುಳಿರೋದಕ, ಶ್ರೀಗಂಧೋದಕ, ಸ್ವರ್ಣೋದಕ, ರತ್ನೋದಕ, ಮಂತ್ರೋದಕ, ಪಾದೋದಕಂಗಳಿಂದ

ಮಜ್ಜನಕೆರೆದು ಸಣ್ಣಿದ್ಧೌತವಸ್ತ್ರದಿಂದೆ ದ್ರವವನಾರಿಸಿ ಶುಭ್ರವಾದ ಶ್ರೀ ವಿಭೂತಿಯನ್ನು ಅತ್ಯಂತ ಸಾವಧಾನದಿಂದೆ ಧರಿಸಿ, ಪುಣ್ಯವು ಪುಟವಿಕ್ಕುವಂತೆಯೂ, ಭಾಗ್ಯವು ನೊನುವಂತೆಯೂ, ತರಪರಿದು ಕುಸುಮಾಲಂಕಾರಗಳಹಿಂಡುದಂಡೆಗಳಿಂದ ಪೂಜಿಯಸಲಂಕರಿಸಿ ಆ ಲಿಂಗವನ್ನು ವ್ಯಾಘ್ರದೃಷ್ಟಿ, ಬಕದೃಷ್ಟಿ, ಕುರಂಗದೃಷ್ಟಿ, ಸಂಚಲದೃಷ್ಟಿ, ವ್ಯವಹಾರದೃಷ್ಟಿ, ಊರ್ಧ್ವದೃಷ್ಟಿ, ಅಧೋದೃಷ್ಟಿಗಳಲ್ಲದೊಡಾನೊಂದು ಅರೆವಿರಿದ ತಾವರೆಯಂತೆ ಅನಿಮಿಷಾಲೋಕನದಿಂದ ನಿರೀಕ್ಷಿಸುತ್ತ ಆ ಲಿಂಗದ ಇಪ್ಪತ್ತೈದು ಲೀಲಾಮೂರ್ತಿಗಳಾದ ಮಹಿಮಾತಿಶಯಗಳನ್ನು ಕಂದ, ವೃತ್ತ, ಗದ್ಯ, ಪದ್ಯ, ಸ್ವರ, ಸಂಗೀತ, ಪ್ರಬಂಧಾದಿಗಳಿಂದ ಸ್ತೋತ್ರಮಾಡುವದೇ ಅನುಭಾವಭಕ್ತಿಯನುಳ್ಳ ಪ್ರಾಣಲಿಂಗಿಸ್ಥಲವಾಗಿರ್ಪುದು. ತದನಂತರದಲ್ಲಿ ಕ್ರಿಯಾಕಾಲದಲ್ಲಿ ಗಡಣಿಸಿಬಂದ ಸಕಲಪದಾರ್ಥಂಗಳನ್ನು ಶರಣಸತಿ ಲಿಂಗಪತಿಯೆಂಬ ಭಾವದಿಂದ ಲಿಂಗಕ್ಕೆ ಅರ್ಪಿಸಿ ಆ ಲಿಂಗಪ್ರಸಾದವನ್ನು ಸವಿದು ಆನಂದಿಸುವದೇ ಆನಂದಭಕ್ತಿಯನುಳ್ಳ ಶರಣಸ್ಥಲವಾಗಿಪ್ಪದು. ತದನಂತರದಲ್ಲಿ ಶಿಖಿಕರ್ಪೂರಸಂಯೋಗವಾದ ಹಾಗೆ ಲಿಂಗದಲ್ಲಿ ತಾಕೂಡಿ, ತನ್ನಲ್ಲಿ ಲಿಂಗವುಕೂಡಿ, ತಾನು ಲಿಂಗವೆಂಬುಭಯಭಾವವಳಿದು ತಾನೇ ತಾನಾಗಿರುವದೆ ಸಮರಸಭಕ್ತಿಯನುಳ್ಳ ಐಕ್ಯಸ್ಥಲವಾಗಿರ್ಪುದು. ಹೀಂಗೆ ಶಿವಶರಣನು ಶಿವಾರ್ಚನೆಗೆ ಮುಹೂರ್ತಮಾಡಿದುದೇ ಮೊದಲಾಗಿ ಶಿವಾರ್ಪಿತ ಮುಗಿಯುವಷ್ಟರೊಳಗೆ ಅವೆಲ್ಲವೂ ಷಟ್ಸ್ಥಲಂಗಳಾಗಿಪ್ಪವು. ಅಂತಷಟ್ಸ್ಥಲಬ್ರಹ್ಮಿಯಾದ ಶರಣನ (ಶ್ಲೋ॥ ಅಂಗಮಾಚಾರಲಿಂಗಂಚ ಆತ್ಮಾಚಗುರುಲಿಂಗಕಂ। ಪ್ರಾಣಾಶ್ಚ ಶಿವಲಿಂಗಂಚ ಇಂದ್ರಿಯಂಚರಲಿಂಗಕಂ ॥ ವಿಷಯಂಪ್ರಸಾದಾಖ್ಯಂಚ ತೃಪ್ತಿಶ್ಚ ಮಹಾಲಿಂಗಕಂ ॥) ಎಂದು ಹೇಳುತಿಹುದಾದಕಾರಣ, ಅಂಗವೇ ಆಚಾರಲಿಂಗ, ಆತ್ಮನೇ ಗುರುಲಿಂಗ, ಪ್ರಾಣವೇ ಶಿವಲಿಂಗ, ಇಂದ್ರಿಯಂಗಳೇ ಜಂಗಮಲಿಂಗ, ವಿಷಯಂಗಳೇ ಪ್ರಸಾದಲಿಂಗ, ಅರಿವೇ ಮಹಾಲಿಂಗವಾಗಿ ನೆಲೆಗೊಂಡೊಪ್ಪುತಿಹುದು. ಅದೆಂತೆಂದೊಡೆ, ಕಾಯದಕ್ಕೈಮುಟ್ಟ, ಗುರುಕಾರುಣ್ಯವಪಡೆದು ಲಿಂಗಾಂಗಸಂಬಂಧಿಯಾಗಿ, ಆಚರಿಸುವಂತ ಶಿವಶರಣಗೆ ಸಕಲಪದಾರ್ಥವೂ ಗಡಣಿಸಿಬಂದಲ್ಲಿ ಆ ಪದಾರ್ಥಂಗಳೊಳಗಣ (ಶ್ಲೋ॥ ಮಕ್ಷುಕಂಮಶಕಂಕೇಶಂ ದೃಢಬೀಜಂಚಶಾಲ್ಮಲೀ। ಮೃತ್ತಿಕಾಪಾಷಾಣಕಾಷ್ಠಂ ಪ್ರಸಾದೀಚವಿವರ್ಜಯೇತ್॥)ಎಂ

ದು ಹೇಳುತಿಹುದಾದಕಾರಣ, ಮಕ್ಷುಕ, ಮಶಕ, ಕೇಶ, ದೃಢಬೀಜ, ಶಾಲ್ಮಲಿ, ಮೃತ್ತಿಕೆ, ಪಾಷಾಣ, ಕಾಷ್ಠಮುಂತಾದ ಕಲ್ಮಷಂಗಳನ್ನು ಕಳೆದು ಭಾವದ ಕೊನೆಯಮೊನೆಯಮೇಲೆ ದೃಷ್ಟಿಯನಿಟ್ಟು ಭಸ್ಮಸಂಪ್ರೋಕ್ಷಣವಾಕ್ಕೀಲಮಂತ್ರಂಗಳಿಂದ ಆ ಪದಾರ್ಥದ ಪೂರ್ವಾಶ್ರಯವನಳಿದು ಶುದ್ಧತಿಯಂಮಾಡಿ ಅಂತಪ್ಪ ನಿರ್ಮಲವಾದ ಶಿವಪದಾರ್ಥವನ್ನು ತನುವಿನ ಕ್ರಿಯಾಹಸ್ತದಿಂದ ದೃಢವಿಡಿದು ಸತ್ಕ್ರಿಯಾಸ್ವರೂಪವಾದ ಷಡ್ವಿಧಲಿಂಗವನೊಳಕೊಂಡು ಇಷ್ಟಲಿಂಗಕ್ಕೆ ಅರ್ಪಣಮಾಡುವಲ್ಲಿ, ಮೂರುವೇಳೆ ಐದುವೇಳೆ ಏಳುವೇಳೆ ಕೊಟ್ಟುಕೊಂಬುವಾಗ ಭೋಜ್ಯ ಆಚಾರಲಿಂಗದಲ್ಲಿ (ಭೋಜ್ಯವೆನೆ-ತುತ್ತು ಮುದ್ದೆ ಕವಳಮೆನಿಕ್ಕುಂ.) ಭೋಜ್ಯವೆಂದರೂ, ತುತ್ತೆಂದರೂ, ಮುದ್ದೆಯೆಂದರೂ, ಕವಳವೆಂದರೂ ಒಂದೇಪರ್ಯಾಯನಾಮವಾಗಿಪ್ಪದು. ಅದಾವಾಪೆಂಡೊಡೆ—ಶ್ರೋವ್ವೆ, ತುಪ್ಪ, ಬೋನವನ್ನು ಕಲಸಿ ತುತ್ತು ತುತ್ತುಮಾಡಿ ಸ್ವೀಕರಿಸುವದೇ ಭೋಜ್ಯವೆನಿಸಿಕೊಂಬುವದು. ಮತ್ತಂತುಮಲ್ಲದೆ ಗಟ್ಟಿಯಾದ ನುಚ್ಚುಬೋನವನ್ನು ಕಲಸಿತುತ್ತುಮಾಡಿ ಸ್ವೀಕರಿಸುವದೇ ಭೋಜ್ಯವೆನಿಸುವದು. ಮತ್ತಂತುಮಲ್ಲದೆ ಇನ್ನಿವೇಮೊದಲಾಗಿ ಕಲಸಿ ಕವಳೀಕರಿಸಿ ತುತ್ತುಮಾಡಿ ಸ್ವೀಕರಿಸುವ ಪದಾರ್ಥವಾವದಿದ್ದೀತೋ ಅದೆಲ್ಲವೂ ಭೋಜ್ಯವೆನಿಸಿಕೊಂಬುವುದು. ಅಂತಪ್ಪ ಭೋಜ್ಯವೆಂಬ ಪದಾರ್ಥವನ್ನು ಪಂಚಾಚಾರಸ್ವರೂಪವಾದ ಆಚಾರಲಿಂಗದೊಳಗೆಂದು ತಿಳಿದರ್ಪಿತವಮಾಡುವುದು. ಅದುಹ್ಯಾಗೆ ಸಮರ್ಪಣೆಯಂ ಮಾಡಬೇಕು, ಅದರ ಸಕೀಲವೆಂತುಟೆಲೆ ಸ್ವಾಮಿಯೆಂದುಬೆಸಗೊಂಡೊಡೆ—ಭೋಜ್ಯವೆಂಬ ರೂಪು, ಕಠಿಣವೆಂಬ ದ್ರವ್ಯ, ಗಂಧವೆಂಬ ಪದಾರ್ಥ, ಕ್ಷೀರಸಸ್ನಾನ, ಈ ಚತುರ್ವಿಧವೂ ಪೃಥ್ವೀಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದಶಕ್ತಿಪೀಠವಲ್ಲಿರುವ ಸದ್ಯೋಜಾತ ಮುಖಸ್ವರೂಪವಾದ ಆಚಾರಲಿಂಗಕ್ಕೆಂದರಿದಾರೋಪಿಸಿ ಆ ಇಷ್ಟಲಿಂಗದ ಮುಖದಲ್ಲಿಯೇ (ಓಂಹ್ರಾಂನಾಂನಮಶ್ಶಿವಾಯ) ಎಂಬ ಮಂತ್ರಸ್ಮರಣೆಯಿಂದ (ಸಮರ್ಪಯಾಮಿ) ಎಂದು ಸಮರ್ಪಿಸಿ, ಆ ಇಷ್ಟಲಿಂಗದ ಮುಖದಿಂದುಳುಮೆಯಾಗಿ ಬಂದ ಭೋಜ್ಯಪ್ರಸಾದವ ಪಡೆದನುಭವಿಸಿ ಪರಿಣಾಮಿಯಾಗಿರುತ್ತಿಹನು ಶಿವಶರಣನು ‖೧‖ ಪಾನ್ಯ-ಗುರುಲಿಂಗದಲ್ಲಿ ಕುಡಿಪಾನ್ಯ ಎಂದು ಹೇಳುತ್ತಿಹುದಾದಕಾರಣ ಎತ್ತೆತ್ತಿ ಕುಡಿಯುವ ಪದಾರ್ಥವಾವಾವಿದ್ದೀತು, ಅದೆ

ಲ್ಲವೂ ಪಾನ್ಯವೆನಿಸಿಕೊಂಬುವುದು. ಅದಾವಾವೆಂದೊಡೆ—ಶೀತಾಳ, ಶಿವದಾನ, ಎಳೆಯಗ್ಗಣಿ, ಕಬ್ಬಿನಹಾಲು, ಪಾನಕ, ಪನ್ನೀರು ಮುಂತಾದ ಪದಾರ್ಥಂಗಳನ್ನು ಎತ್ತೆತ್ತಿ ಕುಡಿಯಬೇಕಾಗುತ್ತಿದ್ದೀತು. ಅಂತಪ್ಪ ಪಾನ್ಯವೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಮಂತ್ರಮೂರ್ತಿಯಾದ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದು ಹ್ಯಾಗೆ ಸಮರ್ಪಣೆಯ ಮಾಡಬೇಕು, ಅದರಸಕೀಲವೆಂತುಟೆಲೆಸ್ವಾಮಿಯೆಂದು ಬೆಸಗೊಂಡೊಡೆ, ಪಾನ್ಯವೆಂಬರೂಪು, ಮೃದುವೆಂಬದ್ರವ್ಯ, ರಸವೆಂಬ ಪದಾರ್ಥ, ಪಥಿಸ್ಥಾನ, ಈ ಚತುರ್ವಿಧವು,ಅಪ್ಪುತತ್ವಸಂಬಂಧವಾದ ಪದಾರ್ಥವೆಂದರಿವುದು. ಆ ಪದಾರ್ಥವನ್ನು ಇಷ್ಟಲಿಂಗದ ಕಟಿಯಲ್ಲಿಯ ವಾಮದೇವಮುಖ ಸ್ವರೂಪವಾದ ಗುರುಲಿಂಗಕ್ಕೆಂದೆರಿದಾರೋಪಿಸಿ ಆ ಇಷ್ಟಲಿಂಗದ ಮುಖದಲ್ಲಿಯೇ (ಓಂಹ್ರೀಂಮಾಂ ನಮಃಶಿವಾಯ) ಎಂಬ ಮಂತ್ರಸ್ಮರಣೆಯಿಂದ (ಸಮರ್ಪಯಾಮಿ) ಎಂದು ಸಮರ್ಪಿಸಿ, ಆ ಇಷ್ಟಲಿಂಗದ ಮುಖದಿಂದುಳುಪೆಯಾಗಿಬಂದ ಪಾನ್ಯಪ್ರಸಾದವನು ಪಡೆದನುಭವಿಸಿ ಪರಿಣಾಮಿಯಾಗಿ ರುತ್ತಿಹನು ಶಿವಶರಣನು ॥೨॥ ಭಕ್ಷ್ಯ-ಶಿವಲಿಂಗದಲ್ಲಿ ತಿನು-ಭಕ್ಷಣೆಯೆಂದು ಹೇಳುತ್ತಿಹುದಾದ ಕಾರಣ ಎರಡು ದಂತಗಳಿಂದ ಜಗಿದುಜಗಿದು ಸ್ವೀಕರಿಸುವ ಪದಾರ್ಥವಾವುದಿದ್ದೀತು, ಅವೆಲ್ಲವೂ ಭಕ್ಷ್ಯವೆನಿಸಿಕೊಂಬುವುದು. ಅವಾವೆಂದೊಡೆ, ರೊಟ್ಟಿ, ಕಡುಬು, ಕಜ್ಜಾಯ, ಗಾರಿಗೆ, ಹೂರಿಗೆ, ಚಕ್ಕಲಿ, ಕರಜಿಕಾಯಿ, ಕಬ್ಬು, ಕಡಲೆ,ಕೊಬರಿ ಮುಂತಾದ ಪದಾರ್ಥಂಗಳನ್ನು ಸ್ವೀಕರಿಸುವದಾವಾವುದಿದ್ದೀತು, ಅದೆಲ್ಲವೂ ಭಕ್ಷ್ಯವೆನಿಸಿಕೊಂಬುವುದು. ಅಂತಪ್ಪ ಭಕ್ಷ್ಯವೆಂಬ ಪದಾರ್ಥವನ್ನು ಪರಮಪ್ರಕಾಶ ಸ್ವರೂಪವಾದ ಶಿವಲಿಂಗದೊಳಗೆಂದು ತಿಳಿದರ್ಪಿತವ ಮಾಡುವದು. ಅದಾವಪ್ರಕಾರ ಸಮರ್ಪಣೆಯ ಮಾಡಬೇಕು, ಅದರ ಸಕೀಲವೆಂತುಂಟೆಲೆಸ್ವಾಮಿ ಎಂದು ಬೆಸಗೊಂಡೊಡೆ, ಭಕ್ಷ್ಯವೆಂಬರೂಪು, ಉಷ್ಣವೆಂಬದ್ರವ್ಯ, ರೂಪೆಂಬಪದಾರ್ಥ, ಘ್ರಾತಸ್ಥಾನ ಈ ಚತುರ್ವಿಧವೂ ಅಗ್ನಿತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದ ವರ್ತುಳದಲ್ಲಿಹ ಅಘೋರಮುಖ ಸ್ವರೂಪವಾದ ಶಿವಲಿಂಗಕ್ಕೆಂದಾರೋಪಿಸಿ, ಆ ಇಷ್ಟಲಿಂಗದ ಮುಖದಲ್ಲಿ (ಓಂಹ್ರೂಂಶಿಂ ನಮಃಶಿವಾಯ) ಎಂಬ ಮಂತ್ರಸ್ಮರಣೆಯಿಂದ (ಸಮರ್ಪಯಾಮಿ) ಎಂಧು ಸಮರ್ಪಿಸಿ, ಆ ಇಷ್ಟಲಿಂಗ ಮುಖದಿಂದುಳು

ಮಯಾಗಿಬಂದ ಭಕ್ಷ್ಯಪದಾರ್ಥ ಪ್ರಸಾದವಪಡೆದನುಭವಿಸಿ, ಪರಮಪ ರಿಣಾಮಿಯಾಗಿರುತ್ತಿಹನು ಶಿವಶರಣನು ॥೨॥ ಚೋಹ್ಯ-ಜಂಗಮಲಿಂಗ ಪಲ್ಲಿ, ಸುರಿಚೋಹ್ಯೆ ಎಂದು ಹೇಳುತ್ತಿ ಹುದಾದಕಾರಣ, ತಟ್ಟೆಬಟ್ಟಲುಗ ಳಲ್ಲಿನೀಡಿಸಿಕೊಂಡು ಹಸ್ತವಗೂಡುಕಟ್ಟಿ ಸುರಿಸುರಿದು ಸ್ವೀಕರಿಸುವಂತ ಪದಾರ್ಥವಾವುದಿದ್ದೀತು, ಅದೆಲ್ಲವೂ ಚೋಹ್ಯವೆನಿಸಿಕೊಂಬುವುದು. ಅ ದಾವಾವೆಂದೊಡೆ—ಅಂಬ್ರ, ಅಂಬಕಳ, ಸುರಿಪಾಯಸ, ಕೀರು, ಮೊಸ ರು, ಅಂಬಲಿ, ಬಿಕ್ಕೆಹಣ್ಣಿನ ಬ್ಯಾಲದಹಣ್ಣಿನಪಾನಕ ಮುಂತಾದ ಪ ದಾರ್ಥಂಗಳನ್ನು ಹಸ್ತವ ಗುಡಿಗಟ್ಟಿ ಸುರಿಸುರಿದು ಸ್ವೀಕರಿಸಬೇಕಾಗು ತಿದ್ದೀತು, ಅದೆಲ್ಲವೂ ಚೋಹ್ಯವೆನಿಸಿಕೊಂಬುವುದು. ಅಂತಪ್ಪ ಚೋ ಹ್ಯವೆಂಬ ಪದಾರ್ಥವನ್ನು ಯಜಸಸ್ವರೂಪವಾದ ಚರಲಿಂಗದೊಳಗೆಂ ದು ತಿಳಿದರ್ಪಿತವಮಾಡುವುದು. ಅದುಹ್ಯಾಗೆ ಸಮರ್ಪಣೆಯಮಾಡಬೇ ಕು, ಅದೆರ ಸಕೀಲವೆಂತುಟೆಲೆಸ್ವಾಮಿ ಎಂದು ಬೆಸಗೊಂಡೊಡೆ, ಚೋ ಹ್ಯವೆಂಬರೂಪು, ಶೈತ್ಯವೆಂಬದ್ರವ್ಯ, ಸ್ಪರ್ಶನವೆಂಬಪದಾರ್ಥ, ಇಕ್ಷುರ ಸನ್ನಾನ ಈ ಚತುರ್ವಿಧವೂ ವಾಯುತತ್ವಸಂಬಂಧವಾದ ಪದಾರ್ಥ ವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದ ಗೋಮುಖದಲ್ಲಿಹ ತತ್ಪು ರುಷಮುಖಸ್ವರೂಪವಾದ ಜಂಗಮಲಿಂಗಕ್ಕೆಂದಾರೋಪಿಸಿ, ಆ ಇಷ್ಟ ಲಿಂಗದ ಮುಖದಲ್ಲಿಯೇ (ಓಂಹ್ರೈಂವಾಂ ನಮಶ್ಶಿವಾಯ) ಎಂಬ ಮಂ ತ್ರಸ್ಮರಣೆಯಿಂದ (ಸಮರ್ಪಯಾಮಿ) ಎಂದು ಸಮರ್ಪಿಸಿ ಆ ಲಿಂಗಮು ಖದಿಂದುಳುಮೆಯಾಗಿಬಂದ ಚೋಹ್ಯಪ್ರಸಾದವನ್ನು ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಶಿವಶರಣನು ॥೬॥ ಲೇಹ್ಯ-ಪ್ರಸಾದ ಲಿಂಗದಲ್ಲಿ, ನೆಕ್ಕು ಲೇಹ್ಯವೆಂದು ಹೇಳುತಿಹುದಾದಕಾರಣ, ಹೆಬ್ಬೆಟ್ಟಿನಿಂ ದ ತೆಗದುಕೊಂಡು ನಾಲಿಗೆಯಮೇಲೆ ತೊಡೆದುಕೊಂಡು ನೆಕ್ಕಿನೆಕ್ಕಿ ಸ್ವೀ ಕರಿಸುವಪದಾರ್ಥವಾವುದಿದ್ದೀತು, ಅದೆಲ್ಲವೂ ಲೇಹ್ಯವೆನಿಸುವುದು. ಅ ದಾವಾವೆಂದೊಡೆ-ಕಚಡಿ, ಹುಳಿ, ಜೇನುತುಪ್ಪ, ಜೋನಿಬೆಲ್ಲ, ಬ್ಯಾಲದ ಹಣ್ಣು, ಬಿಕ್ಕೆಯಹಣ್ಣು ಮುಂತಾದ ಪದಾರ್ಥಂಗಳನ್ನು ಹೆಬ್ಬೆಟ್ಟಿನಿಂ ದ ತೆಗದುಕೊಂಡು ನಾಲಿಗೆಯಮೇಲೆ ತೊಡೆದುಕೊಂಡು ನೆಕ್ಕಿನೆಕ್ಕಿ ಸ್ವೀ ಕರಿಸಬೇಕಾಗುತ್ತಿದ್ದೀತು, ಅದೆಲ್ಲವೂ ಲೇಹ್ಯವೆನಿಸಿಕೊಂಬುವುದು. ಅಂ ತಪ್ಪ ಲೇಹ್ಯವೆಂಬ ಪದಾರ್ಥವನ್ನು ಈಶಸಸ್ವರೂಪವಾದ ಪ್ರಸಾದಲಿಂ ಗದೊಳಗೆಂದು ತಿಳಿದರ್ಪಿತವ ಮಾಡುವುದು, ಅದು ಹ್ಯಾಗೆ ಸಮರ್ಪಣೆ

ಯ ಮಾಡಬೇಕು, ಅದರ ಸಕೀಲವೆಂತುಟೆಲೆಸ್ವಾಮಿಯೆಂದು ಬೆಸಗೊಂ ಡೊಡೆ—ಲೇಹ್ಯವೆಂಬರೂಪು, ಮಿಶ್ರವೆಂಬದ್ರವ್ಯ, ಶಬ್ದವೆಂಬ ಪದಾರ್ಥ, ನಾರಿಕೇಳರಸಸ್ನಾನ, ಈ ಚತುರ್ವಿಧವೂ ಆಕಾಶತತ್ವ ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಇಷ್ಟಲಿಂಗದ ನಾಳದಲ್ಲಿಹ ಈ ಶಾನ್ಯಮುಖಸ್ವರೂಪವಾದ ಪ್ರಸಾದಲಿಂಗಕ್ಕೆಂದರಿದಾರೋಪಿಸಿ, ಆ ಇ ಷ್ಟಲಿಂಗದಮುಖದಲ್ಲಿಯೇ (ಓಂಹ್ರೌಂಯಾಂ ನಮಶ್ಶಿವಾಯ) ಎಂಬ ಮಂತ್ರಸ್ಮರಣೆಯಿಂದ (ಸಮರ್ಪಯಾಮಿ) ಎಂದು ಸಮರ್ಪಿಸಿ, ಆ ಇ ಷ್ಟಲಿಂಗ ಮುಖದಿಂದುಳುಮೆಯಾಗಿಬಂದ ಲೇಹ್ಯಪ್ರಸಾದವೆಂ ಪಡೆದ ನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಶಿವಶರಣನು ॥೫॥ ಇವೆ ಲ್ಲರಲ್ಲಿಯರಿವು ಮಹಾಲಿಂಗದಲ್ಲಿ ಹಿಂದೆಹೇಳಿದ ಭೋಜ್ಯ, ಪಾನ್ಯ, ಭ ಕ್ಷ್ಯ, ಚೋಹ್ಯ, ಲೇಹ್ಯವೆಂಬ ಪಂಚವಿಧ ರೂಪುಪದಾರ್ಥಂಗಳನ್ನು ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಪಂಚವಿಧ ಲಿಂಗಂಗಳಿಗೆ ಪಂಚ ವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಆ ಪಂಚವಿಧ ಲಿಂಗಮುಖದಿಂ ದುಳುಮೆಯಾಗಿಬಂದ ಪಂಚವಿಧಪ್ರಸಾದವಪಡೆದನುಭವಿಸಿ ದಣ್ಣನೆದಣಿ ಡು ಮನಸ್ಸೆಲ್ಲ ಹಿಂದಿರುಗಿದಂತಾದ್ದೇ ಇವೆಲ್ಲರಲ್ಲಿಯ ಅರಿವೆಂಬ ಪದಾ ರ್ಥವನ್ನು ಬೋಧಸ್ವರೂಪವಾದ ಮಹಾಲಿಂಗದೊಳಗೆಂದು ತಿಳಿದರ್ಪಿ ತವಂ ಮಾಡುವದು, ಅದು ಹ್ಯಾಂಗೆ ಸಮರ್ಪಣೆಯ ಮಾಡಬೇಕು, ಅ ದರ ಸಕೀಲವೆಂತುಟೆಲೆಸ್ವಾಮಿಯೆಂದು ಬೆಸಗೊಂಡೊಡೆ—ಇವೆಲ್ಲರಲ್ಲಿಯ ಅರಿವೆಂಬರೂಪು, ತೃಪ್ತಿಯೆಂಬದ್ರವ್ಯ, ಪರಿಣಾಮವೆಂಬ ಪದಾರ್ಥ, ಸ್ವಾ ದೋದಕಸ್ನಾನ, ಈ ಚತುರ್ವಿಧವೂ ಆತ್ಮತತ್ವಸಂಬಂಧವಾದ ಪದಾ ರ್ಥವೆಂದರಿದಾಪದಾರ್ಥವನ್ನು ಇಷ್ಟಲಿಂಗದ ಗೋಳಕದಲ್ಲಿಹ ಗೋ ಪ್ಯಮುಖಸ್ವರೂಪವಾದ ಮಹಾಲಿಂಗಕ್ಕೆಂದರಿದಾರೋಪಿಸಿ, ಆ ಇಷ್ಟ ಲಿಂಗದ ಮುಖದಲ್ಲಿಯೇ (ಓಂಹ್ರಃ ಓಂನಮಶ್ಶಿವಾಯ) ಎಂಬ ಮಂತ್ರ ಸ್ಮರಣೆಯಿಂದ (ಸಮರ್ಪಯಾಮಿ) ಎಂದು ಸಮರ್ಪಿಸಿ, ಆ ಇಷ್ಟಲಿಂಗ ದಮುಖದಿಂದುಳುಮೆಯಾಗಿಬಂದ ತೃಪ್ತಿಪ್ರಸಾದವಂ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಶಿವಶರಣನು ॥೬॥ ಈ ಪ್ರಕಾರದಿಂ ದ ಹೇಳಲ್ಪಟ್ಟ ಈ ಅಂಗಸಂಬಂಧವಾದ ರೂಪು ಷಡ್ವಿಧಪದಾರ್ಥಂಗಳ ನ್ನು ಅರ್ಪಣವಾದಲ್ಲಿ ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಷಡ್ವಿಧ ಲಿಂಗಂಗಳಿಗೆ ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿತವಾದ ಬಳಿಕ

ಮುಂದೆ ಕರಣಾರ್ಪಣದ ಭೇದವೆಂಪೇಳ್ವೆ—ಕರಣವೆಂದರೆ ಇಂದ್ರಿಯಂಗಳು, ಆ ಇಂದ್ರಿಯಸಂಬಂಧವಾದ ಪದಾರ್ಥಗಳು ಪ್ರಾಣಲಿಂಗದೊಡನೆಕೂಡಿದ ಆಚಾರಾದಿ ಷಡ್ವಿಧಲಿಂಗಂಗಳಿಗೆ ಷಡ್ವಿಧಭಕ್ತಿ ಸಕೀಲಂಗಳಿಂದೆ ಸಮರ್ಪಿತವಾಗುವ ವಿಚಾರವನ್ನು ನಿರೂಪಿಸುವೆವು. ಅದೆಂತೆಂದೊಡೆ—ಆ ವಿಚಾರವು ಹ್ಯಾಂಗಿಪ್ಪದೆಲೆಸ್ವಾಮಿ ಯೆಂದು ಬೆಸಗೊಂಡೊಡೆ—ಗುರುಕಾರುಣ್ಯವಂಪಡೆದು, ಲಿಂಗಾಂಗಸಂಬಂಧಿಗಳಾಗಿ ಆಚರಿಸುವ ಶಿವಶರಣನು ತನ್ನಕಾಯದ ಕರಣಸ್ಥಳದಲ್ಲಿ ನೆಲೆಗೊಂಡಿಪ್ಪ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡಿ ಆ ಲಿಂಗವನ್ನು ಅನಿಮಿಷದೃಷ್ಟಿಯಿಂದ ನಿರೀಕ್ಷಿಸಲು, ಆ ಇಷ್ಟಲಿಂಗದ ಚಿತ್ಕಳೆಯೇ ದೃಷ್ಟಗ್ರಾಹಕವಾಗಿ ನೇತ್ರವೆಂಬ ಸೂತ್ರವನೊಳಕೊಂಡು ಅದೇ ಮನಸ್ಸಂಬಂಧವಾಗಿಯೂ, ಮನವೆಂಬುವುದೇ ಪವನಸಂಬಂಧವಾಗಿಯೂ, ಪವನವೆಂಬುವುದೇ ಪ್ರಾಣಸಂಬಂಧವಾಗಿಯೂ, ಆ ಪ್ರಾಣದಲ್ಲಿ ಪ್ರಾಣಲಿಂಗವಾಗಿ ನೆಲೆಗೊಂಡು, ಆ ಪ್ರಾಣಲಿಂಗವೆಂಬುವುದು ತಾನೇ ನಾಸಿಕದಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ಗಂಧವಿಷಯವನುಳ್ಳ ಘ್ರಾಣೇಂದ್ರಿಯದೊಳಗೆ ಪಂಚಾಚಾರ ಸ್ವರೂಪವಾದ ಆಚಾರಬ್ರಹ್ಮವಾಗಿ ನೆಲೆಗೊಂಡಿಪ್ಪುದು ॥೭॥ ಜಿಹ್ವೆಯಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ರಸವಿಷಯವನುಳ್ಳ ರಸನೇಂದ್ರಿಯದೊಳಗೆ ಮಂತ್ರಮೂರ್ತಿಯಾದ ಗುರುಲಿಂಗವಾಗಿ ನೆಲೆಗೊಂಡಿಪ್ಪುದು ॥ ೮ ॥ ನೇತ್ರದಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನರೂಪುವಿಷಯವನುಳ್ಳ ನಯನದೊಳಗೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗವಾಗಿ ನೆಲೆಗೊಂಡಿಪ್ಪುದು ॥೯॥ ತ್ವಕ್ಕಿನಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ಸ್ಪರ್ಶನವಿಷಯವನುಳ್ಳ ತ್ವಗಿಂದ್ರಿಯದಲ್ಲಿ ಯಜನಸ್ವರೂಪವಾದ ಚರಲಿಂಗವಾಗಿ ನೆಲೆಗೊಂಡಿಪ್ಪುದು ॥೧೦॥ ಶ್ರೋತ್ರದಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ಶಬ್ದವಿಷಯವನುಳ್ಳ ಶ್ರವಣೇಂದ್ರಿಯದೊಳಗೆ ಈಳನಸ್ವರೂಪವಾದ ಪ್ರಸಾದಲಿಂಗವಾಗಿ ನೆಲೆಗೊಂಡಿಪ್ಪುದು ॥೧೧॥ ಹೃದಯದಲ್ಲಿ ಚಿಲ್ಲಿಂಗಸಂಗಿಯಾದ ಶಿವಶರಣನ ತೃಪ್ತಿವಿಷಯವನುಳ್ಳ ಹೃದಯೇಂದ್ರಿಯದೊಳಗೆ ಪ್ರಾಣಲಿಂಗವೆಂಬುವುದು ತಾನೇ ಬೋಧಾಸ್ವರೂಪವಾದ ಮಹಾಲಿಂಗವಾಗಿನೆಲೆಗೊಂಡಿಪ್ಪುದು ॥೧೨॥ ಈಪ್ರಕಾರದಿಂದ ಹೇಳಲ್ಪಟ್ಟ ಈ ಷಡ್ವಿಧಲಿಂಗ ಈ ಪ್ರಾಣಲಿಂಗದೊಡನೆ ಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾ

ದ ಆರು ಲಿಂಗಂಗಳಿಗೆ ಗಂಧಾದಿ ತೃಪ್ತ್ಯಂತವಾದ ಷಡ್ವಿಧಪದಾರ್ಥಂಗಳನ್ನು, ಹನ್ನೊಂದುತೆರದ ಸಕೀಲು, ಅರವತ್ತಾರುತೆರದ ಅರ್ಪಣಕ್ರಮಗಳಿಂದ ಸಮರ್ಪಿತವಾಗುವ ವಿಚಾರವೆಂತೆಂದೊಡೆ, ಹ್ಯಾಂಗಿಪ್ಪುದೆಲೆಸ್ವಾಮಿ ಎಂದುಬೆಸಗೊಂಡೊಡೆ—ಪಂಚಾಚಾರಸ್ವರೂಪವಾದ ಆಚಾರಬ್ರಹ್ಮದ ಅರ್ಪಿತವು, ಗಂಧವಿಷಯಪದಾರ್ಥವು, ಘ್ರಾಣೇಂದ್ರಿಯದಲ್ಲಿ ನೆಲೆಗೊಂಡಿರುವ ಪಂಚಾಚಾರ ಸ್ವರೂಪವಾದ ಆಚಾರಲಿಂಗಕ್ಕೆ ಆ ಘ್ರಾಣೇಂದ್ರಿಯದಲ್ಲಿ ಬರುವ ಸುಗಂಧಪದಾರ್ಥವೇನೈವೇದ್ಯವಾಗಿಪ್ಪುದು. ಅದು ಹ್ಯಾಗೆಂದೊಡೆ, ಭಕ್ತಂಗೆ ಪೃಥ್ವಿಯೇ ಅಂಗ, ಆ ಅಂಗಕ್ಕೆ ಸುಚಿತ್ತವೇ ಹಸ್ತ, ಆ ಹಸ್ತಕ್ಕೆ ಕರ್ಮಸಾದಾಖ್ಯ, ಆ ಸಾದಾಖ್ಯಕ್ಕೆ ಕ್ರಿಯಾಶಕ್ತಿ, ಆ ಶಕ್ತಿಗೆ ಆಚಾರಲಿಂಗ, ಆ ಲಿಂಗಕ್ಕೆ ನಿವೃತ್ತಿಯೇ ಕಳೆ, ಆ ಕಲೆಗೆ ಘ್ರಾಣೇಂದ್ರಿಯವೇ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುಗಂಧಪದಾರ್ಥ, ಆ ಪದಾರ್ಥದರೂಪು ರುಚಿ ತೃಪ್ತಿಯನರಿದು ನಕಾರಮಂತ್ರಯುಕ್ತವಾಗಿ ಶ್ರದ್ಧಾಭಕ್ತಿಯಿಂದರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುಗಂಧಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಸದ್ಭಕ್ತನು ॥೧೩॥ ಮಂತ್ರಮೂರ್ತಿಯಾದ ಗುರುಲಿಂಗದ ಅರ್ಪಿತವು ರಸವಿಷಯದ ಪದಾರ್ಥವು ಜಿಹ್ವೇಂದ್ರಿಯದಲ್ಲಿ ನೆಲೆಗೊಂಡಿರುವ ಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಆ ಜಿಹ್ವೇಂದ್ರಿಯದಲ್ಲಿ ಬರುವ ಸುರಸಪದಾರ್ಥವೇನೈವೇದ್ಯವಾಗಿಪ್ಪುದು, ಅದು ಹ್ಯಾಗೆಂದೊಡೆ-ಮಾಹೇಶ್ವರಂಗಪ್ಪುವೇ ಅಂಗ, ಆ ಅಂಗಕ್ಕೆ ಸುಬುದ್ಧಿಯೇ ಹಸ್ತ, ಆ ಹಸ್ತಕ್ಕೆ ಕರ್ತೃಸಾದಾಖ್ಯ, ಆ ಸಾದಾಖ್ಯಕ್ಕೆ ಜ್ಞಾನಶಕ್ತಿ, ಆ ಶಕ್ತಿಗೆ ಗುರುಲಿಂಗ, ಆ ಲಿಂಗಕ್ಕೆ ಪ್ರತಿಷ್ಠೆಯೆಕಲೆ, ಆ ಕಲೆಗೆ ಜಿಹ್ವೇಂದ್ರಿಯವೇ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುರಸಪದಾರ್ಥ, ಆ ಪದಾರ್ಥದರೂಪುರುಚಿತೃಪ್ತಿಯನರಿದು ಮಕಾರಮಂತ್ರಯುಕ್ತವಾಗಿ ನೈಷ್ಠಿಕಾಭಕ್ತಿಯಿಂದರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಸುರಸಪದಾರ್ಥವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು. ವೀರಮಾಹೇಶ್ವರನು ॥೧೪॥ ಪರಮಪ್ರಕಾಶಸ್ವರೂಪವಾದ ಶಿವಲಿಂಗದ ಅರ್ಪಿತವು, ರೂಪುವಿಷಯಪದಾರ್ಥವು, ನಯನೇಂದ್ರಿಯದಲ್ಲಿ ನೆಲೆಗೊಂಡಿರುವ ಪರಮಪ್ರಕಾಶಸ್ವರೂಪವಾದ ಶಿವಲಿಂಗಕ್ಕೆ ಆ ನಯನೇಂದ್ರಿಯದಲ್ಲಿ ಬರುವ ಸುರೂಪುಪ

ದಾರ್ಥವೇ ನೈವೇದ್ಯವಾಗಿಪ್ಪುದು. ಅದು ಹ್ಯಾಗೆಂದೊಡೆ, ಪ್ರಸಾದಿಗೆ ಅಗ್ನಿಯೇ ಅಂಗ, ಆ ಅಂಗಕ್ಕೆ ನಿರಹಂಕಾರವೇ ಹಸ್ತ, ಆ ಹಸ್ತಕ್ಕೆ ಮೂರ್ತಿಸಾದಾಖ್ಯ, ಆ ಸಾದಾಖ್ಯಕ್ಕೆ ಇಚ್ಛಾಶಕ್ತಿ, ಆ ಇಚ್ಛಾಶಕ್ತಿಗೆ ಶಿವಲಿಂಗ, ಆ ಲಿಂಗಕ್ಕೆ ವಿದ್ಯೆಯೇ ಕಲೆ, ಆ ಕಲೆಗೆ ನೇತ್ರೇಂದ್ರಿಯವೇ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುರೂಪಪದಾರ್ಥ. ಆ ಪದಾರ್ಥದ ರೂಪುರುಚಿತೃಪ್ತಿಯನರಿದು ಶಿಕಾರಮಂತ್ರಯುಕ್ತವಾಗಿ ಸಾವಧಾನಭಕ್ತಿಯಿಂದರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಸುರೂಪುಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಪ್ರಸಾದಿಯು ||೧೫|| ಯಜನಸ್ವರೂಪವಾದ ಚರಲಿಂಗದ ಅರ್ಪಿತವು ಸ್ಪರ್ಶನವಿಷಯುವಾದ ಪದಾರ್ಥವು ತ್ವಗೀಂದ್ರಿಯದಲ್ಲಿ ನೆಲೆಗೊಂಡಿರುವ ಯಜನಸ್ವರೂಪವಾದ ಜಂಗಮಲಿಂಗಕ್ಕೆ ಆ ತ್ವಗಿಂದ್ರಿಯದಲ್ಲಿ ಬರುವ ಸುಸ್ಪರ್ಶನ ಪದಾರ್ಥವೇ ನೈವೇದ್ಯವಾಗಿಪ್ಪುದು. ಅದು ಹ್ಯಾಗೆಂದೊಡೆ, ಪ್ರಾಣಲಿಂಗಿಗೆ ವಾಯುವೇ ಅಂಗ, ಆ ಅಂಗಕ್ಕೆ ಸುಮನವೇ ಹಸ್ತ, ಆ ಹಸ್ತಕ್ಕೆ ಮೂರ್ತಿಸಾದಾಖ್ಯ, ಆ ಸಾದಾಖ್ಯಕ್ಕೆ ಆದಿಶಕ್ತಿ, ಆ ಶಕ್ತಿಗೆ ಜಂಗಮಲಿಂಗ, ಆ ಲಿಂಗಕ್ಕೆ ಶಾಂತಿಕಲೆ, ಆ ಕಲೆಗೆ ತ್ವಗಿಂದ್ರಿಯವೇ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುಸ್ಪರ್ಶನ ಪದಾರ್ಥ, ಆ ಪದಾರ್ಥದ ರೂಪುರುಚಿತೃಪ್ತಿಯನರಿದು ವಕಾರಮಂತ್ರಯುಕ್ತವಾಗಿ ಅನುಭಾವಭಕ್ತಿಯಿಂದರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಸುಸ್ಪರ್ಶನಪ್ರಸಾದವ ಪಡೆದನುಭವಿಸಿ, ಪರಮಪರಿಣಾಮಿಯಾಗಿರುತ್ತಿಹನು ಶಿವಪ್ರಾಣಲಿಂಗಿಯು ||೧೬|| ಈಳನಸ್ವರೂಪವಾದ ಪ್ರಸಾದಲಿಂಗದ ಅರ್ಪಿತವು ಶಬ್ದವಿಷಯಪದಾರ್ಥವು ಶ್ರವಣೇಂದ್ರಿಯದಲ್ಲಿ ನೆಲೆಗೊಂಡಿರುವ ಈಳನಸ್ವರೂಪವಾದ ಪ್ರಸಾದಲಿಂಗಕ್ಕೆ ಆ ಶ್ರವಣೇಂದ್ರಿಯದಲ್ಲಿ ಬರುವ ಸುಶಬ್ದಪದಾರ್ಥವೇ ನೈವೇದ್ಯವಾಗಿಪ್ಪುದು. ಅದು ಹ್ಯಾಗೆಂದೊಡೆ, ಶರಣಂಗೆ ಆಕಾಶವೇಅಂಗ, ಆ ಅಂಗಕ್ಕೆ ಸುಜ್ಞಾನವೇಹಸ್ತ, ಆ ಹಸ್ತಕ್ಕೆ ಶಿವಸಾದಾಖ್ಯ, ಆ ಸಾದಾಖ್ಯಕ್ಕೆ ಪರಶಕ್ತಿ, ಆ ಶಕ್ತಿಗೆ ಪ್ರಸಾದಲಿಂಗ, ಆ ಲಿಂಗಕ್ಕೆ ಶಾಂತಾತೀತಯೇ ಕಲೆ, ಆ ಕಲೆಗೆ ಶ್ರವಣೇಂದ್ರಿಯವೇ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುಶಬ್ದಪದಾರ್ಥ, ಆ ಪದಾರ್ಥದ ರುಚಿ ರೂಪು ತೃಪ್ತಿಯನರಿದು ಯಕಾರಮಂತ್ರಸ್ಮರಣೆಯಿಂದ ಯಕಾರಮಂತ್ರಯುಕ್ತವಾಗಿ ಆನಂದಭಕ್ತಿಯಿಂ

ದರ್ಪಿಸಿ ಆ ಲಿಂಗಮುಖದಿಂದುಳುಮೆಯಾಗಿ ಬಂದ ಸುಶಬ್ದಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಶಿವಶರಣನು ||೧೭|| ಬೋಧಸ್ವರೂಪವಾದ ಮಹಾಲಿಂಗದ ಅರ್ಪಿತವು ಸಕಲೇಂದ್ರಿಯಂಗಳ ನೊಳಕೊಂಡು ತೋರುವ ಹೃದಯೇಂದ್ರಿಯಕ್ಕೆ ಬಂದುತಟ್ಟುವ ಪರಿ ಣಾಮವಿಷಯಪದಾರ್ಥವು ಈ ಹೃದಯೇಂದ್ರಿಯಕ್ಕೆ ಸರ್ವೇಂದ್ರಿಯ ವೆಂಬ ನಾಮವು ಏನುಕಾರಣಕ್ಕೆ ಬಂದಿತೆಲೆಸ್ವಾಮಿಯೆಂದು ಬೆಸಗೊಂ ಡೊಡೆ, ಸಕಲೇಂದ್ರಿಯದಲ್ಲಿ ಬರುವ ವಿಷಯೇಂದ್ರಿಯಂಗಳ ಪರಿಣಾಮವೆ ಲ್ಲವೂ ಈ ಹೃದಯೇಂದ್ರಿಯೊಂದಕ್ಕೆ ಬಂದುತಟ್ಟುತ್ತಿಹುದಾದಕಾರಣ, ಈ ಹೃದಯೇಂದ್ರಿಯಕ್ಕೆ ಸರ್ವೇಂದ್ರಿಯವೆಂಬನಾಮವು ಪ್ರಸಿದ್ಧವಾ ಯಿತು. ಆ ಹೃದಯೇಂದ್ರಿಯದಲ್ಲಿ ನೆಲೆಗೊಂಡಿರುವ ಬೋಧಸ್ವರೂ ಪವಾದ ಮಹಾಲಿಂಗಕ್ಕೆ ನೈವೇದ್ಯವಾಗಿಪ್ಪುದು. ಅದು ಹ್ಯಾಗೆಂದೊಡೆ, ಐಕ್ಯಂಗೆ ಆತ್ಮನೇ ಅಂಗ, ಆ ಅಂಗಕ್ಕೆ ಸದ್ಭಾವವೇಹಸ್ತ, ಆ ಹಸ್ತಕ್ಕೆ ಮಹಾಸಾದಾಖ್ಯ, ಆ ಸಾದಾಖ್ಯಕ್ಕೆ ಚಿಚ್ಛಕ್ತಿ, ಆ ಚಿಚ್ಛಕ್ತಿಗೆ ಮಹಾ ಲಿಂಗ, ಆ ಲಿಂಗಕ್ಕೆ ಶಾಂತಾತೀತೋತ್ತರೆಯೇ ಕಲೆ, ಆ ಕಲೆಗೆ ಹೃದ ಯೇಂದ್ರಿಯವೆ ಮುಖ, ಆ ಮುಖಕ್ಕೆ ಬಂದುತಟ್ಟುವಂತಾದ್ದೇ ಸುತೃ ಪ್ತಿಪದಾರ್ಥ, ಆ ಪದಾರ್ಥದರೂಪು ರುಚಿತೃಪ್ತಿಯೆನರಿದು ಓಂಕಾರವಂ ತ್ರಯುಕ್ತವಾಗಿ ಸುಮರಸಭಕ್ತಿಯಿಂದ ಅರ್ಪಿಸಿ, ಆ ಲಿಂಗಮುಖದಿಂದು ಳುಮೆಯಾಗಿಬಂದ ಸುತೃಪ್ತಿಪದಾರ್ಥವ ಪಡೆದನುಭವಿಸಿ ಪರಮಪರಿಣಾ ಮಿಯಾಗಿರುತ್ತಿಹನು ಶಿವೈಕ್ಯನು ||೧೮|| ಈಪ್ರಕಾರದಿಂದ ಹೇಳಲ್ಪ ಟ್ಟ ಈ ಷಡ್ವಿಧಲಿಂಗಕ್ಕೆ ಈ ಪ್ರಾಣಲಿಂಗದೊಡನೆಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರುಲಿಂಗಂಗಳಿಗೆ ಗಂಧಾದಿ ತೃಪ್ತ್ಯಂತವಾದ ಷಡ್ವಿಧಪದಾರ್ಥಂಗಳನ್ನು ಹನ್ನೊಂದುತೆರದ ಸಕೀಲು ಅರವತ್ತಾರುತೆ ರದ ಅರ್ಪಣಕ್ರಮಗಳಿಂದ ಸಮರ್ಪಿತವಾಗುವಂತ ವಿಚಾರವು, ಛತ್ತೀಶತ ತ್ವದಭೇದಮಂ ಕುರುಹಿನಲ್ಲಿಪೇಳ್ವೆ—ಛತ್ತೀಶತತ್ವದ ಹನ್ನೊಂದುತೆ ರದ ಸಕೀಲಂಗಳೊಳಗೆ ಮೂರು ಕಡಮೆಯಾಗಿಹೋಗಲು ಮುಂದೆ ಅ ಷ್ಟವಿಧ ಸಕೀಲಂಗಳೇ ಉಳಿದವು. ಆ ಉಳಿದ ಅಷ್ಟವಿಧ ಸಕೀಲಂಗಳು ತಾವೊಂದು ಆರಾರಾಗಿ ವಿಶಾಲ್ಯತರವನೈದಿ, ಅಂಗವು ಮುವ್ವತ್ತಾರು, ಲಿಂಗವು ಮುವ್ವತ್ತಾರು, ಶಕ್ತಿಯು ಮುವ್ವತ್ತಾರು, ಭಕ್ತಿಯು ಮುವ್ವ ತ್ತಾರು, ಹಸ್ತವು ಮುವ್ವತ್ತಾರು, ಮುಖವು ಮುವ್ವತ್ತಾರು, ಪ್ರಸಾದ

ವು ಮುವ್ವತ್ತಾರು, ಪದಾರ್ಥವುಮುವ್ವತ್ತಾರು, ಪ್ರಾಣಲಿಂಗದೊಡನೆ ಕೂಡಿದ ಮುವ್ವತ್ತಾರುಲಿಂಗಂಗಳಿಗೆ ಮನೋಸಂಬಂಧವಾದ ಮುವ್ವತ್ತಾರುತೆರದ ರುಚಿಪದಾರ್ಥಂಗಳನ್ನು, ಮುವ್ವತ್ತಾರುತೆರದಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವನ್ನು ಸಂಕ್ಷೇಪಮಾತ್ರವಾಗಿ ನಿರೂಪಿಸುವೆನು. ಮತ್ತಂತುಮಲ್ಲದೆ ಅಂಗವಿದು, ಲಿಂಗವಿದು, ಶಕ್ತಿಯಿದು, ಭಕ್ತಿಯಿದು, ಹಸ್ತವಿದು, ಮುಖವಿದು, ಪದಾರ್ಥವಿದು, ಪ್ರಸಾದವಿದೆಂದು ಬೇರೆಬೇರೆ ಒಂದೊಂದು ಲಕ್ಷ್ಯವಿಟ್ಟು ನಿರೂಪಿಸುವೆವು. ತದನಂತರದಲ್ಲಿ ಆಚಾರಲಿಂಗಭಕ್ತಂಗೆ ಹರಣಕಿರಣ ಚೈತನ್ಯಪ್ರಕಾಶವನುಳ್ಳ ಆಚಾರಲಿಂಗವುತಾನೊಂದೇ ಮಿಶ್ರ, ವಿಭಜಿಸಿ ಷಡ್ವಿಧಲಿಂಗ-ಆಚಾರಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಗುರುಲಿಂಗ, ಆಚಾರಲಿಂಗದೊಳಗಣ ಶಿವಲಿಂಗ, ಆಚಾರಲಿಂಗದೊಳಗಣ ಜಂಗಮಲಿಂಗ, ಆಚಾರಲಿಂಗದೊಳಗಣ ಪ್ರಸಾದಲಿಂಗ, ಆಚಾರಲಿಂಗದೊಳಗಣ ಮಹಾಲಿಂಗವೆಂದು ಆರುಭೇದವಾಗಿಹುದು. ಆಚಾರಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಗಂಧಪದಾರ್ಥಂಗಳು ಷಡ್ವಿಧಭಕ್ತಿ ಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಎಂತೆಂದೊಡೆ ಹ್ಯಾಗಿಪ್ಪವೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಈಭೂಭಾಗದಲ್ಲಿರುವ ಪದಾರ್ಥಂಗಳೊಳಗೆ ಯಾವಪದಾರ್ಥವಾದರೂ ಆಗಲಿ, ಅವುದಾನೊಂದು ಲಿಂಗಾರ್ಪಿತಕ್ಕೆ ಬೇಕಾದುದು, ಅಣಬೆ, ಈಚಲು, ಬಂಗಿ ಮೊದಲಾದ ಅಯೋಗ್ಯವಾದ ಪದಾರ್ಥಂಗಳು ಹೋಗಲಾಗಿ ಯೋಗ್ಯವಾದದ್ದು ಬೇರು, ಲಾವಂಚ, ಮುಡಿವಾಳ ಮೊದಲಾದ ಪರಿಮಳಸಂಯುಕ್ತವಾದ ಮೂಲಂಗಳು ಗೆಣಸು, ಬಿಳೇಗೆಣಸು, ಬೆಲ್ಲಗೆಣಸು, ಕುಂಭಗೆಣಸು, ನೊರೆಗೆಣಸು, ಕೊನ್ನಾರಿಗೆಡ್ಡೆ ಮೊದಲಾದ ಸುಗಂಧಸಂಬಂಧವಾದ ಕಂದಗಳ ಸದ್ವಾಸನೆಯೆಂಬ ಪದಾರ್ಥವನ್ನು ಆಚಾರಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರಸಕೀಲವೆಂತುಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅದು ಪೃಥ್ವೀತತ್ವದೊಳಗಣ ಮೂಲಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತ ಹಸ್ತದೊಳಗಣ ಸುಚಿತ್ತಹಸ್ತದಿಂ ಪಿಡಿದುಕೊಂಡು, ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ, ಶ್ರದ್ಧಾಭಕ್ತಿಯೊಳಗಣ ಶ್ರ

ದ್ಧಾಭಕ್ತಿಯಿಂದೇ ಆಚಾರಲಿಂಗದೊಳಗಣ ಆಚಾರಲಿಂಗಕೆಂದರಿದಾರೋಪಿಸಿ ನಕಾರಮಂತ್ರದೊಳಗಣ ನಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯಮುಖದಲ್ಲಿಯೇ ಸಮರ್ಪಿಸಿ ಆಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇ ತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಸದ್ಭಕ್ತನು ॥೧೯॥ ಮರ-ಅಗಿಲು, ದೇವದಾರು, ಚಂದನತರು, ಬೇವು, ಬೆಂಡುಗವಾದಿಯಾದ ಪರಿಮಳಸಂಯುಕ್ತವಾದ ವೃಕ್ಷಂಗಳು, ತಿಗಡು, ನೆಲವಾವು, ಕುಳಿವಾವು, ಕೊಂಡಮಾವು, ವಜ್ರದಂತಿ, ಸರಳದ್ರುಮ ಮೊದಲಾದಾಯಾಯವೃಕ್ಷಂಗಳ ತ್ವಕ್ಕು, ಆಗಿನ, ಕುಮಂಜನ. ಹೈಗ, ಗುಗ್ಗುಳ, ಜಾಲ, ಹಾಲಮಡ್ಡಿ, ಲೋಬಾನ ಮೊದಲಾದ ಪರಿಮಳಸಂಯುಕ್ತವಾದ ಆಯಾಯಮೇಣಂಗಳ ಸದ್ವಾಸನೆಯೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲೆಂತುಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ-ಅದುಪೃಥ್ವೀತತ್ವದೊಳಗಣ ಅಪ್ಪುತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತಹಸ್ತದೊಳಗಣ ಸುಬುದ್ಧಿಯೆಂಬ ಹಸ್ತದಿಂಪಿಡಿದುಕೊಂಡು, ಕ್ರಿಯಾಶಕ್ತಿಯೊಳಗಣ ಜ್ಞಾನಶಕ್ತಿಯುಕ್ತವಾಗಿ ಶ್ರದ್ಧಾಭಕ್ತಿಯೊಳಗಣ ಗುರುಲಿಂಗಕ್ಕೆಂದು ಆರೋಪಿಸಿ ನಕಾರಮಂತ್ರದೊಳಗಣ ಮಕಾರಮಂತ್ರಸ್ಮರಣೆಯೊಡನೆ ಕೂಡಿ, ಘ್ರಾಣೇಂದ್ರಿಯೊಳಗಣ ಜಿಹ್ವೇಂದ್ರಿಯಮುಖದಲ್ಲಿಯೇ ಸಮರ್ಪಿಸಿ ಆಲಿಂಗಮುಖದಿಂದುಳಿಮೆಯಾಗಿಬಂದ ಪ್ರಸನ್ನೇ ತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಮಾಹೇಶ್ವರನು ॥೨೦॥ ಚಿಗರು—(ಕೊನರುತ್ಪತ್ತಾ) ಎಂದು ಪೇಳುತಿಹುದಾದಕಾರಣ, ಆಗಾಗ್ಗೆ ಅಂಕುರಿಸಿಬರುವ ಅಶೋಕ, ಜಂಬು, ಚೂತ, ದ್ರೋಣ, ದೂರ್ವಾಂಕುರ ಮೊದಲಾದ ಪತ್ರೆಯು, ಕಪಿತ್ಥ, ಬಿಲ್ವ, ಅಪಾಮಾರ್ಗ, ಧಾತ್ರಿ, ನಿರ್ಗುಂಡಿ, ಗಿರಿಚೂತ, ಮಂಚಪತ್ರೆ ಮೊದಲಾದ ದಳಂಗಳಗಂಧಮಂ ಸದ್ವಾಸನೆಯೆಂಬ ಪದಾರ್ಥವನ್ನು ಶಿವಲಿಂಗದಲ್ಲರಿವುದು. ಆಚಾರಲಿಂಗದೊಳಗಣ ಶಿವಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು. ॥೨೧॥ ಮೊಗ್ಗೆ—ಮಲ್ಲಿಗೆ, ಬೊಲ್ಲೆ, ಇರುವಂತಿಗೆ, ಶಾವಂತಿಗೆ, ಸಂಪಿಗೆ, ಜಾಜಿ, ಬಕುಳ, ಪಾದ

ರಿ, ಪಾರಿಜಾತ, ಸುರಗಿ, ಸುರಹೊನ್ನೆ, ಕರವೀರ, ಕೈರವ, ಅರವಿಂದ, ಕರ್ಣಿಕಾರ, ಕಲ್ಹಾರ, ಸುಗಂಧಿ, ಮಂದಾರ, ಬಂಧೂಕ, ಪಾಟಲ ಮುಖ್ಯವಾದ ಕುಸುಮಂಗಳ ಗಂಧವಂ ಸದ್ವಾಸನೆಯೆಂಬ ಪದಾರ್ಥವನ್ನು ಜಂಗಮಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಜಂಗಮಲಿಂಗದೊಳಗೆಯೆಂದು ತಿಳಿದರ್ಪಿತವಮಾಡುವುದು. ಕಾಯಿ-ಮಾವು, ಮಾದಲ, ನೆಲ್ಲಿ, ಬೆಲವತ್ತ, ಬಾಳೆ, ಬದನೆ, ಕುಂಬಳ, ಸೌತೆ ಮೊದಲಾದ ಪಕ್ವಫಲಂಗಳು. ಹಣ್ಣು-ಚೂತ, ಪನಸ, ರಂಭಾ, ಜಂಬೀರ, ಜಂಬು, ದಾಡಿಮ ದ್ರಾಕ್ಷಿ ಮುಂತಾದ ವೃಕ್ಷಗಳ ಪಕ್ವಫಲವಸ್ತುಗಳ ಗಂಧವಂ ಸದ್ವಾಸನೆಯೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ‖ ೬೭ ‖ ಇವೆಲ್ಲರಲ್ಲಿಯು ಗಂಧವನರಿವುದು ಮಹಾಲಿಂಗದಲ್ಲಿ ಇವೆಲ್ಲರಲ್ಲಿಯು ಗಂಧವಂ ಹಿಂದೆಹೇಳಿದ ಬೇರು ಗೆಣಸುಮೊದಲಾದ ಗಂಧಮರದ ಅಗರುಅಗಿನ ಮೊದಲಾದಗಂಧ, ಚಿಗುರು ಮೊದಲಾದ ಪತ್ರೆಯಗಂಧ, ಮೊಗ್ಗೆ ಮೊದಲಾದ ಪುಷ್ಪದಗಂಧ, ಕಾಯಿ ಹಣ್ಣು ಮೊದಲಾದ ಫಲದ ಗಂಧ, ಈ ಪಂಚವಿಧ ಗಂಧಪದಾರ್ಥಂಗಳನ್ನು ಆಚಾರಲಿಂಗದೊಡನೆ ಕೂಡಿದ ಪಂಚವಿಧಲಿಂಗಗಳಿಗೆ ಪಂಚವಿಧ ಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಆ ಪಂಚವಿಧ ಲಿಂಗಮುಖದಿಂದುಳುಮೆಯಾಗಿಬಂದ ಪಂಚವಿಧಪ್ರಸಾದವ ಪಡೆದನುಭವಿಸಿ) ದಣ್ಣಿಸದಣಿದು, ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ. ಇವೆಲ್ಲರಲ್ಲಿಯು ಗಂಧವೆಂಬ ಪದಾರ್ಥವನ್ನು ಬೇರೆಬೇರೆಬಂದು ತಟ್ಟದರಂತುಸರಿ, ಬೇರೆಬೇರೆ ಲಿಂಗಾರ್ಪಿತವ ಮಾಡಬಹುದು. ಅದಲ್ಲದೆ ಇವೆಲ್ಲಾ ಗಂಧಗಳೊಂದೇವೇಳೆ ಕದಂಬವಾಗಿ ಬಂದುತಟ್ಟದಲ್ಲಿ ಆಗ ಹಿಂಗಡಿಸಿ ಲಿಂಗಾರ್ಪಿತವ ಮಾಡುವುದಕ್ಕೆ ಕೂಡದು. ಇವೆಲ್ಲಾ ಗಂಧಂಗಳೆಲ್ಲಂಟಿಲೆಸ್ವಾಮಿಯೆಂದು ಬೆಸಗೊಂಡೊಡೆ, ಶಿವಶರಣನು ವಿನೋದಾರ್ಥವಾಗಿ ದೊಡ್ಡದೊಡ್ಡ ವನಾಂತರದೊಳಗೆ ಹೋಗುವಲ್ಲಿಯೂ, ಪರಿಮಳದ ಪುಷ್ಪಂಗಳ ತೋಟಂಗಳೊಳಗೆ ಹೋಗುವಲ್ಲಿಯೂ, ದೊಡ್ಡದೊಡ್ಡ ಪಟ್ಟಣಂಗಳಲ್ಲಿ ಬೀದಿಬಜಾರಂಗಳಲ್ಲಿ ಹೋಗುವಲ್ಲಿಯೂ, ಕಮ್ಮೆಣ್ಣೆ, ಕಸ್ತೂರಿ, ಬುಕ್ಕಿಟ್ಟು, ಹಣ್ಣು, ಪುಷ್ಪ, ಪತ್ರೆ ಮೊದಲಾದ ವಸ್ತುಗಳ ಗಂಧಂಗಳೊಂದೇವೇಳೆ ಕದಂಬವಾಗಿ ಬಂದುತಟ್ಟುವವು. ತಟ್ಟದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವ ಮಾ

ಡುವುದಕ್ಕೆ ಕೂಡದು. ಅದನ್ನು ಮಹಾಲಿಂಗದಲ್ಲಿ ಅರಿವುದು ಪಂಚವಿಧ ಲಿಂಗವನೊಳಕೊಂಡು ತೋರುವ ಆಚಾರಲಿಂಗದೊಳಗಣ ಮಹಾಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು. ಅದು ಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಟೆಲೆಸ್ವಾಮಿಯೆಂದು ಬೆಸಗೊಂಡೊಡೆ, ಅದು ಪೃಥ್ವೀತತ್ವದೊಳಗಣ ಆತ್ಮತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತ ಹಸ್ತದೊಳಗಣ ಸದ್ಭಾವಹಸ್ತದಿಂ ಪಿಡಿದುಕೊಂಡು ಕ್ರಿಯಾಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ, ಶ್ರದ್ಧಾಭಕ್ತಿಯೊಳಗಣ ಸಮರಸಭಕ್ತಿಯಿಂದ ಆಚಾರಲಿಂಗದೊಳಗಣ ಮಹಾಲಿಂಗಕ್ಕೆಂದರಿದಾರೋಪಿಸಿ, ನಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು, ಘ್ರಾಣೇಂದ್ರಿಯದೊಳಗಣ ಹೃದಯೇಂದ್ರಿಯಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಶಿವೈಕ್ಯನು ||೨೪|| ಈಪ್ರಕಾರದಿಂದ ಹೇಳಲ್ಪಟ್ಟವುತಾವೇ ಆಚಾರಲಿಂಗದೊಳಗಣ ಮಿಶ್ರಾರ್ಪಣ ಭಕ್ತಂಗೆ ಹರಣ ಕಿರಣಚೈತನ್ಯಪ್ರಕಾಶವನುಳ್ಳ ಆಚಾರಲಿಂಗವು ತಾನೊಂದೇ ಷಡ್ವಿಧಲಿಂಗವಾಗಿ ಷಡ್ವಿಧ ಗಂಧಪದಾರ್ಥಂಗಳನ್ನು ಷಡ್ವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿಕೊಂಬ ವಿಚಾರವು. ತದನಂತರದಲ್ಲಿ ಗುರುಲಿಂಗ ಮಾಹೇಶ್ವರಂಗೆ ಹರಣಕಿರಣ ಚೈತನ್ಯಪ್ರಕಾಶವನುಳ್ಳ ಗುರುಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು. ಗುರುಲಿಂಗದೊಳಗಣಾಚಾರಲಿಂಗ, ಗುರುಲಿಂಗದೊಳಗಣ ಶಿವಲಿಂಗ. ಗುರುಲಿಂಗದೊಳಗಣ ಜಂಗಮಲಿಂಗ, ಗುರುಲಿಂಗದೊಳಗಣ ಪ್ರಸಾದಲಿಂಗ, ಗುರುಲಿಂಗದೊಳಗಣ ಮಹಾಲಿಂಗವೆಂದು ಆರುಭೇದವಾಗಿಹುದು. ಗುರುಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧರುಚಿಪದಾರ್ಥಗಳು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಎಂತೆಂದೊಡೆ, ಹ್ಯಾಂಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಮಧುರವಾದ ರುಚಿಯಂ ಮಧು, ಗುಡ, ಸಕ್ಕರೆ, ಇಕ್ಷು, ಕದಳೀಫಲ, ಕರ್ಜೂರಾದಿಗಳಲ್ಲಿ ತೋರುವ ಶೀಯಾದರುಚಿಯೆಂಬ ಪದಾರ್ಥವನ್ನು ಆಚಾರಲಿಂಗದಲ್ಲಿ ಅರಿವುದು. ಗುರುಲಿಂಗದೊಳಗಣ ಆಚಾರಲಿಂಗದೊಳಗೆಯೆಂದು ತಿಳಿದರ್ಪಿತವ ಮಾಡುವದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ

ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಅಪ್ಪುತತ್ವದೊಳ
ಗಣ ಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವ
ನ್ನು ಸುಬುದ್ಧಿಹಸ್ತದೊಳಗಣ ಸುಚಿತ್ತ ಹಸ್ತದಿಂದ ಪಿಡಿದುಕೊಂಡು
ಜ್ಞಾನಶಕ್ತಿಯೊಳಗಣ ಕ್ರಿಯಾಶಕ್ತಿ ಯುಕ್ತವಾಗಿ ನೈಷ್ಠಿಕಾಭಕ್ತಿಯೊ
ಳಗಣ ಶ್ರದ್ಧಾಭಕ್ತಿಯಿಂದೆ ಗುರುಲಿಂಗದೊಳಗಣ ಆಚಾರಲಿಂಗಕೆಂದೆ
ರಿದಾರೋಪಿಸಿ, ಮಕಾರಮಂತ್ರದೊಳಗಣ ನಕಾರಮಂತ್ರಸ್ಮರಣೆಯೊಡ
ನೆಕೂಡಿ, ಜಿಹ್ವೇಂದ್ರಿಯಮುಖದೊಳಗಣ ಘ್ರಾಣೇಂದ್ರಿಯ ಮುಖದಲ್ಲಿ
ಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇ
ತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹನು ಮಾ
ಹೇಶ್ವರನೊಳಗಣ ಸದ್ಭಕ್ತನು ||೭೫|| ಕಾರೆ, ತದಿಕಿಲು, ಬಿಕ್ಕೆ, ಬೆಳ
ಲು, ಚಕ್ಕೆ, ಚೂತ, ಕ್ರಮುಕಾಮಳಾಕಾದಿಗಳಲ್ಲಿ ತೋರುವ ವಗರಾದ ರ
ಸವೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಅರಿವುದು. ಗುರುಲಿಂಗದೊ
ಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ಅದು
ಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಂಟೆಲೆಸ್ವಾ
ಮಿಯೆಂದು ಬೆಸಗೊಂಡೊಡೆ, ಅದು ಅಪ್ಪುತತ್ವದೊಳಗಣ ಅಪ್ಪುತತ್ವ
ಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಗುರುಲಿಂಗದೊ
ಳಗಣ ಗುರುಲಿಂಗಕ್ಕೆಂದರಿದಾರೋಪಿಸುವದು ||೭೬|| ಲವಂಗ, ಶುಂಠಿ,
ಹಿಪ್ಪಲಿ, ಮೋಡಿ, ಬೆಳ್ಳುಳ್ಳಿ, ಮೆಣಸು, ಮೆಣಸಿನಕಾಯಿ ಮೊದಲಾದ
ವುಗಳಲ್ಲಿ ತೋರುವ ಕಟುವಾದ ರುಚಿಯೆಂಬ ಪದಾರ್ಥವನ್ನು ಶಿವ
ಲಿಂಗದಲ್ಲಿ ಅರಿವುದು. ಗುರುಲಿಂಗದೊಳಗಣ ಶಿವಲಿಂಗದೊಳಗೆಂದು ತಿ
ಳಿದರ್ಪಿತವ ಮಾಡುವದು ||೭೭|| ಚೂತ, ಆಮ್ಲ, ಜಂಬೀರ, ಹೇರಳಿ,
ಮರುಗ ಮೊದಲಾದ ಫಲಾದಿಗಳಲ್ಲಿ ತೋರುವ ಹುಳಿಯಾದ ರಸವೆಂಬ
ಪದಾರ್ಥವನ್ನು ಜಂಗಮಲಿಂಗದಲ್ಲಿ ಅರಿವುದು. ಗುರುಲಿಂಗದೊಳಗಣ
ಜಂಗಮಲಿಂಗದೊಳಗೆಂದು ತಿಳಿದರ್ಪಿತವಮಾಡುವದು ||೭೮|| ತೊಪ್ಪೆ,
ಕಾರ್ಚಿ, ಪಾಗಲ, ಮಾದಳಂಗಾಯಿ, ಮೆಂತೆ, ಮೆಂತೆಸೊಪ್ಪು, ತಕ್ರ, ತೈ
ಲ, ಸಮ್ಮಿಶ್ರಾದಿಗಳಲ್ಲಿ ತೋರುವ ಕಹಿಯಾದ ರಸವೆಂಬ ಪದಾರ್ಥವನ್ನು
ಪ್ರಸಾದಲಿಂಗದಲ್ಲಿ ಅರಿವುದು. ಗುರುಲಿಂಗದೊಳಗಣ ಪ್ರಸಾದಲಿಂಗದೊ
ಳಗೆಂದು ತಿಳಿದರ್ಪಿತವಮಾಡುವದು ||೭೯|| ಇವೆಲ್ಲರಲ್ಲಿಯು ರುಚಿಯನರಿ
ವುದು ಮಹಾಲಿಂಗವು. ಹಿಂದೆ ಹೇಳಿದ ಮಧುರವಾದ ರುಚಿ, ವಗರಾದ

ರುಚಿ, ಕಾರವಾದರುಚಿ, ಆಮ್ಲವಾದರುಚಿ, ಕಹಿಯಾದರುಚಿ ಈ ಪಂಚ ವಿಧ ರುಚಿಪದಾರ್ಥಂಗಳನ್ನು ಗುರುಲಿಂಗದೊಡನೆಕೂಡಿದ ಆಚಾರಾದಿ ಪಂಚವಿಧಲಿಂಗಂಗಳಿಗೆ ಪಂಚವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಆ ಪಂಚವಿಧಲಿಂಗ ಮುಖದಿಂದುಳುಮೆಯಾಗಿಬಂದ ಪಂಚವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆದಣಿದು ಮನೆಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಅ ರ್ಪಣವು. ಇವೆಲ್ಲಾ ರುಚಿಗಳು ಬೇರೆಬೇರೆ ಬಂದುತಟ್ಟಿದರಂತು ಬೇರೆ ಬೇರೆ ಇಷ್ಟಲಿಂಗಾರ್ಪಿತವ ಮಾಡಬಹುದು. ಇವೆಲ್ಲಾ ರುಚಿಗಳೊಂದೇ ವೇಳೆ ಕದಂಬವಾಗಿ ಬಂದುತಟ್ಟಿದಲ್ಲಿ ಆಗ ವಿಂಗಡಿಸಿ ಲಿಂಗಾರ್ಪಿತವಮಾ ಡುವಡಕ್ಕೆ ಕೂಡದು. ಇವೆಲ್ಲಾ ರುಚಿಗಳೆಲ್ಲಂಟ್ಯೆಯ್ಯಾಸ್ವಾಮಿ ಎಂದು ಬೆಸಗೊಂಡೊಡೆ ಎಲ್ಲಾ ಪದಾರ್ಥಂಗಳನೊಂದೇವೇಳೆ ಗಡಣಿಸಿ ತಂದು ಮುಂದೆಮಡಗಿದಲ್ಲಿ ಆ ಸಕಲ ಪದಾರ್ಥಂಗಳನ್ನು ಹಸ್ತವಾದಿ ಸ್ವೀಕರಿ ಸುವಾಗೆಲ್ಲಾರುಚಿಗಳು ಬಂದೇವೇಳೆ ಕದಂಬವಾಗಿ ಬಂದುತಟ್ಟುವವು, ತಟ್ಟಿದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವ ಮಾಡುವಡಕ್ಕೆ ಕೂಡದು. ಅದನ್ನು ಪಂಚವಿಧಲಿಂಗವನೊಳಕೊಂಡು ತೋರುವ ಗುರುಲಿಂಗದೊಳ ಗಣ ಮಹಾಲಿಂಗದೊಳಗೆಂದುತಿಳಿದರ್ಪಿತವ ಮಾಡುವುದು. ಅದುಹ್ಯಾ ಗೆ ಸಮರ್ಪಣೆಯು ಮಾಡಬೇಕು, ಅದರ ಸಕೀಲವೆಂತುಟೆಲೆಸ್ವಾಮಿಯೆಂ ದು ಬೆಸಗೊಂಡೊಡೆ-ಅದು ಅಪ್ಪುತತ್ವದೊಳಗಣ ಆತ್ಮತತ್ವಸಂಬಂಧವಾ ದ ಪದಾರ್ಥವೆಂದರಿದು, ಆ ಪದಾರ್ಥವನ್ನು ಸುಬುದ್ಧಿಹಸ್ತದೊಳಗಣ ಸದ್ಭಾವ ಹಸ್ತದಿಂದ ಹಿಡಿದುಕೊಂಡು, ಜ್ಞಾನಶಕ್ತಿಯೊಳಗಣ ಚಿಚ್ಛಕ್ತಿ ಯುಕ್ತವಾಗಿ, ನೈಷ್ಠಿಕಭಕ್ತಿಯೊಳಗಣ ಸಮರಸಭಕ್ತಿಯಿಂದೇ ಗುರು ಲಿಂಗದೊಳಗಣ ಮಹಾಲಿಂಗಕ್ಕೆಂದರಿದು, ಮಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ಜಿಹ್ವೇಂದ್ರಿಯದೊಳ ಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂ ದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವಪಡೆದನುಭವಿಸಿ, ಪರಮ ಪರಿಣಾಮಿಯಾಗಿರುತ್ತಿಹನು ಮಾಹೇಶ್ವರನೊಳಗಣ್ಯೈಕ್ಯನು ॥೩೦॥ ಮ ತ್ತು ಈ ಮಧುರಾದ್ಯೈದುಪ್ರಕಾರವಾದ ರಸಂಗಳೊಳಗೆ ಲವಣವು ಕೂ ಡಿದಲ್ಲದೆ ರುಚಿಯಾಗದು. ಅದುಕಾರಣದಿಂದಾ ಲವಣವನ್ನು ಪಂಚರ ಸಂಗಳಲ್ಲಿ ತಕ್ಕತಕ್ಕಹಾಂಗೆ ಸಮ್ಮಿಶ್ರವೆಂಮಾಡಿ ಲಿಂಗಾರ್ಪಿತವ ಮಾಡ ಬೇಕು. ಹೀಗೆ ಲಿಂಗಾರ್ಪಿತವ ಮಾಡಿದರೆ ಪದಾರ್ಥ ರುಚಿಕರವಾಗು

ವುದು, ಪದಾರ್ಥದ ರುಚಿಕರವಾದಲ್ಲಿ ಕರಣಂಗಳು ಕೊಂಬುವವು. ಕರಣಂಗಳು ಕೊಂಡಲ್ಲಿ ಲಿಂಗಾರ್ಪಿತವಾಗುವುದು, ಲಿಂಗಾರ್ಪಿತವಾದಲ್ಲಿ ಪ್ರಸಾದ ಸೇವನೆಯಾಗುವುದು, ಪ್ರಸಾದಸೇವನೆಯಿಂದ ಮುಕ್ತಿಯಾಗುವುದು, ಅದಲ್ಲದೆ ಬೇರೆಬೇರೆ ಅರ್ಪಿಸಲಾಗದು, ಇದೊಂದು ಪದಾರ್ಥವಲ್ಲವೆಂದು ತಿಳಿದು ನಾವು ಲಿಂಗಕ್ಕೆ ಷಡ್ರುಚಿಗಳನರ್ಪಿಸಬೇಕೆಂದು ಪಂಚರಸಂಗಳನ್ನು ಬೇರೆಬೇರೆ ಒಂದೊಂದುಕಡೆಯಲ್ಲಿ ನೀಡಿಕೊಂಡು, ಲವಣವನ್ನು ಬೇರೊಂದುಕಡೆಯಲ್ಲಿ ನೀಡಿಕೊಂಡು ಬೇರೆಬೇರೆ ಅರ್ಪಿಸಲಾಗದು. ಹೀಗೆ ಲಿಂಗಾರ್ಪಿತವಮಾಡಿದರೆ ಪದಾರ್ಥರುಚಿಕರವಾಗದು. ಆ ಪದಾರ್ಥರುಚಿಕರವಾಗದಿದ್ದಲ್ಲಿ ಕರಣಂಗಳುಕೊಳ್ಳವು, ಕರಣಂಗಳು ಕೊಳ್ಳದಿದ್ದಲ್ಲಿ ಲಿಂಗಾರ್ಪಿತವಿಲ್ಲವು, ಆ ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆಯೆಂಬುದಿಲ್ಲ, ಪ್ರಸಾದಸೇವನೆ ಇಲ್ಲದಿದ್ದಲ್ಲಿ ಮುಕ್ತಿಮುನ್ನವೇ ಇಲ್ಲದೆ ಹೋಗುತ್ತಿಹುದು ||೩೧|| ತದನಂತರದಲ್ಲಿ ಶಿವಲಿಂಗಪ್ರಸಾದಿಗೆ ಹರಣಕಿರಣ ಚೈತನ್ಯಪ್ರಕಾಶವೆನುಳ್ಳ ಶಿವಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು, ಶಿವಲಿಂಗವೆಂದು ಶಿವಲಿಂಗದೊಳಗಣ ಆಚಾರಲಿಂಗ, ಶಿವಲಿಂಗದೊಳಗಣ ಗುರುಲಿಂಗ, ಶಿವಲಿಂಗದೊಳಗಣ ಜಂಗಮಲಿಂಗ, ಶಿವಲಿಂಗದೊಳಗಣ ಪ್ರಸಾದಲಿಂಗ, ಶಿವಲಿಂಗದೊಳಗಣ ಮಹಾಲಿಂಗವೆಂದು ಆರು ಭೇದವಾಗಿಪ್ಪುದು. ಶಿವಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧರೂಪು ಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಹ್ಯಾಂಗಿಪ್ಪದೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಪೀತವರ್ಣದರೂಪನರಿವುದು. ಚಿನ್ನದವರೆ, ಪೊನ್ನದಾವರೆ, ಮಂದಾವರೆ, ಬೆಟ್ಟದಾವರೆ, ಕನಕ, ಚಂಪಕ, ಕಾಶ್ಮೀರ, ಪೀತಾಂಬರಾದಿಗಳಲ್ಲಿ ತೋರುವ ಹಳದಿಬಣ್ಣದರೂಪೆಂಬ ಪದಾರ್ಥವನ್ನು ಶಿವಲಿಂಗದೊಳಗಣ ಆಚಾರಲಿಂಗದೊಳಗೆಂದು ತಿಳಿದರ್ಪಿತವಮಾಡುವುದು. ಅದು ಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಅದು ಅಗ್ನಿತತ್ವದೊಳಗಣ ಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು, ಆ ಪದಾರ್ಥವನ್ನು ನಿರಹಂಕಾರಹಸ್ತದೊಳಗಣ ಸುಚಿತ್ತಹಸ್ತದಿಂದ ಹಿಡಿದುಕೊಂಡು ಇಚ್ಛಾಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ ಸಾವಧಾನ ಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದೇ ಶಿವಲಿಂಗದೊಳಗಣ ಆಚಾರಲಿಂಗಕೆಂದರಿದಾಳೋಪ

ಸಿ, ಶಿಕಾರಮಂತ್ರದೊಳಗಣ ನಕಾರಮಂತ್ರಸ್ಮರಣೆಯಿಂದೇ ನೇತ್ರೇಂದ್ರಿಯದೊಳಗಣ ಘ್ರಾಣೇಂದ್ರಿಯಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವಪಡೆದನುಭವಿಸಿ, ಪರಮಪರಿಣಾಮಿಯಾಗಿರುತ್ತಿಹನು ಪ್ರಸಾದಿಯೊಳಗಣ ಸದ್ಭಕ್ತನು ॥೭೦॥ ನೀರು, ಕ್ಷೀರ, ತಾರ, ಹೀರ, ಪಟೀರ, ಚಂದ್ರ, ಶಂಖ, ಮೌಕ್ತಿಕಾದಿಗಳಲ್ಲಿ ತೋರುವ ಬಿಳ್ಪಿನಬಣ್ಣದರೂಪೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಅರಿವುದು. ಶಿವಲಿಂಗದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ॥೭೨॥ ಇಂದ್ರಗೋಪ, ಚಂದ್ರಗಾವಿ, ಸಂಧ್ಯಾಮೇಘರಾಗ ಮೊದಲಾದವರಲ್ಲಿ ತೋರುವ ಕೆಂಪಿನಬಣ್ಣದ ರೂಪೆಂಬ ಪದಾರ್ಥವನ್ನು ಶಿವಲಿಂಗದಲ್ಲರಿವುದು, ಶಿವಲಿಂಗದೊಳಗಣ ಶಿವಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು ॥೭೩॥ ದೇವಮಾತೃಕಾ, ನದೀಮಾತೃಕಾ, ಪಚ್ಚೆಯಮಣಿ, ಹಸುರುಹೊದಿಕೆ, ಗಿಳಿವಣ್ಣ ಮೊದಲಾದವರಲ್ಲಿ ತೋರುವ ಹಸುರಾದ ಬಣ್ಣದರೂಪೆಂಬ ಪದಾರ್ಥವನ್ನು ಜಂಗಮಲಿಂಗದಲ್ಲರಿವುದು, ಶಿವಲಿಂಗದೊಳಗಣ ಜಂಗಮಲಿಂಗದೊಳಗೆಯೆಂದು ತಿಳಿದರ್ಪಿತವಮಾಡುವುದು ॥೭೪॥ ಪರಮೆ, ಪರಪುಟ್ಟ, ಕೂದಲು, ಕದ್ದಾಳಿ, ಕರಿಯಪಟ್ಟು, ಕಾಡಿಗೆ, ಕಾವಳ, ಕಸ್ತೂರಿ ಮೊದಲಾದವರಲ್ಲಿ ತೋರುವ ಕಪ್ಪಿನಬಣ್ಣದರೂಪೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲರಿವುದು. ಶಿವಲಿಂಗದೊಳಗಣ ಪ್ರಸಾದಲಿಂಗದೊಳಗೆ ಎಂದು ತಿಳಿದರ್ಪಿತವ ಮಾಡುವುದು ॥೭೫॥ ಇವೆಲ್ಲರಲ್ಲಿಯು ರೂಪನರಿವುದು ಮಹಾಲಿಂಗದಲ್ಲಿ ಹಿಂದೆಹೇಳಿದ ಪೀತವರ್ಣದರೂಪು, ಸ್ವೇತವರ್ಣದರೂಪು, ಮಾಂಜಿಷ್ಟವರ್ಣದರೂಪು, ಹರಿತವರ್ಣದರೂಪು, ಕೃಷ್ಣವರ್ಣದರೂಪೆಂಬ ಪಂಚವಿಧ ರೂಪುಪದಾರ್ಥಂಗಳನ್ನು ಶಿವಲಿಂಗದೊಡನೆಕೂಡಿದ ಪಂಚವಿಧಲಿಂಗಂಗಳಿಗೆ ಪಂಚವಿಧಭಕ್ತಿಸಕೀಲಂಗಳಿಂದೇ ಸಮರ್ಪಿಸಿ, ಆ ಪಂಚವಿಧಲಿಂಗದಿಂದುಳುಮೆಯಾಗಿಬಂದ ಪಂಚವಿಧಪ್ರಸಾದವ ಪಡೆದನುಭವಿಸಿ, ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರುಗಿದಂತಾದ್ದೇ ಇವೆಲ್ಲರಲ್ಲಿಯುರೂಪು, ಇವೆಲ್ಲಾ ರೂಪುಗಳು ಬೇರೆಬೇರೆಬಂದು ತಟ್ಟಿದರಂತು ಬೇರೆಬೇರೆ ಲಿಂಗಾರ್ಪಿತವಮಾಡಬಹುದು. ಅದಲ್ಲದೆ ಇವೆಲ್ಲಾರೂಪುಗಳು ಒಂದೇವೇಳೆ ಕದಂಬವಾಗಿ ಬಂದುತಟ್ಟಿದಲ್ಲಿ ಆಗ ಹಿಂಗಡಿಸಿ ಲಿಂಗಾರ್ಪಿತವ ಮಾಡುವಡಕ್ಕೆ ಕೂಡದು. ಇವೆಲ್ಲಾ ರೂಪುಗಳೆಲ್ಲಂಅಂತ್ಯಮ್ಯಾಸ್ವಾವಿ

ಯೆಂದು ಬೆಸಗೊಂಡೊಡೆ, ಶಿವಶರಣನು ವಿನೋದಾರ್ಥವಾಗಿ ದೊಡ್ಡದೊಡ್ಡ ರಾಜಸಭೆ, ದೇವಸಭೆ, ವಿವಾಹಮಂಟಪಗಳನ್ನು ನಿರೀಕ್ಷಣೆಯಮಾಡಿದಲ್ಲಿ ಆಗ ಎಲ್ಲಾರೂಪುಗಳೊಂದೇವೇಳೆ ಕದಂಬವಾಗಿಬಂದು ತಟ್ಟುವವು, ತಟ್ಟಿದಲ್ಲಿ ಆಗ ಹಿಂಗಡಿಸಿ ಲಿಂಗಾರ್ಪಿತವಮಾಡುವುದಕ್ಕೆ ಕೂಡದು. ಅದನ್ನು ಮಹಾಲಿಂಗದಲ್ಲಿ ಅರಿವುದು, ಪಂಚವಿಧಲಿಂಗವನೊಳಕೊಂಡು ತೋರುವ ಶಿವಲಿಂಗದೊಳಗಣ ಮಹಾಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು. ಅದು ಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಂಟೆಲೆಸ್ವಾಮಿಯೆಂದು ಬೆಸಗೊಂಡೊಡೆ, ಅದು ಅಗ್ನಿತತ್ವದೊಳಗಣ ಆತ್ಮತತ್ವಸಂಬಂಧವಾದ ಪದಾರ್ಥವೆಂದರಿದು, ಆ ಪದಾರ್ಥವನ್ನು ನಿರಹಂಕಾರಹಸ್ತದೊಳಗಣ ಸದ್ಭಾವಹಸ್ತದಿಂದ ಪಿಡಿದುಕೊಂಡು ಇಚ್ಛಾಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ಸಾವಧಾನಭಕ್ತಿಯೊಳಗಣ ಸಮರಸಭಕ್ತಿಯಿಂದೇ ಶಿವಲಿಂಗದೊಳಗಣ ಮಹಾಲಿಂಗಕ್ಕೆಂದು ಅರಿದಾರೋಪಿಸಿ, ಶಿಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ನೇತ್ರೇಂದ್ರಿಯದೊಳಗಣ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿರುತ್ತಿಹನು ಪ್ರಸಾದಿಯೊಳಗಣ ಶಿವೈಕ್ಯನು ॥೩೭॥ ತದನಂತರದಲ್ಲಿ ಜಂಗಮಲಿಂಗ ಪ್ರಾಣಲಿಂಗಿಗೆ ಚಿತ್ಪ್ರಾಣವಾದ ಜಂಗಮಲಿಂಗವು ತಾನೊಂದೇ ಷಡ್ವಿಧ ಲಿಂಗಗಳಾದವು. ಜಂಗಮಲಿಂಗದೊಳಗಣ ಆಚಾರಲಿಂಗ, ಜಂಗಮಲಿಂಗದೊಳಗಣ ಗರುಲಿಂಗ, ಜಂಗಮಲಿಂಗದೊಳಗಣ ಶಿವಲಿಂಗ, ಜಂಗಮಲಿಂಗದೊಳಗಣ ಪ್ರಸಾದಲಿಂಗ, ಜಂಗಮಲಿಂಗದೊಳಗಣ ಮಹಾಲಿಂಗವೆಂದು ಆರುಭೇದವಾಗಿಹುದು. ಅರ್ಪಣದ ಜಂಗಮಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಸ್ಪರ್ಶನ ಪದಾರ್ಥಂಗಳನ್ನು ಷಡ್ವಿಧ ಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಹ್ಯಾಂಗಿಪ್ಪುದೆಲೆಸ್ವಾಮಿಯೆಂದು ಬೆಸಗೊಂಡೊಡೆ, ನವಕಂಬಳಾಚ್ಛಾದನ, ಶರಕರಾಧ್ವಗಮನ, ಕೇವಲ ಕಠಿಣಶಯನ, ತರುಭಿತ್ತಿ ಶಿಲಾದಿಗಳವಲಂಬನದಿಂದ ಅಂಗಕ್ಕೆ ಬಿರಸಾಗಿತಟ್ಟುವ ಕಠಿಣವಾದ ಸ್ಪರ್ಶನವೆಂಬ ಪದಾರ್ಥವನ್ನು ಆಚಾರಲಿಂಗದಲ್ಲರಿವುದು. ಜಂಗಮಲಿಂಗದೊಳಗಣ ಆಚಾರಲಿಂಗದೊಳಗೆಂದುತಿಳಿದರ್ಪಿತವ ಮಾಡುವುದು, ಅದು ಹ್ಯಾಂಗೆ ಸಮರ್ಪಣೆಯ

ಮಾಡಬೇಕು, ಅದರ ಸಕೀಲವೆಂತೆಂದಡೆ ಸ್ವಾಮಿಯೆಂದು ಬೆಸಗೊಂಡೊಡೆ, ಅದು ವಾಯುತತ್ವದೊಳಗಣ ಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು, ಆ ಪದಾರ್ಥವನ್ನು ಸುಮನಸಹಸ್ತದೊಳಗಣ ಸುಚಿತ್ತಹಸ್ತದಿಂ ಪಿಡಿದುಕೊಂಡು, ಆದಿಶಕ್ತಿಯೊಳಗಣ ಕ್ರಿಯಾಶಕ್ತಿಯುಕ್ತವಾಗಿ, ಅನುಭಾವಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದೆ ಜಂಗಮಲಿಂಗದೊಳಗಣ ಆಚಾರಲಿಂಗಕ್ಕಂದರಿದಾರೋಪಿಸಿ, ವಕಾರಮಂತ್ರದೊಳಗಣ ನಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು, ತ್ವಗಿಂದ್ರಿಯ ಮುಖದೊಳಗಣ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮ ಪರಿಣಾಮಿಯಾಗಿ ಇರುತ್ತಿಹನು ಪ್ರಾಣಲಿಂಗಿಯೊಳಗಣ ಸದ್ಭಕ್ತನು ‖೩೮‖ ಹಂಸತೂಲತಲ್ಪ, ಸುಪ್ಪತ್ತಿಗೆ, ಸುಚೇಲನಪುಷ್ಪಾದಿಗಳಿಂದಂಗಕ್ಕೆ ಮೆತ್ತಗೆ ತಟ್ಟುವ ಮೃದುಸ್ಪರ್ಶನವೆಂಬ ಪದಾರ್ಥವನ್ನು ಆ ಗುರುಲಿಂಗದಲ್ಲರಿವುದು, ಜಂಗಮಲಿಂಗದೊಳಗಣ ಗುರುಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು ‖೩೯‖ ಬಿಸಿನೀರು ಬೆಂಕಿಗಳಿಂದ ಅಂಗಕ್ಕೆ ಬೆಚ್ಚಗೆತಟ್ಟುವ ಉಷ್ಣಸ್ಪರ್ಶನವೆಂಬ ಪದಾರ್ಥವನ್ನು ಶಿವಲಿಂಗದಲ್ಲರಿವುದು, ಜಂಗಮಲಿಂಗದೊಳಗಣ ಶಿವಲಿಂಗದೊಳಗೆಂದು ತಿಳಿದರ್ಪಿತವಮಾಡುವುದು ‖೪೦‖ ಹಿಮಶಿಶಿರಗ್ರೀಷ್ಮ ಶರತ್ಕಾಲಗಳಿಂದಲೂ, ಚಳಿ ಗಾಳಿ ಮಳೆಗಳಿಂದಲೂ, ಅಂಗಕ್ಕೆ ತಣ್ಣಗೆ ತಟ್ಟುವ ತಣ್ಣನಸ್ಪರ್ಶನವೆಂಬ ಪದಾರ್ಥವನ್ನು ಜಂಗಮಲಿಂಗದಲ್ಲರಿವುದು. ಜಂಗಮಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ‖೪೧‖ ಚಿತ್ರವ ಬರೆಯಲ್ಪಟ್ಟ ಭಿತ್ತಿಯಪಟಂಗಳೋಳ್, ಗಂಜಿಬಳಪಿನ ಮಿಂಚುಗಳಿಂದಾದ ಸರಿಗಳೋಳ್, ಪಟ್ಟುಕಂಬಾದಿಗಳೋಳ್, ಗಜ್ಜುಗ, ಗಣಪೆಕಾಯಿ ಮೊದಲಾದವರಲ್ಲಿ ತೋರುವ ನುಣುಪಾದಸ್ಪರ್ಶನವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲಿ ಅರಿವುದು. ಜಂಗಮಲಿಂಗದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ‖೪೨‖ ಇದೆಲ್ಲದಲ್ಲಿಯು ಸ್ಪರ್ಶನವುಂ ಹಿಂದೆಹೇಳಿದ ಕಠಿನವಾದ ಸ್ಪರ್ಶನ, ಮೃದುವಾದ ಸ್ಪರ್ಶನ, ಉಷ್ಣವಾದ ಸ್ಪರ್ಶನ, ಶೈತ್ಯವಾದ ಸ್ಪರ್ಶನ, ಮಿಶ್ರವಾದ ಸ್ಪರ್ಶನವೆಂಬ ಪಂಚವಿಧಸ್ಪರ್ಶನಪದಾರ್ಥಗಳನ್ನು ಜಂಗಮಲಿಂಗದೊಡನೆ ಕೂಡಿದ ಆಚಾರಾದಿ ಪಂಚವಿಧಲಿಂ

ಗಂಗಳಿಗೆ ಪಂಚವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ ಆ ಪಂಚವಿಧಲಿಂಗ ಮುಖದಿಂದುಳುಮೆಯಾಗಿಬಂದ ಪಂಚವಿಧಪ್ರಸಾದವ ಪಡೆದನುಭವಿಸಿ ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಇವೆಲ್ಲರಲ್ಲಿಯು ಸ್ಪರ್ಶನ, ಇವೆಲ್ಲಾ ಸ್ಪರ್ಶನಂಗಳು ಬೇರೆಬೇರೆ ಬಂದು ತಟ್ಟಿದರಂತು ಬೇರೆಬೇರೆ ಇಟ್ಟುಲಿಂಗಾರ್ಪಿತವ ಮಾಡಬಹುದು. ಅದಲ್ಲದೆ ಇವೆಲ್ಲಾಸ್ಪರ್ಶನಂಗಳೊಂದೇವೇಳೆ ಕದೆಂಬವಾಗಿಬಂದು ತಟ್ಟಿದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವಮಾಡುವದಕ್ಕೆ ಕೂಡದು. ಇವೆಲ್ಲಾ ಸ್ಪರ್ಶನಂಗಳೆಲ್ಲಂಟಲೆ ಸ್ವಾಮಿಯೆಂದು ಬೆಸಗೊಂಡೊಡೆ—ಶಿವಶರಣನು ಮಾಳಿಗೆಯಮನೆಯಲ್ಲಿ ಪಟ್ಟೆಯಮಂಚ ಸುಪತ್ತಿಗೆಯಮೇಲೆ ಪವಡಿಸಿಕೊಂಡು, ಪಟ್ಟೆಯ ಹಚ್ಚಡವನ್ನು ಹೊದ್ದುಕೊಂಡು, ಹಸ್ತಪಾದಾದಿಗಳ ನೊತ್ತಿಸಿಕೊಳ್ಳುತ್ತ, ವೀಳ್ಯವನೀಡಿಕೊಳ್ಳುತ್ತ, ಬೀಸಿಣಿಕೆಯ ಬೀಸಿಕೊಳ್ಳುತ್ತ ಇದ್ದಲ್ಲಿ. ಅವೆಲ್ಲಾ ಸ್ಪರ್ಶನಂಗಳು ಒಂದೇವೇಳೆ ಕದೆಂಬವಾಗಿಬಂದು ತಟ್ಟುವವು. ತಟ್ಟದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವನಾಡುವದಕ್ಕೆ ಕೂಡದು, ಅದನ್ನು ಮಹಾಲಿಂಗದಲ್ಲಿ ಅರಿವುದು, ಪಂಚವಿಧಲಿಂಗವನೊಳಕೊಂಡು ತೋರುವ ಜಂಗಮಲಿಂಗದೊಳಗಣ ಮಹಾಲಿಂಗದೊಳಗೆಂದು ತಿಳಿದರ್ಪಿತವ ಮಾಡುವದು. ಅದರ ಸಕೀಲೆಂತುಂಟಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅದು ವಾಯುತತ್ವದೊಳಗಣ ಆತ್ಮತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಮನಹಸ್ತದೊಳಗಣ ಸದ್ಭಾವಹಸ್ತದಿಂ ಪಿಡಿದುಕೊಂಡು ಆದಿಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ ಅನುಭಾವಭಕ್ತಿಯೊಳಗಣ ಸಮರಸಭಕ್ತಿಯಿಂದೇ ಜಂಗಮಲಿಂಗದೊಳಗಣ ಮಹಾಲಿಂಗಕ್ಕೆಂದು ಅರಿದಾರೋಪಿಸಿ, ವಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ತ್ವಗಿಂದ್ರಿಯದೊಳಗಣ ಹೃದಯೇಂದ್ರಿಯಮುಖದಲ್ಲಿಯೇ ಸಮರ್ಪಿಸಿ ಆಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೀತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಹನು ಪ್ರಾಣಲಿಂಗಿಯೊಳಗಣ ಶಿವೈಕ್ಯನು ‖೪೩‖ ತದನಂತರದಲ್ಲಿ ಪ್ರಸಾದಲಿಂಗಿಶರಣಂಗೆ ಚಿತ್ಪ್ರಾಣವಾದ ಪ್ರಸಾದಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು. ಪ್ರಸಾದಲಿಂಗದೊಳಗಣ ಗುರುಲಿಂಗ, ಪ್ರಸಾದಲಿಂಗದೊಳಗಣ ಶಿವಲಿಂಗ, ಪ್ರಸಾದಲಿಂಗದೊಳಗಣ ಜಂಗಮಲಿಂಗ, ಪ್ರಸಾದಲಿಂಗದೊಳಗಣ ಮಹಾಲಿಂಗವೆಂದು ಆರುಭೇದವಾದವು. ಪ್ರಸಾದ

ಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಶಬ್ದಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಹ್ಯಾಂಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ತಾಳ, ಮಟ್ಟತಾಳ, ರೂಪಕ, ಜಂಪೆ, ತ್ರಿಪುಟ, ಏಕತಾಳ, ಅಟತಾಳವೆಂಬ ಸಪ್ತತಾಳಂಗಳಗತಿಯಿಂದ ತಾಂಡವಸ್ಥಾನಂಗಳಲ್ಲಿ ನುಡಿಸುವ ವಾದ್ಯವೇ ತಾಳ. ಕೌಸಾಳ ದೇವತಾಮೂರ್ತಿಗಳನ್ನು ಗದ್ದಿಗೆಗೋಳಿಸಿ ತದಗ್ರಸ್ಥಾನದೋಳ್ ನುಡಿಸುವ ಕಂಚಿನವಾದ್ಯವೇ ಕೌಸ್ಥಳವು. ಇಂತಪ್ಪವನು ದೃಢವಿಡಿದು ಹುಟ್ಟಿದ ಶಬ್ದವಂ ನಾದಘೋಷವೆಂಬ ಪದಾರ್ಥವನ್ನು ಆಚಾರಲಿಂಗದಲ್ಲಿ ಅರಿವುದಾಪ್ರಸಾದಲಿಂಗದೊಳಗಣ ಆಚಾರಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು. ಅದುಹ್ಯಾಗೆ ಸಮರ್ಪಣೆಯ ಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ-ಅದು ಆಕಾಶತತ್ವದೊಳಗಣ ಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಪ್ರಸಾದಲಿಂಗದೊಳಗಣ ಆಚಾರಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು ॥೪೪॥ ತಂತಿ, ಪಟ್ಟುದಾರ, ಪಂಚಲೋಹದ ತಂತಿಗಳಂಬಂಧಿಸಿ, ನಖಾಗ್ರದಿಂದ ಮಿಡಿದು ನುಡಿಸುವ ಕಿನ್ನರವೀಣೆ, ತುಂಬುರವೀಣೆ, ಅಂತರವೀಣೆ, ಕಶ್ಯಪವೀಣೆ, ಸಾರಂಗವೀಣೆ, ಸರವೀಣೆ, ಆಕಾಶವೀಣೆ, ನಾರದವೀಣೆ, ರಾವಳಹಸ , ಬ್ರಹ್ಮವೀಣೆ, ಸರಮಂಡಲ, ರುದ್ರವೀಣೆ ಮೊದಲಾದಿಪ್ಪತ್ತೆಂಟುತೆರದ ವೀಣಾವಾದ್ಯಂಗಳಲ್ಲಿ ದೃಢವಿಡಿದು ಹುಟ್ಟಿದ ಶಬ್ದವಂ ನಾದಘೋಷವೆಂಬ ಪದಾರ್ಥವನ್ನು ಗುರುಲಿಂಗದಲ್ಲಿ ಅರಿವುದು. ಪ್ರಸಾದಲಿಂಗದೊಳಗಣ ಗುರುಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು. ॥೪೫॥ ಕುಡುಹು-ದಾರುಘಟಕ್ಕೆ ಚರ್ಮತಂತಿಗಳಂಬಂಧಿಸಿ ಕಾಷ್ಠಾಂಗುಲಿಗಳಿಂದ ಬಡಿದು ನುಡಿಸುವಂತ ಭೇರಿ, ಮುರುಜ, ಪಟಹ, ಢಕ್ಕ, ಡಮರುಗ, ಡಮಾಮಿ, ಡೊಳ್ಳು, ಕರಡೆ, ಚಕ್ರವಾದ್ಯ ಮೊದಲಾದವನ್ನು ದೃಢವಿಡಿದು ಹುಟ್ಟಿದ ಶಬ್ದವಂ ನಾದಘೋಷವೆಂಬ ಪದಾರ್ಥವನ್ನು ಶಿವಲಿಂಗದಲ್ಲಿ ಅರಿವುದು. ಪ್ರಸಾದಲಿಂಗದೊಳಗಣ ಶಿವಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ॥೪೬॥ ಕೊಳಲು, ವಾಸುಗಿ, ನಾಗಸರ, ಶಂಖದೊಳಗಾಗಿ ತುಟಿಗಳಿಂದ ಕಚ್ಚಿ ಉಸುರುಗಳಿಂ ಬಂಧಿಸಿ ಊದಿನುಡಿಸುವ ವೇಣು, ಸುಸಿರವಾದ್ಯ, ಕೊಂಬುವಾದ್ಯದೊಳಗಾಗಿ ಹುಟ್ಟಿದ ಶಬ್ದವಂ ನಾದಘೋಷವೆಂಬ ಪದಾರ್ಥ

ವನ್ನು ಜಂಗಮಲಿಂಗದಲ್ಲಿ ಅರಿವುದು. ಪ್ರಸಾದಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದರ್ಪಿತವ ಮಾಡುವುದು ||೪೭|| ವಚನಗೀತಂಗಳೊಳಗಾಗಿ ತಾಲವ್ಯ ಮೂರ್ಧನ್ಯ ದಂತವ್ಯಗಳಿಂದ ಮೂವತ್ತೆರಡುರಾಗ, ಅರವತ್ತುನಾಲ್ಕು ಮಿಶ್ರಯುಕ್ತವಾಗಿ ಚೌದಟ್ಟಿ ಓದುವಂತ ಸರಸಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕ, ಉದ್ದಂಡಂಗಳೆಂಬ ಷಟ್ಪದಂಗಳು, ಸ್ವರವಚನ ಮೃದುವಾಕ್ಯದಿಂ ಕಂದ, ವೃತ್ತ, ಗದ್ಯ, ಪದ್ಯ, ಸ್ವರ, ಸಂಗೀತ, ಪ್ರಬಂಧಾದಿಗಳೊಳಗಾಗಿ ಹುಟ್ಟಿದ ಶಬ್ದಮಂ ನಾದಘೋಷವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲಿ ಅರಿವುದು. ಪ್ರಸಾದಲಿಂಗದೊಳಗಣ ಪ್ರಸಾದಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು ||೪೮|| ಇವೆಲ್ಲರಲ್ಲಿಯೂ ಹುಟ್ಟಿದ ಶಬ್ದವಂಹಿಂದೆ ಹೇಳಿದೆ ತಾಳ ಕಾಸಾಳವಿಡಿದುಹುಟ್ಟಿದ ಶಬ್ದವಂ ತಂತಿವಿಡಿದು ಹುಟ್ಟಿದ ಶಬ್ದವಂ ಕುಡುಹುವಿಡಿದು ಪುಟ್ಟಿದಶಬ್ದವಂ, ಕೊಳಲು, ವಾಸುಗಿ, ನಾಗಸರ, ಶಂಖದೊಳಗಾಗಿ ಹುಟ್ಟಿದ ಶಬ್ದವಂ ವಚನಗೀತದೊಳಗಾಗಿ ಹುಟ್ಟಿದಶಬ್ದವೆಂಬ ಪಂಚವಿಧಶಬ್ದ ಪದಾರ್ಥಂಗಳನ್ನು ಪ್ರಸಾದಲಿಂಗದೊಡನೆಕೂಡಿದ ಪಂಚವಿಧಲಿಂಗಂಗಳಿಗೆ ಪಂಚವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿ, ಆ ಪಂಚವಿಧಲಿಂಗಮುಖದಿಂದುಳ:ಮೆಯಾಗಿಬಂದ ಪಂಚವಿಧಪ್ರಸಾದವ ಪಡೆದನುಭವಿಸಿ ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಇವೆಲ್ಲರಲ್ಲಿಯು ಹುಟ್ಟಿದಶಬ್ದ, ಅಂತಪ್ಪ ಇವೆಲ್ಲರಲ್ಲಿಯುಹುಟ್ಟಿದ ಶಬ್ದವೆಂಬ ಪದಾರ್ಥವನ್ನು ಇವೆಲ್ಲಾ ಶಬ್ದಂಗಳು ಬೇರೆಬೇರೆ ಬಂದುತಟ್ಟಿದರಂತು ಬೇರೆಬೇರೆ ಇಟ್ಟು ಲಿಂಗಾರ್ಪಿತವ ಮಾಡಬಹುದು. ಅದಲ್ಲದೆ ಇವೆಲ್ಲಾ ಶಬ್ದಂಗಳೊಂದೇವೇಳೆ ಕದಂಬವಾಗಿಬಂದು ತಟ್ಟಿದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವ ಮಾಡುವದಕ್ಕೆ ಕೂಡದು, ಇವೆಲ್ಲಾ ಶಬ್ದಂಗಳೆಲ್ಲುಂಟಲೆ ಸ್ವಾಮಿಯೆಂದು ಬೆಸಗೊಂಡೊಡೆ, ಶಿವಶರಣನು ವಿನೋದಾರ್ಥವಾಗಿ ದೊಡ್ಡದೊಡ್ಡ ರಾಜ್ಯಾಧಿಪತಿಗಳು ಸವಾರಿಮುಖಾಂತರವಾಗಿ ಹೊರಟಲ್ಲಿಯು, ತೇರುತಿರುಸಾಳಂಗಳಲ್ಲಿ ಎಲ್ಲಾ ಶಬ್ದಂಗಳು ಶಿವಶರಣಂಗೊಂದೇವೇಳೆ ಕದಂಬವಾಗಿಬಂದು ತಟ್ಟುವವು. ತಟ್ಟಿದಲ್ಲಿ ಆಗ ಇಂಗಡಿಸಿ ಲಿಂಗಾರ್ಪಿತವ ಮಾಡುವದಕ್ಕೆ ಕೂಡದು, ಅವನ್ನು ಮಹಾಲಿಂಗದಲ್ಲಿ ಅರಿವುದು. ಪಂಚವಿಧ ಲಿಂಗವನೊಳಕೊಂಡು ತೋರುವ ಪ್ರಸಾದಲಿಂಗದೊಳಗಣ ಮಹಾಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು. ಅದು

ಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಅದು ಆಕಾಶತತ್ವದೊಳಗಣ ಆತ್ಮತತ್ತ್ವ ಸಂಬಂಧವಾದ ಪದಾರ್ಥವೆಂದೆರಿದು, ಆಪದಾರ್ಥವನ್ನು ಸುಜ್ಞಾನ ಹಸ್ತದೊಳಗಣ ಸದ್ಭಾವಹಸ್ತದಿಂದ ಪಿಡಿದುಕೊಂಡು ಪರಶಕ್ತಿಯೊಳಗಣ ಚಿಚ್ಛಕ್ತಿಯುಕ್ತವಾಗಿ, ಆನಂದಭಕ್ತಿಯೊಳಗಣ ಸಮರಸ ಭಕ್ತಿಯಿಂದೇ ಪ್ರಸಾದಲಿಂಗದೊಳಗಣ ಮಹಾಲಿಂಗಕ್ಕೆಂದೆರಿದಾರೋಪಿಸಿ ಯಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ಶ್ರೋತ್ರೇಂದ್ರಿಯದೊಳಗಣ ಹೃದಯೇಂದ್ರಿಯಮುಖದಲ್ಲಿಯೇಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿ ಪ್ರಸಾದವ ಪಡೆದನುಭವಿಸಿ, ಪರಮ ಪರಿಣಾಮಿಯಾಗಿರುತ್ತಿಹನು ಶರಣನೊಳಗಣ ಶಿವೈಕ್ಯನು ॥೪೯॥ ಶರಣಂಗೆ ಚಿತ್ಪ್ರಾಣವಾದ ಪ್ರಸಾದಲಿಂಗವು ತಾನೊಂದೇ ವಿಭಜಿಸಿ, ಷಡ್ವಿಧಲಿಂಗವಾಗಿ ಷಡ್ವಿಧಶಬ್ದಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಬಂತವಿಚಾರವು ; ತದನಂತರದಲ್ಲಿ ಮಹಾಲಿಂಗೈಕ್ಯಂಗೆ ಚಿತ್ಪ್ರಾಣವಾದ ಮಹಾಲಿಂಗವು ತಾನೊಂದೇ ಷಡ್ವಿಧಲಿಂಗಗಳಾದವು. ಮಹಾಲಿಂಗದೊಳಗಣ ಆಚಾರಲಿಂಗ, ಮಹಾಲಿಂಗದೊಳಗಣ ಗುರುಲಿಂಗ, ಮಹಾಲಿಂಗದೊಳಗಣ ಶಿವಲಿಂಗ, ಮಹಾಲಿಂಗದೊಳಗಣ ಜಂಗಮಲಿಂಗ, ಮಹಾಲಿಂಗದೊಳಗಣ ಪ್ರಸಾದಲಿಂಗವೆಂದು ಆರು ಭೇದವಾಗಿಹುದು. ಮಹಾಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧತೃಪ್ತಿ ಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ವಿಚಾರವು ಹ್ಯಾಂಗಿಪ್ಪದಲೆ ಸ್ವಾಮಿಯೆಂದು ಬೆಸಗೊಂಡೊಡೆ—ಬೇರುಗೆಣಸು ಮೊದಲಾದಗಂಧ, ಮರದತಿಗಡು, ಅಗಿನ ಮೊದಲಾದ ಗಂಧ, ಚಿಗುರು ಮೊದಲಾದ ಪತ್ರೆಯಗಂಧ, ಮೊಗ್ಗೆ ಮೊದಲಾದ ಪುಷ್ಪಗಂಧ, ಕಾಯಿಹಣ್ಣು ಮೊದಲಾದ ಫಲದಗಂಧ, ಈ ಷಡ್ವಿಧ ಗಂಧಪದಾರ್ಥಂಗಳನ್ನು ಆಚಾರಲಿಂಗದೊಡನೆಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿ ಆ ಷಡ್ವಿಧಲಿಂಗಮುಖದಿಂದುಳುಮೆಯಾಗಿಬಂದ ಷಡ್ವಿಧಪ್ರಸಾದವ ಪಡೆದನುಭವಿಸಿ ದಣ್ಣನೆದಣಿದು, ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಗಂಧದತೃಪ್ತಿ. ಅಂತಪ್ಪ ಗಂಧದತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಆಚಾರಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು. ಅದುಹ್ಯಾಂಗೆ ಸಮರ್ಪ

ಣೆಯ ಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸ
ಗೊಂಡೊಡೆ—ಅದು ಆತ್ಮತತ್ವದೊಳಗಣ ಪೃಥ್ವೀತತ್ವಸಂಬಂಧವಾದ
ಪದಾರ್ಥವೆಂದರಿದು ಆ ಪದಾರ್ಥವನ್ನು ಸದ್ಭಾವಹಸ್ತದೊಳಗಣ ಸುಚಿ
ತ್ತ ಹಸ್ತದಿಂದ ಪಿಡಿದುಕೊಂಡು ಚಿಚ್ಛಕ್ತಿಯೊಳಗಣ ಕ್ರಿಯಾಶಕ್ತಿಯು
ಕ್ತವಾಗಿ ಸಮರಸಭಕ್ತಿಯೊಳಗಣ ಶ್ರದ್ಧಾಭಕ್ತಿಯಿಂದ ಮಹಾಲಿಂಗ
ದೊಳಗಣ ಆಚಾರಲಿಂಗಕೆಂದಾರೋಪಿಸಿ, ಓಂಕಾರಮಂತ್ರದೊಳಗಣ ನ
ಕಾರಮಂತ್ರಸ್ಮರಣೆಯೊಡನೆ ಕೂಡಿಕೊಂಡು ಹೃದಯೇಂದ್ರಿಯದೊಳಗ
ಣಘ್ರಾಣೇಂದ್ರಿಯಮುಖದಲ್ಲಿಯೇ ಸಮರ್ಪಿಸಿ, ಆಲಿಂಗಮುಖದಿಂದುಳು
ಮೆಯಾಗಿಬಂದ ಪ್ರಸನ್ನೇತಿಪ್ರಸಾದವಪಡೆದನುಭವಿಸಿ ಪರಮಪರಿಣಾಮಿ
ಯಾಗಿರುತ್ತಿಹನು ಐಕ್ಯನೊಳಗಣ ಸದ್ಭಕ್ತನು ||೪೦|| ಮಧುರವಾದ
ರಸ, ಒಗರಾದರಸ, ಕಾರವಾದರಸ, ಆಮ್ಲವಾದರಸ, ಕಹಿಯಾದರಸ, ಷ
ಡ್ವಿಧರಸಪದಾರ್ಥಂಗಳನ್ನು ಗುರುಲಿಂಗದೊಡನೆಕೂಡಿದ ಷಡ್ವಿಧಲಿಂಗಂ
ಗಳಿಗೆ ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿ, ಆ ಷಡ್ವಿಧಲಿಂಗದಿಂ
ದುಳುಮೆಯಾಗಿ ಬಂದ ಷಡ್ವಿಧಪ್ರಸಾದವ ಪಡೆದನುಭವಿಸಿ, ದಣ್ಣನೆದ
ಣಿದು, ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ರಸದ ತೃಪ್ತಿ. ಅಂತಪ್ಪ ರಸ
ದ ತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಗುರುಲಿಂಗದ
ಲ್ಲಿ ಎಂದು ತಿಳಿದರ್ಪಿತವಮಾಡುವುದು ||೪೧|| ರೂಪಿನ ತೃಪ್ತಿಯೆಂ ಪೀ
ತವರ್ಣದ ರೂಪು, ಶ್ವೇತವರ್ಣದರೂಪು, ಮಾಂಜಿಷ್ಟವರ್ಣದರೂಪು,
ಹರಿತವರ್ಣದರೂಪು, ಕೃಷ್ಣವರ್ಣದರೂಪು, ಕಪೋತವರ್ಣದರೂಪು,
ಇವೆಲ್ಲರಲ್ಲಿಯು ರೂಪೆಂಬ ಷಡ್ವಿಧರೂಪುಪದಾರ್ಥಂಗಳನ್ನು ಶಿವಲಿಂಗದೊ
ಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧ ಭಕ್ತಿಸಕೀಲಂಗಳಿಂದ ಸಮ
ರ್ಪಿಸಿ, ಆ ಷಡ್ವಿಧಲಿಂಗಮುಖದಿಂದುಳುಮೆಯಾಗಿಬಂದ ಷಡ್ವಿಧಪ್ರಸಾದ
ವ ಪಡೆದನುಭವಿಸಿ ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ
ರೂಪಿನತೃಪ್ತಿ. ಅಂತಪ್ಪರೂಪಿನ ತೃಪ್ತಿಯೆಂಬ ಪದಾರ್ಥವನ್ನು ಮಹಾ
ಲಿಂಗದೊಳಗಣ ಶಿವಲಿಂಗದಲ್ಲಿ ಎಂದು ತಿಳಿದರ್ಪಿತವ ಮಾಡುವುದು ||೪೨||
ಕಠಿಣವಾದ ಸ್ಪರ್ಶನ, ಮೃದುವಾದಸ್ಪರ್ಶನ, ಉಷ್ಣವಾದ ಸ್ಪರ್ಶನ,
ಶೈತ್ಯವಾದಸ್ಪರ್ಶನ, ಮಿಶ್ರವಾದ ಸ್ಪರ್ಶನ, ಈ ಷಡ್ವಿಧ ಸ್ಪರ್ಶನಪದಾ
ರ್ಥಂಗಳನ್ನು ಜಂಗಮಲಿಂಗದೊಡನೆ ಕೂಡಿದ ಷಡ್ವಿಧ ಲಿಂಗಂಗಳಿಗೆ
ಷಡ್ವಿಧಭಕ್ತಿ ಸಕೀಲಂಗಳಿಂದ ಸಮರ್ಪಿಸಿ, ಆ ಷಡ್ವಿಧ ಲಿಂಗಮುಖದಿಂ

ದುಳುಮೆಯಾಗಿ ಬಂದ ಷಡ್ವಿಧ ಪ್ರಸಾದವ ಪಡೆದನುಭವಿಸಿ ದಣ್ಣನೆ ದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಸ್ಪರ್ಶನದ ತೃಪ್ತಿ. ಅಂತಪ್ಪ ಸ್ಪರ್ಶನದ ತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಜಂಗಮಲಿಂಗದೊಳಗೆಂದು ತಿಳಿದರ್ಪಿತವಮಾಡುವುದು ||೫೩|| ತಾಳ ಕಾಸಾಳವಿಡಿದು ಹುಟ್ಟಿದಶಬ್ದ, ತಂತಿವಿಡಿದುಹುಟ್ಟಿದಶಬ್ದ, ಕುಡುಹು ವಿಡಿದುಹುಟ್ಟಿದಶಬ್ದ, ಕೊಳಲು, ವಾಸುಗಿ, ನಾಗಸರ, ಶಂಖದೊಳಗಾಗಿ ಹುಟ್ಟಿದಶಬ್ದ, ವಚನಗೀತಂಗಳೊಳಗಾಗಿ ಹುಟ್ಟಿದಶಬ್ದವೆಂಬ ಷಡ್ವಿಧ ಶಬ್ದಪದಾರ್ಥಂಗಳನ್ನು ಪ್ರಸಾದಲಿಂಗದೊಡನೆ ಕೂಡಿದ ಷಡ್ವಿಧಲಿಂಗಂಗಳಿಗೆ ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿ, ಆ ಷಡ್ವಿಧಲಿಂಗ ಮುಖದಿಂದುಳುಮೆಯಾಗಿಬಂದ ಷಡ್ವಿಧಪ್ರಸಾದವ ಪಡೆದನುಭವಿಸಿ, ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಶಬ್ದದತೃಪ್ತಿ. ಅಂತಪ್ಪ ಶಬ್ದದತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಪ್ರಸಾದಲಿಂಗದೊಳಗೆಂದು ತಿಳಿದರ್ಪಿತವಮಾಡುವುದು. ಇವೆಲ್ಲರಲ್ಲಿಯು ತೃಪ್ತಿಯಂ ಹಿಂದೆಹೇಳಿದ ಗಂಧತೃಪ್ತಿ, ರಸದತೃಪ್ತಿ, ರೂಪಿನತೃಪ್ತಿ, ಸ್ಪರ್ಶನದತೃಪ್ತಿ, ಶಬ್ದದತೃಪ್ತಿಯೆಂಬ ಪಂಚವಿಧತೃಪ್ತಿಪದಾರ್ಥಂಗಳನ್ನು ಮಹಾಲಿಂಗದೊಡನೆ ಕೂಡಿದ ಪಂಚವಿಧಲಿಂಗಂಗಳಿಗೆ ಪಂಚವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿ, ಅಂತಪ್ಪ ಪಂಚವಿಧಲಿಂಗಮುಖದಿಂದುಳುಮೆಯಾಗಿಬಂದ ಪಂಚವಿಧಪ್ರಸಾದವ ಪಡೆದನುಭವಿಸಿ, ದಣ್ಣನೆದಣಿದು ಮನಸ್ಸೆಲ್ಲಾ ಹಿಂದಿರಿಗಿದಂತಾದ್ದೇ ಇವೆಲ್ಲರಲ್ಲಿಯು ಅವಿರಳಭಾವದ ಅಖಂಡತೃಪ್ತಿ. ಅವಿರಳಭಾವದ ಅಖಂಡತೃಪ್ತಿಯೆಂಬ ಪದಾರ್ಥವನ್ನು ಮಹಾಲಿಂಗದೊಳಗಣ ಮಹಾಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತು ಟಲೆ ಸ್ವಾಮಿಯೆಂದು ಬೆಸಗೊಂಡೊಡೆ—ಆತ್ಮತತ್ವದೊಳಗಣ ಮೂಲಾತ್ಮತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸದ್ಭಾವಹಸ್ತದೊಳಗಣ ಸದ್ಭಾವಹಸ್ತದಿಂ ಪಿಡಿದುಕೊಂಡು ಚಿಚ್ಛಕ್ತಿಯೊಳಗಣ ಚಿಚ್ಛಕ್ತಿಯುಕ್ತಮಾಗಿ, ಸಮರಸಭಕ್ತಿಯೊಳಗಣ ಸಮರಸಭಕ್ತಿಯಿಂದೇ ಮಹಾಲಿಂಗದೊಳಗಣ ಮಹಾಲಿಂಕ್ಕೆಂದರಿದಾರೋಪಿಸಿ ಓಂಕಾರಮಂತ್ರದೊಳಗಣ ಓಂಕಾರಮಂತ್ರಸ್ಮರಣೆಯೊಡನೆ ಕೂಡಿ, ಹೃದಯೇಂದ್ರಿಯದೊಳಗಣ ಹೃದಯೇಂದ್ರಿಯಮುಖದಲ್ಲಿಯೇ ಸಮರ್ಪಿಸಿ,

ಆಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನೇತಿಪ್ರಸಾದವ ಪಡೆದನುಭವಿಸಿ ಪರಮಪರಿಣಾಮಿಯಾಗಿರುತ್ತಿಹಸು ಐಕ್ಯನೊಳಗಣ ಶಿವೈಕ್ಯನು. ಈಪ್ರಕಾರವಾಗಿ ಹೇಳಲ್ಪಟ್ಟಂತ ಇದುತಾನೇ ಮಹಾಲಿಂಗೈಕ್ಯಂಗೆ ಚಿತ್ಪ್ರಾಣವಾದ ಮಹಾಲಿಂಗವು ತಾನೊಂದೇ ಷಡ್ವಿಧಲಿಂಗವಾಗಿ ಷಡ್ವಿಧತೃಪ್ತಿಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಬ ವಿಚಾರವು ||೪೪|| ಈ ಛತ್ತೀಶಕರಣ ಈ ಮನೋಸಂಬಂಧವಾದ ಮೂವ್ವತ್ತಾರುರುಚಿಪದಾರ್ಥಂಗಳು ಪ್ರಾಣಲಿಂಗದೊಡನೆ ಕೂಡಿದ ಮೂವ್ವತ್ತಾರುಲಿಂಗಂಗಳಿಗೆ ಮೂವ್ವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿತವಾದಬಳಿಕ, ಆ ಕರ್ಣಾರ್ಪಣದ ಮಧ್ಯದಲ್ಲಿ ಭಾವಾರ್ಪಣವುಂಟು, ಆತ್ಮತತ್ವಸಂಬಂಧವಾದ ಇನ್ನೂರಹದಿನಾರುತೆರದ ತೃಪ್ತಿಪದಾರ್ಥಂಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರಹದಿನಾರುಲಿಂಗಂಗಳಿಗೆ ಇನ್ನೂರುಹದಿನಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿತವಾಗುವ ಭಾವಾರ್ಪಣಮಿಶ್ರವು ಇರುವದು. ಆ ವಿಚಾರವು ಹ್ಯಾಂಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ—ಮಿಶ್ರದೊಳಗಣ ಮಿಶ್ರಮಂ ಕಾಯಾರ್ಪಣದೊಳಗಣ ಮಿಶ್ರವೇ ಕರ್ಣಾರ್ಪಣ, ಕರ್ಣಾರ್ಪಣದೊಳಗಣ ಮಿಶ್ರವೇ ಭಾವಾರ್ಪಣವಾದಕಾರಣ ಅಂತಪ್ಪ ಭಾವಾರ್ಪಣದ ಸ್ವರೂಪವನ್ನು ನಿರೂಪಿಸುವೆವು. ಆವುದಾನೊಂದು ಈ ಭೂಭಾಗದಲ್ಲಿರುವ ಪದಾರ್ಥಂಗಳೊಳಗೆ ಯಾವಪದಾರ್ಥವಾದರೂ ಆಗಲಿ ಅದರೊಳಗೊಂದು ಪದಾರ್ಥವು ಷಡಿಂದ್ರಿಯಂಗಳೊಳಗೆ ಆವುದಾನೊಂದಿಂದ್ರಿಯವನ್ನು ಸೋಂಕುವಕಾಲವೇಳೆ ಕಾಲೋಚಿತವೆಂಬ ಪದಾರ್ಥವನ್ನು ಆಚಾರಲಿಂಗದಲ್ಲರಿವುದು. ಪಂಚಾಚಾರಸ್ವರೂಪವಾದ ಆಚಾರಲಿಂಗದೊಳಗೆಂದು ತಿಳಿದರ್ಪಿತವಮಾಡುವುದು ||೪೫|| ತಟ್ಟಿದಂಥಾದ್ದನ್ನು ತಿಳಿವ ಕಾಲೋಚಿತವೆಂಬ ಪದಾರ್ಥವನ್ನು ಮಂತ್ರಮೂರ್ತಿಯಾದ ಗುರುಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು ||೪೬|| ತಿಳಿದು ನಿಶ್ಚೈಸುವ ಈ ಪದಾರ್ಥವಹುದು ಎಂದು ದೃಢೀಕರಿಸುವ ಕಾಲೋಚಿತವೆಂಬ ಪದಾರ್ಥವನ್ನು ನಿರೀಕ್ಷಣಸ್ವರೂಪವಾದ ಶಿವಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು ||೪೭|| ನಿಶ್ಚೈಸಿ-ಇದು ಇಂಥಾಪದಾರ್ಥವಹುದೆಂದು ದೃಢೀಕರಿಸಿ ಅದನಂಗೀಕರಿಸಿಕೊಂಡು ಅನುಭವಿಸುವ ಕಾಲೋಚಿತವೆಂಬ ಪದಾರ್ಥವನ್ನು ಯಜನಸ್ವರೂಪವಾದ ಚರಲಿಂಗದಲ್ಲಿಯೆಂದು ತಿಳಿದರ್ಪಿತವ

ಮಾಡುವುದು ॥೪೮॥ ಅದನಂಗೀಕರಿಸಿಕೊಂಡನುಭವಿಸಿ ಆನಂದಿಸುವ ಕಾಲವೇಳೆ ಕಾಲೋಚಿತವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲರಿವುದು. ಈಳನಸ್ವರೂಪವಾದ ಪ್ರಸಾದಲಿಂಗದಲ್ಲಿಯೆಂದು ತಿಳಿದರ್ಪಿತವ ಮಾಡುವುದು ॥೪೯॥ ಆನಂದಿಸಿ-ತೃಪ್ತಿಯನೈದುವ ನಿಜಾನಂದಸಂತೋಷವನ್ನು ತಾಳುವ ಕಾಲೋಚಿತವೆಂಬ ಪದಾರ್ಥವನ್ನು ಮಹಾಲಿಂಗದಲ್ಲಿ ಬೋಧಾಸ್ವರೂಪವಾದ ಮಹಾಲಿಂಗದಲ್ಲಿಯೆಂದು ತಿಳಿದರ್ಪಿತವಮಾಡುವುದು ಎಂಬುದು ಅರ್ಥ ॥ ೬೦ ॥ ಮತ್ತಂತುಮಲ್ಲದೆ ಈ ಮುವ್ವತ್ತಾರುತೆರದ ರುಚಿಪದಾರ್ಥಂಗಳೊಳಗೆ ಯಾವುದಾನೊಂದು ಬೇರುಗೆಣಸು ಮೊದಲಾದ ಗಂಧವೆಂಬಪದಾರ್ಥವು ಇಂದ್ರಿಯಂಗಳ ಷಡಿಂದ್ರಿಯಂಗಳೊಳಗೆ ಆವುದಾನೊಂದು ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯದಲ್ಲಿಯ ಘ್ರಾಣೇಂದ್ರಿಯವನ್ನು ಸೋಂಕುವ ಕಾಲೋಚಿತವೆಂಬ ಪದಾರ್ಥವನ್ನು ಆಚಾರಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಆಚಾರಲಿಂಗಕ್ಕೆಂದು ತಿಳಿದರ್ಪಿತವ ಮಾಡುವುದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರ ಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಅದು ಪೃಥ್ವೀತತ್ವದೊಳಗಣ ಪೃಥ್ವೀತತ್ವದಲ್ಲಿಯ ಪೃಥ್ವೀತತ್ವಸಂಬಂಧವಾದ ಪದಾರ್ಥವೆಂದರಿದು, ಆ ಪದಾರ್ಥವನ್ನು ಸುಚಿತ್ತಹಸ್ತದೊಳಗಣ ಸುಚಿತ್ತಹಸ್ತದಲ್ಲಿಯ ಸುಚಿತ್ತಹಸ್ತದಿಂ ಪಿಡಿದುಕೊಂಡು, ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯಲ್ಲಿಯ ಕ್ರಿಯಾಶಕ್ತಿಯುಕ್ತವಾಗಿ ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿಯಲ್ಲಿಯ ಶ್ರದ್ಧಾಭಕ್ತಿಯಿಂದ ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಆಚಾರಲಿಂಗಕ್ಕೆಂದರಿದಾರೋಪಿಸಿ, ನಕಾರಮಂತ್ರದೊಳಗಣ ನಕಾರಮಂತ್ರದಲ್ಲಿಯ ನಕಾರಮಂತ್ರಸ್ಮರಣೆಯೊಡನೆ ಕೂಡಿ ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯದಲ್ಲಿಯ ಘ್ರಾಣೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆಲಿಂಗಮುಖದಿಂದುಳುಮೆಯಾಗಿಬಂದ ಪ್ರಸನ್ನತಿಪ್ರಸಾದವ ಪಡೆದನುಭವಿಸಿ ಪರಿಣಾಮಿಯಾಗಿರುತ್ತಿಹನು ಭಕ್ತನೊಳಗಣ ಭಕ್ತನಲ್ಲಿಯಸದ್ಭಕ್ತನು ॥೬೧॥ ತಟ್ಟಿದೆಂಥಾದ್ದನ್ನು ತಿಳಿವ ಕಾಲೋಚಿತವೆಂಬ ಪದಾರ್ಥವನ್ನು ಗುರುಲಿಂಗದಲ್ಲರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಗುರುಲಿಂಗದೊಳಗೆಂದು ತಿಳಿದರ್ಪಿತವಮಾಡುವುದು ॥೬೨॥ ಅರಿದು-ನಿಶ್ಚೈಸುವ ಇದು ಬೇ

ರುಗೆಣಸು ಮೊದಲಾದ ಗಂಧವೆಂಬ ಪದಾರ್ಥವಹುದೆಂದು ದೃಢೀಕರಿಸುವ ಕಾಲೋಚಿತವೆಂಬ ಪದಾರ್ಥವನ್ನು ಶಿವಲಿಂಗದಲ್ಲಿರಿವುದು, ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಶಿವಲಿಂಗದೊಳಗೆಂದು ತಿಳಿದರ್ಪಿತವಮಾಡುವುದು ||೬೩|| ನಿಶ್ಚೈಸಿ-ಇದು ಬೇರುಗೆಣಸು ಮೊದಲಾದ ಗಂಧವೆಂಬ ಪದಾರ್ಥವದೆಂದು ದೃಢೀಕರಿಸಿ ಸುಖಿಸುವ ಅದನಂಗೀಕರಿಸಿಕೊಂಡನುಭವಿಸುವ ಕಾಲೋಚಿತವೆಂಬ ಪದಾರ್ಥವನ್ನು ಜಂಗಮಲಿಂಗದಲ್ಲಿರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಜಂಗಮಲಿಂಗಕ್ಕೆಂದು ತಿಳಿದರ್ಪಿತವಮಾಡುವುದು ||೬೪|| ಸುಖಿಸಿ-ಅದನಂಗೀಕರಿಸಿಕೊಂಡನುಭವಿಸಿ ಆನಂದಿಸುವ ಕಾಲೋಚಿತವೆಂಬ ಪದಾರ್ಥವನ್ನು ಪ್ರಸಾದಲಿಂಗದಲ್ಲಿರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಪ್ರಸಾದಲಿಂಗಕ್ಕೆಂದು ತಿಳಿದರ್ಪಿತವಮಾಡುವುದು ||೬೫|| ಆನಂದಿಸಿ-ತೃಪ್ತಿಯನ್ನೈದುವ ನಿಜಾನಂದಸಂತೋಷವನ್ನು ತಾಳುವ ಕಾಲೋಚಿತವೆಂಬ ಪದಾರ್ಥವನ್ನು ಮಹಾಲಿಂಗದಲ್ಲಿ ಅರಿವುದು. ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಮಹಾಲಿಂಗಕ್ಕೆಂದು ತಿಳಿದರ್ಪಿತವಮಾಡುವುದು. ಅದುಹ್ಯಾಂಗೆ ಸಮರ್ಪಣೆಯಮಾಡಬೇಕು, ಅದರಸಕೀಲವೆಂತುಂಟೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಅದು ಪೃಥ್ವೀತತ್ವದೊಳಗಣ ಪೃಥ್ವೀತತ್ವದಲ್ಲಿಯ ಆತ್ಮತತ್ವಸಂಬಂಧವಾದ ಪದಾರ್ಥವೆಂದರಿದು ಆ ಪದಾರ್ಥವನ್ನು ಸುಚಿತ್ತಹಸ್ತದೊಳಗಣ ಸುಚಿತ್ತಹಸ್ತದಲ್ಲಿಯ ಸದ್ಭಾವ ಹಸ್ತದಿಂ ಪಿಡಿದುಕೊಂಡು ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯಲ್ಲಿಯ ಚಿಚ್ಛಕ್ತಿಯುಕ್ತವಾಗಿ ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿಯಲ್ಲಿಯ ಸಮರಸಭಕ್ತಿಯಿಂದ ಆಚಾರಲಿಂಗದೊಳಗಣ ಆಚಾರಲಿಂಗದಲ್ಲಿಯ ಮಹಾಲಿಂಗಕ್ಕೆಂದರಿದಾರೋಪಿಸಿ ನಕಾರಮಂತ್ರದೊಳಗಣ ನಕಾರಮಂತ್ರದಲ್ಲಿಯ ಓಂಕಾರಮಂತ್ರಸ್ಮರಣೆಯೊಡನೆಕೂಡಿ ಘ್ರಾಣೇಂದ್ರಿಯದೊಳಗಣ ಘ್ರಾಣೇಂದ್ರಿಯದಲ್ಲಿಯ ಹೃದಯೇಂದ್ರಿಯ ಮುಖದಲ್ಲಿಯೇ ಸಮರ್ಪಿಸಿ, ಆ ಲಿಂಗಮುಖದಿಂದುಳುಮೆಯಾಗಿ ಬಂದ ಪ್ರಸನ್ನೇತಿಪ್ರಸಾದವಪಡೆದನುಭವಿಸಿ ಪರಮಪರಿಣಾಮಿಯಾಗಿರುತಿಹನು ಭಕ್ತನೊಳಗಣ ಭಕ್ತನಲ್ಲಿಯ ಶಿವೈಕ್ಯನೆಂಬುದರ್ಥ ||೬೬|| ಹೀಂಗೆ ಬೇರುಗೆಣಸು ಮೊದಲಾದ ಗಂಧವೆಂಬ ಪದಾರ್ಥವು ತಾನೊಂದೇ ಸೋಂಕುವ ಸೋಂಕಿದುದನರಿವ, ಅರಿದುನಿಶ್ಚೈಸುವ, ನಿಶ್ಚೈಸಿಸುಖಿಸುವ, ಸುಖಿಸಿಪರಿಣಮಿಸುವ, ಪರಿಣಮಿ

ಸಿ ತೃಪ್ತಿಯನ್ನೈದುವ ಎಂದಾರಾಧಿಸಿ, ಆಚಾರಲಿಂಗದೊಳಗಣ ಆಚಾರ ಲಿಂಗವು ತಾನೊಂದೇಮಿಶ್ರಿಸಿ- ಷಡ್ವಿಧಲಿಂಗವಾಗಿ ಆ ಷಡ್ವಿಧತೃಪ್ತಿ ಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡಲ್ಲಿ ಆಚಾರಲಿಂಗದೊಳಗಣ ಆಚಾರಲಿಂಗದಮಿಶ್ರವು ನಾಲ್ವತ್ತೆಂಟುತೆರನಾಯಿತು. ಹೀಗೆ ಆಚಾರಲಿಂಗದೊಳಗಣ ಗುರುಲಿಂಗ ಮಿಶ್ರವು ನಾಲ್ವತ್ತೆಂಟುತೆರ, ಆಚಾರಲಿಂಗದೊಳಗಣ ಶಿವಲಿಂಗಮಿಶ್ರವು ನಾಲ್ವತ್ತೆಂಟುತೆರ, ಆಚಾರಲಿಂಗದೊಳಗಣ ಜಂಗಮಲಿಂಗಮಿಶ್ರವು ನಾಲ್ವತ್ತೆಂಟುತೆರ, ಆಚಾರಲಿಂಗದೊಳಗಣ ಪ್ರಸಾದಲಿಂಗಮಿಶ್ರವು ನಾಲ್ವತ್ತೆಂಟುತೆರ, ಆಚಾರಲಿಂಗದೊಳಗಣ ಮಹಾಲಿಂಗಮಿಶ್ರವು ನಾಲ್ವತ್ತೆಂಟುತೆರ, ಅಂತು ಇನ್ನೂರೆಂಭತ್ತೆಂಟುತೆರನಾಯಿತು. ಹೀಗೊಂದಾಚಾರಲಿಂಗ ಮಿಶ್ರಾರ್ಪಣವು ಇದೇರೀತಿಯಲ್ಲಿ ಗುರುಲಿಂಗ ಮಿಶ್ರಾರ್ಪಣವು ಇನ್ನೂರೆಂಭತ್ತೆಂಟುತೆರ, ಶಿವಲಿಂಗ ಮಿಶ್ರಾರ್ಪಣವು ಇನ್ನೂರೆಂಭತ್ತೆಂಟುತೆರ, ಜಂಗಮಲಿಂಗ ಮಿಶ್ರಾರ್ಪಣವು ಇನ್ನೂರೆಂಭತ್ತೆಂಟುತೆರ, ಪ್ರಸಾದಲಿಂಗ ಮಿಶ್ರಾರ್ಪಣವು ಇನ್ನೂರೆಂಭತ್ತೆಂಟುತೆರ, ಮಹಾಲಿಂಗಮಿಶ್ರಾರ್ಪಣವು ಇನ್ನೂರೆಂಭತ್ತೆಂಟುತೆರ, ಅಂತು ಸಾವಿರದೇಳ್ನೂರಿಪ್ಪತ್ತೆಂಟುತೆರನಾಯಿತು. ಒಂದು ಭಾವಾರ್ಪಣಮಿಶ್ರವು ಪರಿಣಮಿಸಿ ತೃಪ್ತಿಯನ್ನೈದುವ ಕಾಲ ವೇಳೆ ಮಹಾಲಿಂಗದಲ್ಲಿ ಎಂಬಶಬ್ದಕರ್ಥ ॥೬೭॥ ಈಪ್ರಕಾರದಿಂದ ಹೇಳಲ್ಪಟ್ಟ ಪ್ರಥಮದಲ್ಲಿ ನಿರೂಪಣವಮಾಲಿಸಿದ ಕಾಯಾರ್ಪಣವು, ದ್ವಿತೀಯದಲ್ಲಿ ನಿರೂಪಣವಮಾಲಿಸಿದ ಕರಣಾರ್ಪಣವು, ತೃತೀಯದಲ್ಲಿ ನಿರೂಪಣವಮಾಲಿಸಿದ ಭಾವಾರ್ಪಣವೆಂಬ ತ್ರಿವಿಧಾರ್ಪಣಂಗಳಲ್ಲಿ ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರು ಲಿಂಗಂಗಳು ಅಂಗಸಂಬಂಧವಾದ ಷಡ್ವಿಧಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ, ಒಂದೊಂದಾರಾಗಿ ವಿಶಾಲತರವನ್ನೈದಿ, ಮೂವ್ವತ್ತಾರು ಲಿಂಗಂಗಳಾಗಿ, ಆ ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರುಲಿಂಗಂಗಳು ಅಂಗಸಂಬಂಧವಾದ ರೂಪು ಷಡ್ವಿಧಪದಾರ್ಥಂಗಳನ್ನು ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ, ಒಂದೊಂದಾರಾಗಿ ವಿಶಾಲತರವನ್ನೈದಿ ಮೂವ್ವತ್ತಾರುಲಿಂಗಂಗಳಾದಾ ಇಷ್ಟಲಿಂಗದೊಡನೆಕೂಡಿದ ಆಚಾರಾದಿ ಮಹಾಲಿಂಗಾಂತ್ಯವಾದ ಆರುಲಿಂಗಗಳು ಅಂಗಸಂಬಂಧವಾದರೂಪು, ಷಡ್ವಿಧಪದಾರ್ಥಂಗಳನ್ನು

ಷಡ್ವಿಧಭಕ್ತಿ ಸಕೀಲಂಗಳಿಂದೆ ಸಮರ್ಪಿಸಿಕೊಂಡು; ಒಂದೊಂದಾರಾಗಿ ವಿಶಾಲತರವನ್ನೈದಿ, ಇನ್ನೂರಹದಿನಾರು ಲಿಂಗಗಳಾಗಿ ಛತ್ತೀಶಲಿಂಗ, ಪ್ರಾಣಲಿಂಗದೊಡನೆಕೂಡಿದ ಮುವ್ವತ್ತಾರುಲಿಂಗಗಳು ಮನೋಸಂಬಂಧವಾದ ಮುವ್ವೆತ್ತಾಱು ರುಚಿಪದಾರ್ಥಂಗಳನ್ನು ಮುವ್ವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ, ಒಂದೊಂದಾರಾಗಿ ವಿಶಾಲತರವನ್ನೈದಿ, ಇನ್ನೂರಹದಿನಾರು ಲಿಂಗಂಗಳಾಗಿ. ಆ ಛತ್ತೀಶಲಿಂಗ, ಪ್ರಾಣಲಿಂಗದೊಡನೆಕೂಡಿದ ಮುವ್ವೆತ್ತಾರು ಲಿಂಗಂಗಳು ಮನೋಸಂಬಂಧವಾದ ಮುವ್ವತ್ತಾರು ರುಚಿಪದಾರ್ಥಂಗಳನ್ನು ಆ ಅರ್ಪಣದೊಳಗೆ ಮುವ್ವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಒಂದೊಂದಾರಾಗಿ ವಿಶಾಲತರವನ್ನೈದಿ ಇನ್ನೂರಹದಿನಾರು ಲಿಂಗಂಗಳಾದವು. ಹದಿನಾರೇ ಮೇಲಾಗಿ, ಇನ್ನೂರೇ ಆದಿಯಾದಲಿಂಗ ಭಾವಲಿಂಗದೊಡನೆ ಕೂಡಿದ ಇನ್ನೂರಹದಿನಾರು ಲಿಂಗಂಗಳು ಆತ್ಮಸಂಬಂಧವಾದ ಇನ್ನೂರಹದಿನಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಪಸರಿಸಿ, ಒಂದೊಂದಾರಾಗಿ ವಿಶಾಲತರವನ್ನೈದಿ, ಪರಿಪೂರ್ಣವಾಗಿ ಪರಿಪೂರ್ಣಾಂಗ ಪರಿಪೂರ್ಣಲಿಂಗಸ್ವರೂಪವೆನ್ನುತಾಳಿ, ಆ ಪರಿಪೂರ್ಣಾಂಗ ಪರಿಪೂರ್ಣಲಿಂಗದಾಚರಣೆಯೆಂಬುದು ತಾನು ಪಿಂಡಾಂಡದಲ್ಲಿ ಪಿಂಡ ಬ್ರಹ್ಮಾಂಡವೆಂಬೆರಡರೊಳಗೆಲ್ಲಾಗಳು ಸನ್ನಿಹಿತವಾಗಿಪ್ಪುದು ಕೂಟಸ್ಥವಾಗಿರುವುದು. ಪರಿಪೂರ್ಣಾಂಗ ಪರಿಪೂರ್ಣಲಿಂಗದಾಚರಣೆಯೆಂಬುದು ತಾನು ಸರ್ವರಿಗೆ ವೇದ್ಯವಾದೀತೆ ಎಂಬಲ್ಲಿ ಕ್ರಿಯಾಬಾಹ್ಯರಾದ ವೇದಾಂತಿಗಳಿಗೆ, ಜ್ಞಾನಬಾಹ್ಯರಾದ ಸಿದ್ಧಾಂತಿಗಳಿಗೆ, ಜ್ಞಾನಕ್ರಿಯಾಬಾಹ್ಯರಾದ ಯೋಗಾಭ್ಯಾಸಿಗಳಿಗೆ ವೇದ್ಯವಾಗದು. ಅವರಿಗೇನುಕಾರಣ ಸಾಧ್ಯವಾಗದು, ನಮಗೇನುಕಾರಣ ಸಾಧ್ಯವಾಗುವುದಲೆಸ್ವಾಮಿಯೆಂದು ಬೆಸಗೊಂಡೊಡೆ, ಎಲೋ ಹುಚ್ಚ, ಹಾಲೆಲ್ಲಾ ಬೆಳ್ಳಗಿದ್ದರೇನಾಯಿತು, ಅದರೊಳಗೂ ನೀರುಬೆರದಹಾಲೇ ಮಧುರರಹಿತವಾಗಿರುತ್ತಿಹುದು, ನೀರುಬೆರೆಯದ ಸ್ವಚ್ಛವಾದಹಾಲೇ ಮಧುರಗೂಡಿರುತ್ತಿಹುದೆಂಬಹಾಗೆ ಅವರಿಗೆ ಷಟ್ಕರಣಂಗಳ ವರ್ತನೆ ನಷ್ಟವಾಗದಕಾರಣ ಸಾಧ್ಯವಾಗದು. ನಮಗೆ ಷಟ್ಕರಣಂಗಳ ವರ್ತನೆ ನಷ್ಟವಾದಕಾರಣ ಸಾಧ್ಯವಾಗುವುದು ಯೆಂಬುದೀಗ ಹೊನ್ನು, ಹೆಣ್ಣು, ಮಣ್ಣು, ಸಕಲಕರಣ ಸತಿಸುತಾದಿಗಳ ಮೇಲಣವ್ಯಾಮೋಹದೊಡನೆ ಕೂಡಿಚರಿಸುವುದೆ ಕುಚಿತ್ತ. ಆ ಹೊನ್ನು ಹೆ

ಣ್ಣು ಮಣ್ಣೆಂಬ ತ್ರಿವಿಧ ಪದಾರ್ಥಂಗಳನ್ನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ, ಆ ಸಕಲಕರಣಂಗಳಳಿದು ಲಿಂಗಕರಣಂಗಳಾಗಿ ಸತಿಸುತಾದಿಗಳ ಮೇಲಣ ವ್ಯಾಮೋಹವಳಿದು ನಿರ್ಮೋಹಿಯಾಗಿರುವುದೇ ಸುಚಿತ್ತ. ಅಂತಪ್ಪ ಸುಚಿತ್ತವೆಂಬ ಕರಕಮಲವು ತನ್ನಲ್ಲಿ ಸ್ಥಿರಕರವಾಗಿಂಬುಗೊಂಡಾಗ ಸುಚಿತ್ತವೆಂಬ ಕರಕಮಲಕ್ಕೆ ಆಚಾರಲಿಂಗ ಪಂಚಾಚಾರಸ್ವರೂಪವಾದ ಆಚಾರಬ್ರಹ್ಮವು ಘ್ರಾಣೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿಬರುವ ಸುಗಂಧಪದಾರ್ಥವನರ್ಪಿಸಿಕೊಂಡು, ಶರಣಂಗೆ ತನ್ನ ಸುಗಂಧಪದಾರ್ಥವ ಕರುಣಿಸಿಕೊಡುತ್ತಿಹುದು. ಅದರಿಂದ ಹೊರತಾಗಿ ಆ ಕುಚಿತ್ತವೆಂಬ ಕರಕಮಲಕ್ಕೆ ಪಂಚಾಚಾರಸ್ವರೂಪವಾದಾಚಾರಬ್ರಹ್ಮವು ಸಾಧ್ಯವಾಗದು. ಪಂಚಾಚಾರಸ್ವರೂಪವಾದಾಚಾರಲಿಂಗವು ಘ್ರಾಣೇಂದ್ರಿಯದಲ್ಲಿ ನೆಲೆಗೊಳ್ಳದು. ಆ ಘ್ರಾಣೇಂದ್ರಿಯದಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿಬರುವ ಸುಗಂಧಪ್ರಸಾದವರ್ಪಿತವಾಗದು, ಆ ಸುಗಂಧಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ, ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆಯಿಲ್ಲ, ಆ ಪ್ರಸಾದ ಸೇವನೆಯಿಲ್ಲದಿದ್ದಲ್ಲಿ ಮುಕ್ತಿಮೆಂನ್ನವೇ ಇಲ್ಲದೆಹೋಗುತ್ತಿಹುದು ||೬೪||ಪರಧನ, ಪರಸತಿ, ಪರದೈವ, ಪರನಿಂದೆ, ಪರಹಿಂಸೆಯೆಂಬ ಪಂಚಮಹಾಪಾತಕಂಗಳೊಡನೆಕೂಡಿ ಚರಿಸುವುದೇ ಕುಬುದ್ಧಿ. ಅಂತಪ್ಪ ಕುಬುದ್ಧಿಯೆಂಬ ಕರಕಮಲವು ಕೆಟ್ಟು, ಅಷ್ಟಾವರಣಂಗವಮಾಡಿಕೊಂಡು ಪಂಚಾಚಾರವನ್ನೇ ಪ್ರಾಣವಮಾಡಿಕೊಂಡು ಏಕಲಿಂಗನಿಷ್ಠಾಪರನಾಗಿ ಆಚರಿಸುವದೇ ಸುಬುದ್ಧಿ, ಅಂತಪ್ಪ ಸುಬುದ್ಧಿಯೆಂಬಕರಕಮಲವು ತನ್ನಲ್ಲಿ ಸ್ಥಿರಕರವಾಗಿಂಬುಕೊಂಡಾಗ ಆ ಸುಬುದ್ಧಿಯೆಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವು ಸಂಬಂಧವಾಗಿ, ಜಿಹ್ವೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿ ಬರುವ ಸುರಸಪದಾರ್ಥವ ಸಮರ್ಪಿಸಿಕೊಂಡು ಶರಣಂಗೆ ತನ್ನ ಸುರಸ ಪ್ರಸಾದವ ಕರುಣಿಸಿಕೊಡುತ್ತಿಹುದು. ಅದರಿಂದ ಹೊರತಾಗಿ ಆ ಕುಬುದ್ಧಿಯೆಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವು ಸಂಬಂಧವಾಗಲೊಲ್ಲದು. ಆ ಗುರುಲಿಂಗವು ಸಂಬಂಧವಾಗಲೊಲ್ಲದಿದ್ದಲ್ಲಿ ಜಿಹ್ವೇಂದ್ರಿಯದಲ್ಲಿ ನೆಲೆಗೊಳ್ಳದು, ಆ ಜಿಹ್ವೇಂದ್ರಿಯದಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿ ಬರುವ ಸುರಸಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ, ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದ ಸೇವನೆಯಿಲ್ಲ, ಆ ಪ್ರಸಾ

ಪಸೇವನೆ ಇಲ್ಲದಿದ್ದಲ್ಲಿ ಮುಕ್ತಿಮುನ್ನವೇ ಇಲ್ಲದೆ ಹೋಗುತ್ತಿಹುದು॥೧೯॥ ತನುತ್ರಯಸಂಬಂಧವಾದ ರೂಪುರುಚಿತೃಪ್ತಿಗಳನ್ನು ಲಿಂಗಾರ್ಪಿತವಿಹೀನವಾಗಿ ಜೀವಭಾವದಿಂದ ಭುಂಜಿಸಿ ದೇಹೋಹಮೆಂದುಲಿವುದೇ ಅಹಂಕಾರ. ಅಂತಪ್ಪ ಅಹಂಕಾರವೆಂಬ ಕರಕಮಲವು ನಷ್ಟವಾಗಿಹೋಗಿ ಆ ತನುತ್ರಯ ಸಂಬಂಧವಾದ ರೂಪುರುಚಿತೃಪ್ತಿಗಳನ್ನು ಇಷ್ಟಪ್ರಾಣ ಭಾವಲಿಂಗಂಗಳಿಗೆ ಸಮರ್ಪಿಸಿ ಆ ಇಷ್ಟಪ್ರಾಣಭಾವಲಿಂಗಮುಖದಿಂದುಳುಮೆಯಾಗಿಬಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವಪಡೆದನುಭವಿಸಿ ನಿರಹಂಭಾವಿಯಾಗಿರುವದೇ ನಿರಹಂಕಾರ. ಅಂತಪ್ಪ ನಿರಹಂಕಾರವೆಂಬ ಕರಕಮಲವು ನೆಲೆಗೊಂಡಲ್ಲಿ ತನ್ನಲ್ಲಿ ಸ್ಥಿರಕರವಾಗಿಂಬುಗೊಂಡಾಗ ಆ ನಿರಹಂಕಾರವೆಂಬ ಕರಕಮಲಕ್ಕೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗಪ್ರಸಂಬಂಧವಾಗಿ ನೇತ್ರೇಂದ್ರಿಯದಲ್ಲಿ ನೆಲೆಗೊಂಡು ಅಲ್ಲಿಬರುವ ಸುರೂಪು ಪದಾರ್ಥವನರ್ಪಿಸಿಕೊಂಡು ಶರಣಂಗೆ ತನ್ನ ಸುರೂಪು ಪ್ರಸಾದವಕರುಣಿಸಿಕೊಡುತ್ತಿಹುದು. ಅದಲ್ಲದೆ ಆ ಅಹಂಕಾರವೆಂಬ ಕರಕಮಲಕ್ಕೆ ಪರಮಪ್ರಕಾಶಸ್ವರೂಪವಾದ ಶಿವಲಿಂಗವು ಸಾಧ್ಯವಾಗದು. ನೇತ್ರೇಂದ್ರಿಯದಲ್ಲಿ ನೆಲೆಗೊಳ್ಳದು, ಆ ನೇತ್ರೇಂದ್ರಿಯದಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿಬರುವ ರೂಪುಪದಾರ್ಥವರ್ಪಿತವಾಗದು. ಆ ರೂಪುಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ, ಆ ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆಯಿಲ್ಲ, ಆ ಪ್ರಸಾದಸೇವನೆಯಿಲ್ಲದಿದ್ದಲ್ಲಿ ಮುಕ್ತಿಮುನ್ನವೇ ಇಲ್ಲದೆ ಹೋಗುತ್ತಿಹುದು ॥೨೦॥ ಹೃದಯಕಮಲದಷ್ಟದಳಾಗ್ರಗತಿಯೊಡನೆಕೂಡಿ ಷಡಾಧಾರಚಕ್ರಸಂಬಂಧವಾದೈವತ್ತುದಳಂಗಳಲ್ಲಿ ದಳಪ್ರಕೃತಿವಿದಿಪು ರೋಹಾರೋಹಂಗಳಿಂದ ಚರಿಸುತ್ತ ಸಂಚಲವ್ಯವಹಾರಿಯಾಗಿರುವದೇ ಕುಮನ. ಅಂತಪ್ಪ ಕುಮನವೆಂಬ ಕರಕಮಲವು ಅಳಿದು ನಷ್ಟವಾಗಿಹೋಗಿ ಸುಮನ ಊರ್ಧ್ವಮುಖವಾಗಿರುವ ಧರ್ಮಜ್ಞಾನವೈರಾಗ್ಯೈಶ್ವರ್ಯವೆಂಬ ಚತುರ್ದಳಕಮಲಸಿಕ್ಕಾಸನದಲ್ಲಿನೆಲೆಗೊಂಡು ಅಚಲಾನಂದಪೂಜೆಯಕೈಕೊಂಡೊಪ್ಪುವ ಪರಮಾತ್ಮಲಿಂಗದಲ್ಲಿ ತನ್ನಮನಸ್ಸನ್ನು ಸ್ವಸ್ಥಿರವಮಾಡಿಕೊಂಡಿರುವದೇ ಸುಮನ. ಅಂತಪ್ಪ ಸುಮನವೆಂಬ ಕರಕಮಲವು ನೆಲೆಗೊಂಡಲ್ಲಿ ತನ್ನಲ್ಲಿ ಸ್ಥಿರಕರವಾಗಿಂಬುಕೊಂಡಾಗ ಆ ಸುಮನವೆಂಬ ಕರಕಮಲಕ್ಕೆ ಯಜನಸ್ವರೂಪವಾದ ಚರಲಿಂಗವು ಸಂಬಂಧವಾಗಿ ತ್ವಗಿಂದ್ರಿಯದಲ್ಲಿ ನೆಲೆಗೊಂಡು ಅಲ್ಲಿಬರುವ ಸುಪರು

ಷಣವೆಂಬ ಪದಾರ್ಥವನರ್ಪಿಸಿಕೊಂಡು, ಶರಣಂಗೆ ತನ್ನ ಸುಸ್ಪರ್ಶನ ಪ್ರಸಾದವ ಕರುಣಿಸಿಕೊಡುತ್ತಿಹುದು. ಹಾಂಗಲ್ಲದ ಪಕ್ಷದಲ್ಲಿ ಆ ಕು ಮನವೆಂಬ ಕರಕಮಲಕ್ಕೆ ಯಜನಸ್ವರೂಪವಾದ ಚರಲಿಂಗವು ಸಾಧ್ಯ ವಾಗದು. ಆ ಜಂಗಮಲಿಂಗವು ಸಂಬಂಧವಾಗದಿದ್ದಲ್ಲಿ ತ್ವಗಿಂದ್ರಿಯ ದಲ್ಲಿ ನೆಲೆಗೊಳ್ಳದು. ಆ ತ್ವಗಿಂದ್ರಿಯದಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿಬರು ವ ಸುಸ್ಪರ್ಶನ ಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತವಾಗ ದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಆ ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದ ಸೇವ ನೆ ಇಲ್ಲ. ಆ ಪ್ರಸಾದಸೇವನೆ ಇಲ್ಲದಿದ್ದಲ್ಲಿ ಮುಕ್ತಿಮುನ್ನವೇ ಇಲ್ಲ ದೆ ಹೋಗುತ್ತಿಹುದು ॥ ೭೧ ॥ ದೇಹವೇ ಸತಿಯಾಗಿಯೂ, ಆತ್ಮನೇ ಪತಿಯಾಗಿಯೂ, ಸಕಲಕರಣಂಗಳೇ ತನಯತೊತ್ತಾದಿಗಳಾಗಿಯೂ, ಘಟಸಂಸಾರಿಯಾಗಿಯೂ ಆಚರಿಸುವದೇ ಅಜ್ಞಾನವು. ಅಂತಪ್ಪ ಅಜ್ಞಾ ನವೆಂಬ ಕರಕಮಲವು ನಷ್ಟವಾಗಿಹೋಗಿ ಶರಣನೇ ಸತಿಯಾಗಿಯೂ, ಲಿಂಗವೇ ಪತಿಯಾಗಿಯೂ, ಇಂದ್ರಿಯಂಗಳನೆಲ್ಲಾ ಲಿಂಗೇಂದ್ರಿಯಗಳಾ ಗಿಯೂ, ವಿಷಯಂಗಳೆಲ್ಲಾ ಲಿಂಗಪ್ರಸಾದವಾಗಿಯೂ ಅಳವಡಿಸಿಕೊಂ ಡು ಲಿಂಗಾಂಗಿ ಸಂಸಾರಿಯಾಗಿ ಆಚರಿಸುವದೇ ಸುಜ್ಞಾನವು. ಅಂತಪ್ಪ ಸುಜ್ಞಾನವೆಂಬ ಕರಕಮಲವು ನೆಲೆಗೊಂಡಲ್ಲಿ ತನ್ನಲ್ಲಿ ಸ್ಥಿರಕರವಾಗಿಂಬು ಗೊಂಡಾಗ ಆ ಸುಜ್ಞಾನವೆಂಬ ಕರಕಮಲಕ್ಕೆ ಈಳನಸ್ವರೂಪವಾದ ಪ್ರ ಸಾದಲಿಂಗವು ಸಂಬಂಧವಾಗಿ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಂಡು, ಅಲ್ಲಿ ಬರುವ ಶಬ್ದಪದಾರ್ಥವನರ್ಪಿಸಿಕೊಂಡು, ಶರಣಂಗೆ ತನ್ನ ಸುಶಬ್ದಪ್ರ ಸಾದವ ಕರುಣಿಸಿಕೊಡುತ್ತಿಹುದು. ಹಾಂಗಲ್ಲದ ಪಕ್ಷದಲ್ಲಿ ಆ ಅಜ್ಞಾನ ವೆಂಬ ಕರಕಮಲಕ್ಕೆ ಈಳನಸ್ವರೂಪವಾದ ಪ್ರಸಾದಲಿಂಗವು ಸಾಧ್ಯವಾ ಗದು. ಆ ಪ್ರಸಾದಲಿಂಗವು ಸಂಬಂಧವಾಗಲೊಲ್ಲದಿದ್ದಲ್ಲಿ ಶ್ರೋತ್ರೇಂ ದ್ರಿಯದಲ್ಲಿ ನೆಲೆಗೊಳ್ಳದು. ಆ ಶ್ರೋತ್ರೇಂದ್ರಿಯದಲ್ಲಿ ನೆಲೆಗೊಳ್ಳದಿದ್ದ ಲ್ಲಿ ಅಲ್ಲಿಬರುವ ಶಬ್ದಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತ ವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆ ಯಿಲ್ಲ. ಆ ಪ್ರಸಾದಸೇವನೆಯಿಲ್ಲದಿದ್ದಲ್ಲಿ ಮುಕ್ತಿಮುನ್ನವೇ ಇಲ್ಲದೆಹೋ ಗುತ್ತಿಹುದು ॥ ೭೦ ॥ ಷಡ್ವರ್ಗಂಗಳೊಡನೆ ಕೂಡಿಕೊಂಡು ಲಿಂಗಾಂ ಗವೆರಡಕ್ಕೆ ಭಿನ್ನವಿಟ್ಟುಕೊಂಡು ಲಿಂಗವಪೂಜಿಸಿ, ಫಲಪದಂಗಳಪಡೆದ ನುಭವಿಸಿ, ಭವವನೈದಿ ಹೋಗುವಂತಾದ್ದೆ ದುರ್ಭಾವವು. ಅಂತಪ್ಪ

ದುರ್ಭಾವವೆಂಬ ಕರಕಮಲವು ಅಳಿದು ನಷ್ಟವಾಗಿಹೋಗಿಸದ್ಭಾವವು ಶಿಖಿಕರ್ಪೂರಸಂಯೋಗವಾದಹಾಂಗೆ ಲಿಂಗದಲ್ಲಿ ತಾಕೂಡಿ ತನ್ನಲ್ಲಿ ಲಿಂಗವೂಕೂಡಿ, ತಾನು ಲಿಂಗವೆಂಬ ಉಭಯಭಾವವಳಿದು ತಾನು ತಾನಾಗಿರುವದೇ ಸದ್ಭಾವವು. ಅಂತಪ್ಪ ಸದ್ಭಾವವೆಂಬ ಕರಕಮಲವು ನೆಲೆಗೊಂಡಲ್ಲಿ ತನ್ನಲ್ಲಿ ಸ್ಥಿರಕರವಾಗಿ ಇಂಬುಗೊಂಡಾಗ ಸದ್ಭಾವವೆಂಬ ಕರಕಮಲಕ್ಕೆ ಬೋಧಸ್ವರೂಪವಾದ ಮಹಾಲಿಂಗವು ಸಂಬಂಧವಾಗಿ ಹೃದಯೇಂದ್ರಿಯದಲ್ಲಿ ನೆಲೆಗೊಂಡು, ಅಲ್ಲಿಬರುವ ಸುತೃಪ್ತಿ ಪದಾರ್ಥವ ನರ್ಪಿಸಿಕೊಂಡು, ಶರಣಂಗೆ ತನ್ನ ಪರಿಣಾಮಪ್ರಸಾದವನ್ನು ಕರುಣಿಸಿ ಕೊಡುತ್ತಿಹುದು. ಅದಲ್ಲದೆ ಆ ದುರ್ಭಾವವೆಂಬ ಕರಕಮಲಕ್ಕೆ ಬೋಧಸ್ವರೂಪವಾದ ಮಹಾಲಿಂಗವು ಸಂಬಂಧವಾಗಲೊಲ್ಲದು. ಆ ಮಹಾಲಿಂಗವು ಸಂಬಂಧವಾಗದಿದ್ದಲ್ಲಿ ಹೃದಯೇಂದ್ರಿಯದಲ್ಲಿ ನೆಲೆಗೊಳ್ಳದು. ಆ ಹೃದಯೇಂದ್ರಿಯದಲ್ಲಿ ನೆಲೆಗೊಳ್ಳದಿದ್ದಲ್ಲಿ ಅಲ್ಲಿಬರುವ ಸುತೃಪ್ತಿಪದಾರ್ಥವರ್ಪಿತವಾಗದು. ಆ ಪದಾರ್ಥವರ್ಪಿತವಾಗದಿದ್ದಲ್ಲಿ ಲಿಂಗಾರ್ಪಿತವಿಲ್ಲ. ಲಿಂಗಾರ್ಪಿತವಿಲ್ಲದಿದ್ದಲ್ಲಿ ಪ್ರಸಾದಸೇವನೆಯೆಂಬುದುಯಿಲ್ಲ. ಆ ಪ್ರಸಾದಸೇವನೆಯಿಲ್ಲದಿದ್ದಲ್ಲಿ ಮುಕ್ತಿ ಮುನ್ನವೇ ಇಲ್ಲದೆ ಹೋಗುತ್ತಿಹುದು ॥ ೭೨ ॥ ಈಪ್ರಕಾರದಿಂದ ಹೇಳಲ್ಪಟ್ಟ ದುರ್ಭಾವವಳಿದು ಸದ್ಭಾವನೆಲೆಗೊಂಡಲ್ಲದೆ ಆ ಹಸ್ತಕ್ಕೆ ಮಹಾಲಿಂಗ ಸಾಧ್ಯವಾಗದು. ಈ ಚಿತ್ತಾದಿ ಸದ್ಭಾವಾಂತ್ಯವಾದ ಆರು ಕರಕಮಲಂಗಳು ಸಂಚಲತ್ವವಿಲ್ಲದೆ ತನ್ನಲ್ಲಿ ಸ್ಥಿರಕರವಾಗಿ ನೆಲೆಗೊಂಡಲ್ಲದೆ ಇಂಬುಗೊಂಡಲ್ಲದೆ ಆಚಾರಾದಿಮಹಾಲಿಂಗಾಂತ್ಯವಾದಾರುಲಿಂಗಂಗಳ ಸಂಬಂಧತ್ವವು ಆಗದು. ಆ ಷಡ್ವಿಧಹಸ್ತಂಗಳಲ್ಲಿ ದೊರಕೊಳ್ಳದು. ಆಚಾರಾದಿಮಹಾಲಿಂಗಾಂತ್ಯವಾದ ಆರುಲಿಂಗಂಗಳ ಸಂಬಂಧತ್ವವು ಆದಲ್ಲದೆ ಷಡ್ವಿಧಹಸ್ತಂಗಳಲ್ಲಿ ದೊರಕೊಳ್ಳದೆ ಷಡ್ವಿಧಲಿಂಗಗಳ ಕೂಟಸ್ಥವಾಗದು. ಷಡಿಂದ್ರಿಯಂಗಳಲ್ಲಿ ದೊರಕೊಳ್ಳದು. ಆಚಾರಾದಿಮಹಾಲಿಂಗಾಂತ್ಯವಾದಾರುಲಿಂಗಂಗಳ ಕೂಟಸ್ಥವಾದಲ್ಲದೆ ಷಡಿಂದ್ರಿಯಂಗಳಲ್ಲಿ ದೊರಕೊಂಡಲ್ಲದೆ ಅಂಗಸಂಬಂಧವಾದರೂಪು ಷಡ್ವಿಧಪದಾರ್ಥಂಗಳನ್ನು ಇಷ್ಟಲಿಂಗದೊಡನೆ ಕೂಡಿದ ಆಚಾರಾದಿಷಡ್ವಿಧಲಿಂಗಂಗಳಿಗೆ ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸುವ ಕಾಯಾರ್ಪಣದ ಮನೋಸಂಬಂಧವಾದ ಮುವ್ವತ್ತಾರು ತೆರದ ರುಚಿಪದಾರ್ಥಂಗಳನ್ನು ಪ್ರಾಣಲಿಂಗದೊಡನೆ ಕೂಡಿದ ಮುವ್ವ

ತ್ತಾರುಲಿಂಗಂಗಳಿಗೆ ಮುನ್ವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸುವ ಕರಣಾರ್ಪಣದೊಳಗಣ ಮಧ್ಯಸ್ಥವಾದ ವಿಶ್ರಾರ್ಪಣದ ಆತ್ಮತತ್ವಸಂಬಂಧವಾದ ಇನ್ನೂರಹದಿನಾರುತೃಪ್ತಿಪದಾರ್ಥಂಗಳನ್ನು ಭಾವಲಿಂಗದೊಡನೆ ಕೂಡಿದ ಇನ್ನೂರಹದಿನಾರುಲಿಂಗಂಗಳಿಗೆ ಇನ್ನೂರಹದಿನಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸುವ ಭಾವಾರ್ಪಣದ ಸಕೀಲವು ಅರಿಯಬಾರದು. ಅದುಕಾರಣವಾಗಿ ಈ ಸುಚಿತ್ತಾದಿ ಸದ್ಭಾವಾಂತ್ಯವಾದ ಆರು ಕರಕಮಲಂಗಳು ಸಂಚಲ ವಿಸಂಚಲತ್ವವಿಲ್ಲದೆ ತನ್ನಲ್ಲಿ ಸ್ಥಿರಕರವಾಗಿ ನೆಲೆಗೊಂಬ ಭೇದವನ್ನು ಪೇಳ್ವೆಂ. ಮುಂದೆ ಚಕ್ರಾರ್ಪಣದಲ್ಲಿ ವಿಸ್ತಾರವಾಗಿ ನಿರೂಪಿಸುವೆವು. ಆ ವಿಚಾರವು ಹ್ಯಾಂಗಿಪ್ಪದೆಲೆ ಸ್ವಾಮಿಯೆಂದು ಬೆಸಗೊಂಡೊಡೆ, ಕ್ರಿಯಾಶಕ್ತಿಯ ಮಥನದಿಂದ (ಶಕ್ತಿಶ್ಚ ದ್ವಿವಿಧಾಪ್ರೋಕ್ತಾ) ಎಂದು ಹೇಳುತ್ತಿಹುದಾದಕಾರಣ ಕ್ರಿಯಾಶಕ್ತಿಯೆಂಬಾಯುಕಳು ಎರಡುತೆರನಾಗಿರುತ್ತಿಹಳು. ಅದು ಹ್ಯಾಂಗೆಂದೊಡೆ, ಲೋಕದಾತ್ಮರುಗಳಿಗೆ ಅಸಿ, ಮಸಿ, ಕೃಷಿ, ವಾಣಿಜ್ಯ, ಯಾಚನ, ಗೋಪಾಲತ್ವವೆಂಬ ಷಟ್ಕೃಷಿ ವ್ಯಾಪಾರಂಗಳಮಾಡುವ ದುಷ್ಕೃತ್ಯವನ್ನೇ ಉಂಟುಮಾಡಿಕೊಡುತ್ತಿಹಳು.

ಇತ್ತ ಗುರುಕಾರುಣ್ಯವಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ಗುರುಭಕ್ತಿ, ಲಿಂಗಪೂಜೆ, ಜಂಗಮದಾಸೋಹ, ಪಾದೋದಕ, ಪ್ರಸಾದಸೇವನೆ ಮುಂತಾದ ಸತ್ಕೃತ್ಯವನುಂಟುಮಾಡಿಕೊಡುತ್ತಿಹಳು. ಈ ರೀತಿಯಲ್ಲಿ ಕ್ರಿಯಾಶಕ್ತಿಯೆಂಬಾಯುಕಳು ಎರಡು ತೆರನಾಗಿರುತ್ತಿಹಳು. ವಾಗಾದಿಕರ್ಮೇಂದ್ರಿಯಂಗಳೈದು ಕ್ರಿಯಾಶಕ್ತಿ ಸ್ವರೂಪದಿಂದಿದ್ದಿತಾದಕಾರಣ ಆ ಕ್ರಿಯಾಶಕ್ತಿಸ್ವರೂಪವಾದ ವಾಗಾದಿ ಕರ್ಮೇಂದ್ರಿಯಗಳೊಳಗೆ (ಶಿವಾ) ಎಂಬುದೇ ವಾಕ್, ಶಿವಾಚಾರವ ಪೃಥವಿಡಿವುದೇ ಪಾಣಿ, ಗುರುಮಾರ್ಗಾಚಾರದಲ್ಲಿ ಆಚರಿಸುವದೇ ಪಾದ, ಅಧೋಗತಿಗಿಳಿವ ಮಲತ್ರಯಂಗಳ ಬಿಡುವುದೇ ಪಾಯು, ಶಿವಾನುಭಾವಿಗಳ ತತ್ಸಂಗದಲ್ಲಿ ಸದಾ ಆನಂದಿಸುವದೇ ಗುಹ್ಯವಾಗಿ ಈ ರೀತಿಯಲ್ಲಿ ವಾಗಾದಿಕರ್ಮೇಂದ್ರಿಯಂಗಳೈದು ನಿವೃತ್ತಿಯಾದುದೇ ಕ್ರಿಯಾಶಕ್ತಿ. ಅಂತಪ್ಪ ಕ್ರಿಯಾಶಕ್ತಿಯ ಮಥನದಿಂದ ಪ್ರಾಣವಾಯುವನಿಲಿಸಿ ಪ್ರಾಣವಾಯುವೆಂಬುದು ತಾನು ಇಂದ್ರನೀಲವರ್ಣ, ಹೃದಯಸ್ಥಾನದಲ್ಲಿರ್ದು ಅಂಗುಷ್ಠಮಾತ್ರದೊಡಗಿ ವಾಣ್ಯಾಗ್ರಪರಿಯಂತರ ಸತ್ತಾಪ್ರಾಣಿಸಿಕೊಂಡು ಉಶ್ವಾಸ

ನಿಶ್ವಾಸವಂಗೈಸಿ ಅನ್ನಜೀರ್ಣಕಾರವಂ ಮಾಡಿಸುತ್ತಿಹುದು ಪ್ರಾಣವಾಯು. ಅಂತಪ್ಪ ಪ್ರಾಣವಾಯುವಿನಸ್ಥಾನ ಥರ್ಮಕರ್ಮ ವರ್ಣಂಗಳನ್ನು ನಕಾರ ಮಂತ್ರದಿಂದ ತಡೆದು ಆಧಾರಚಕ್ರದ ಪಾಯುಸ್ಥಾನದಲ್ಲಿ ಒಂದಾನೊಂದು ಬೆಲ್ಲದಚ್ಚಿನೋಪಾದಿಯಲ್ಲಿ ಚತುಃಕೋಣೆಯಾಕಾರದಿಂದೊಪ್ಪುವಂತಾದ್ದೇ ಆಧಾರಚಕ್ರವು. ಆ ಚಕ್ರವೆಂಬುದು ತಾನೊಂದಾನೊಂದು ಕೆಂಪಿನ ದಾಸಿವಾಳದ ಹುವ್ವಿನೋಪಾದಿಯಲ್ಲಿ ಶೋಣವರ್ಣದ ಕಾಂತಿಯಿಂದಿರುತ್ತಿಹುದು. ಅಂತಪ್ಪ ವರ್ಣದ ನಾಲ್ಕುದಳದ ಆ ಚಕ್ರಸುತ್ತುವಳಯದಲ್ಲಿ ನಾಲ್ಕೆಸಲುಗಳಿಂದೊಪ್ಪುತ್ತಿಹುದು. ಅಂತಪ್ಪ ನಾಲ್ಕೆಸಳುಗಳ (ವಾಶಷಸ) ಎಂಬ ನಾಲ್ಕಕ್ಷರದ ವಕಾರಾದಿ ಸಕಾರಾಂತ್ಯ ಮಾದ ಚತುರಾಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತ್ತಿಹುದು. ಅಂತಪ್ಪ ನಾಲ್ಕಕ್ಷರದ ಅಧಿದೈವಬ್ರಹ್ಮನು ಇಪ್ಪಟರೊಡನೆ ಕೂಡಿರುವಂತಾದ್ದೇ ಒಂದಾಧಾರಚಕ್ರವು. ಆ ಚಕ್ರಕ್ಕೆ ಅಜನೇ ಅಧಿಷ್ಠಾಯಕನಾಗಿರುತ್ತಿಹನು. ಅಂತಪ್ಪ ಅಜನೆಂಬ ಅಧಿದೇವತೆಯು ಜಾಗ್ರಾವಸ್ಥೆಯನ್ನು ಆತ್ಮನು ಲೋಚನಾಗ್ರಸ್ಥಾನಕ್ಕೆ ಒಂದಾಗ ಇಪ್ಪತ್ತೈದುತತ್ವ ಸಮಪೇಕ್ಷಿಯಾಗಿನಿಂದು, ಸ್ಥೂಲತನುವಿನ ಮರವೆಯೊಡನೆ ಕೂಡಿಕೊಂಡು, ಯೆಚ್ಚರವುಳ್ಳಾತನಾಗಿ ದೃಶ್ಯವಾದ ಸಕಲೇಂದ್ರಿಯಂಗಳ ವ್ಯಾಪಾರದೊಡನೆಕೂಡಿ ಚರಿಸುವಂತಾದ್ದೇ ಜಾಗ್ರಾವಸ್ಥೆಯು. ಆ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತ್ತಿಹುದು. ಅಂತಪ್ಪ ಅವಸ್ಥೆಯನ್ನು ನಕಾರವೆಂಬ ಬೀಜಾಕ್ಷರದಿಂತಿಳಿದು ಇವೆಲ್ಲಾ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನೂ ಜನ್ಮಾಂತರಗತಿಗಳೊಳಗೆ ತಂದು ಸಂಪರಿಸುವದಕ್ಕೆ ಕಾರಣವಾಗಿರುತ್ತಿಹುದು. ಇತ್ತ ಗುರುಕಾರುಣ್ಯವಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ಅವೆಲ್ಲಾ ನಿವೃತ್ತಿಯಾಗಿಹೋಗಿ, ನಕಾರ ಷಡಕ್ಷರಮಂತ್ರಸ್ವರೂಪವಾಗಿರುತ್ತಿಹನು. ಅದು ಹ್ಯಾಂಗೆಂದೊಡೆ, ಆ ಚಕ್ರವೇ ನಕಾರಪ್ರಣಮ ಸ್ವರೂಪವಾದಲ್ಲಿ ಅಲ್ಲಿ ತೋರುವವರ್ಣವೇ ನಕಾರಪ್ರಣಮದೊಳಗಣ ಮಕಾರಪ್ರಣವಸ್ವರೂಪು. ಅಲ್ಲಿರುವ ದಳಂಗಳೇ ನಕಾರಪ್ರಣವದೊಳಗಣ ಶಿಕಾರಪ್ರಣವಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವ ಅಕ್ಷರಂಗಳೇ ನಕಾರಮಂತ್ರದೊಳಗಣ ವಕಾರಪ್ರಣವಸ್ವರೂಪು. ಅಲ್ಲಿ

ನೆಲಸಿರುವ ಅಧಿದೇವತೆಯೇ ನಕಾರಪ್ರಣವದೊಳಗಣ ಯಕಾರ ಪ್ರಣವಸ್ವರೂಪು. ಅಲ್ಲಿ ಸಂಬಂಧವಾಗಿರುವ ಅವಸ್ಥೆಯೇ ನಕಾರಪ್ರಣವದೊಳಗಣ ಓಂಕಾರಸ್ವರೂಪವಾಗಿ, ಆಧಾರಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿ ನಕಾರಮಂತ್ರ ಷಡಕ್ಷರಿಮಂತ್ರಸ್ವರೂಪವಾಗಿರ್ಪವೆಂದೇ ಅರಿದು, ಷಡ್ವಿಧವಿಚಾರವಿಡಿದು ಈ ನಕಾರಷಡಕ್ಷರೀ ಮಂತ್ರಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ನಕಾರಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಹವೆಂಬ ಕೃತನಿಶ್ಚಯಭಾವವನ್ನೇ ತನ್ನ ಮನದೊಳಗೆಗ್ರಹಿಸಿ, ಆ ವಿಚಾರದ ವಿಶಾಲ್ಯವು ತಾನೆಂತುಂಟೆಲೆಸ್ವಾಮಿಯೆಂದು ಬೆಸಗೊಂಡೊಡೆ, ನಕಾರಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಆ ಚಕ್ರವೇ ಪ್ರಣವಪೀಠದ ಗದ್ದಿಗೆಯಾಗಿ ಅಲ್ಲಿ ತೋರುವ ವರ್ಣವೇ ನಂದದ ಕುಂದದ ಸ್ವಯಂಜ್ಯೋತಿ ಪ್ರಕಾಶವಾಗಿ ಅಳವಟ್ಟಹುದೆರಡನೆಯ ವಿಚಾರವು. ಅಲ್ಲಿರುವ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವ ಅಕ್ಷರಂಗಳೇ ನಕಾರಮಂತ್ರಮೂರ್ತಿಯಾದ ಆಚಾರಲಿಂಗವೆನೆನಹುದಕ್ಕೆ (ನಾಂನಾಂನಾಂ) ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯವಿಚಾರವು. ಅಲ್ಲಿ ನೆಲಸಿರುವ ಅಧಿದೇವತೆಯೇ ಭಕ್ತನೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವವಸ್ಥೆಯೇ ಘನಲಿಂಗಾವಸ್ಥೆಯಾಗಳವಟ್ಟುದೇ ಆರನೆಯ ವಿಚಾರವು. ಈರೀತಿಯಲ್ಲಿ ನಕಾರ ಷಡಕ್ಷರೀಮಂತ್ರಮೂರ್ತಿ ಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ನಕಾರಮಂತ್ರಮೂರ್ತಿಯಾದಾಚಾರಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಹವೆಂಬ ಕೃತನಿಶ್ಚಯಭಾವವನ್ನು ತನ್ನಮನದೊಳಗೆಗ್ರಹಿಸಿ, ಈ ಷಡ್ವಿಧವಿಚಾರವಿಡಿದು ಸದ್ಭಕ್ತಿಯಿಂದ ತ್ರಿವಿಧಪದಾರ್ಥಂಗಳವಿಡಿದು ಭಕ್ತಿಗೃಹವನ್ನುಕಟ್ಟಿ, ತನು ಮನ ಧನಂಗಳನ್ನು ಗುರುಲಿಂಗ ಜಂಗಮಕ್ಕೆ ನಿರುವಂಚನೆಯಿಂದ ಸಮರ್ಪಣೆಯಮಾಡುವಂತಾದ್ದೇ ಸದ್ಭಕ್ತಿ. ಅಂತಪ್ಪ ಭಕ್ತಿಯಿಂದೊಂದನೆಯತತ್ವಾದಿಯೇ ಪೃಥ್ವೀತತ್ವ, ಆ ಪೃಥ್ವೀತತ್ವದ ಜನನಕ್ಕೆ ಮೂಲಾಧಾರಸ್ಥಾನವಾದ ಪಶ್ಚಿಮದಿಕ್ಕಿನ ಸದಾಶಿವಮೂರ್ತಿಗೆ ಹಿಂಭಾಗದಲ್ಲಿಪ್ಪುದೇ ಪಶ್ಚಿಮದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋರುವ ಸದ್ಯೋಜಾತಮುಖವನ್ನರಿದು ಕರ್ಮಸಾದಾಖ್ಯಸ್ವರೂಪವಾದ ಸದ್ಯೋಜಾತಮುಖವು ತಾನೇ ಇಲ್ಲಿ ಶಿವಶರಣನ ಘ್ರಾಣೇಂದ್ರಿ

ಯದಲ್ಲಿ ಆಚಾರಲಿಂಗ ಸ್ವರೂಪಿನಿಂದ ವಾಸವಾಗಿಪ್ಪೆಂದು ತಿಳಿದು ಧರ ಣಿಯ ಕಠಿಣವನ್ನು ಅಸ್ಥಿ, ಮಾಂಸ, ತ್ವಚೆ, ನಾಡಿ, ರೋಮವೆಂಬ ಹಂಸ ಗುಣಂಗಳನ್ನು ಭಯಭಕ್ತಿಯಿಂತಿಳಿದು ದಿಂಡುಡುಗೆಯ ಸುತ್ತಿಕೊಂಡು, ಪಾದವ ಜೋಡಿಸಿಕೊಂಡು, ಹಸ್ತಾಂಜಲಿಯುತನಾಗಿನಿಂದು ಸ್ವಾಮಿ ಏನನ್ನು ಮಾಡಲಿ, ಏನುಬುದ್ಧಿ, ಏನುನಿರೂಪ್ಪ, ಅಸಾಡವೆಂದು ಬೆಸಗೊಂ ಬ ಭಯಭಕ್ತಿ ಭೃತ್ಯಭಾವವನುಳ್ಳ ಸದ್ಭಕ್ತರುಗಳಿಗೆ ಪೃಥ್ವ್ಯಂಶಗುಣಗ ಳು ನಷ್ಟವಾಗಿರ್ಪವೆಂದೇ ಅರಿದು, ತನುಗುಣನಾಸ್ತಿಯಾಗಿ ಪೃಥ್ವೀಮ ದವೆತ್ತಿದಲ್ಲಿ ತನುಗುಣಭರಿತನಾಗಿ ವಸ್ತ್ರಾಭರಣಾನುಲೇಪನಾದಿ ತಾಂ ಬೂಲಮಂ ಬಯಸುತ್ತಿಹನೆಂಬ ಪೃಥ್ವಿಯಮದಗುಣವು ನಷ್ಟವಾಗಿ ಹೋಗಿ, ಭಕ್ತಿಸ್ಥಲವನಂಗಂಗೊಂಡು ಇಷ್ಟರಸಾಧನದಿಂದ ಪೃಥ್ವಿಯ ಮದಗುಣ ಹಂಸಗುಣಂಗಳನಳಿದು ಚಿತ್‌ಪೃಥ್ವಿ ಸ್ವರೂಪಿನಿಂದ ಭಕ್ತಾಂ ಗಂಗವಾಗಲು, ಅಂತಪ್ಪ ಪರಾತ್ಪರವಾದ ಸದ್ಭಕ್ತಿ ಸ್ಥಲವನೊಡಲಮಾ ಡಿಕೊಂಡು ಆಚರಿಸುವದು ತಾನೇ ಸುಚಿತ್ತದ ನೆಲೆ, ಕುಚಿತ್ತವಳಿದು ಸುಚಿತ್ತವೆಂಬ ಕರಕಮಲಕ್ಕೆ ಪಂಚಾಚಾರ ಸ್ವರೂಪವಾದ ಆಚಾರ ಬ್ರ ಹ್ಮವು ಬಂದು ನೆಲೆಗೊಂಬನಿಲುಕಡೆಯು ಸುಚಿತ್ತದ ನೆಲೆಯೆಂಬ ಶ ಬ್ದಕ್ಕರ್ಥ ‖ ೭೪ ‖ ಜ್ಞಾನಶಕ್ತಿಯ ಮಥನದಿಂದ (ಶಕ್ತಿಶ್ಚದ್ವಿವಿಧಾ ಪ್ರೋಕ್ತಾ) ಎಂದು ಜ್ಞಾನಶಕ್ತಿ ಎರಡುತೆರನಾಗಿರುತ್ತಿಹಳು. ಅದು ಹ್ಯಾ ಗೆಂದೊಡೆ, ಲೋಕದಾತ್ಮರುಗಳಿಗೆ ಗುರು-ನರ, ಲಿಂಗವು-ಶಿಲೆ, ಜಂಗ ಮವು-ಮನುಜ, ಪಾದೋದಕ-ನೀರು, ಪ್ರಸಾಪವೆಂಜಲೆಂಬ ಅಜ್ಞಾನವ ನ್ನೇ ಪ್ರೇರಿಸಿಕೊಡುತ್ತಿಹಳು. ಇತ್ತ ಗುರುಕಾರಣ್ಯವಪಡೆದು ಲಿಂಗಾಂ ಗಸಂಬಂಧಿಗಳಾಗಿ ಆಚರಿಸುವ ಶಿವಶರಣರುಗಳಿಗೆ ನಿಃಕಲಬ್ರಹ್ಮದ ಸ ದ್ರೂಪವೇ ಗುರು, ಚಿದ್ರೂಪವೇ ಲಿಂಗ, ಆನಂದವೇ ಜಂಗಮ, ನಿತ್ಯತ್ವ ವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂದರಿವ ಸುಜ್ಞಾನವನ್ನೇ ಪ್ರೇರಿಸಿಕೊಡುತ್ತಿಹಳು. ಈರೀತಿಯಲ್ಲಿ ಜ್ಞಾನಶಕ್ತಿಯೆಂಬಾಯಕಳೆರಡು ತೆರನಾಗಿರುತ್ತಿಹಳು. ಮತ್ತಂತುಮಲ್ಲದೆ ಶ್ರೋತ್ರಾದಿ ಜ್ಞಾನೇಂದ್ರಿಯಂ ಗಳೈದು ಜ್ಞಾನಶಕ್ತಿಯ ಸ್ವರೂಪೆಂದಿದ್ದಿತಾದಕಾರಣ ಆ ಜ್ಞಾನಶಕ್ತಿಯ ಸ್ವರೂಪವಾದ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೊಳಗೆ ಶ್ರೋತ್ರದಲ್ಲಿ ಶಿ ವಕಥೆ, ಶಿವಪುರಾಣ, ಆದ್ಯರವಚನವಲ್ಲದೆ ಅನ್ಯವಪ್ಪ ಮಾಯಾ ಕುಶಾ ಸ್ತ್ರಕುಭಾಷೆಗಳಂ ಕೇಳದಿಹುದು. ತ್ವಕ್ಕಿನಲ್ಲಿ ಶ್ರೀವಿಭೂತಿ ರುದ್ರಾಕ್ಷಿ

ಶಿವಲಿಂಗಧಾರಣವಲ್ಲದೆ ಅನ್ಯವಪ್ಪ ಮಾಯಾಮೋಹಂಗಳಂ ಧರಿಸದಿಹುದು. ನೇತ್ರದಲ್ಲಿ ಶಿವಲಿಂಗ ನಿರೀಕ್ಷಣೆಯಲ್ಲದೆ ಅನ್ಯವಪ್ಪ ಮಾಯಾಕುರೂಪುಗಳಂ ನೋಡದಿಹುದು. ಜಿಹ್ವೆಯಲ್ಲಿ ಶಿವಸುಖಪ್ರಸನ್ನೀತಿಪ್ರಸಾದವ ಸ್ವೀಕಾರವಲ್ಲದೆ ಅನ್ಯವಪ್ಪಮಾಯೋಚ್ಛಿಷ್ಟಂಗಳಂ ಭುಂಜಿಸದಿಹುದು. ಘ್ರಾಣದಲ್ಲಿ ಶಿವನಿರ್ಮಾಲ್ಯಗಂಧವಲ್ಲದೆ ಅನ್ಯವಪ್ಪಮಾಯಾದುರ್ವಾಸನೆಯಾಘ್ರಾಣಿಸದಿಹುದು. ಈರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿಯಂಗಳ್ಯದುನಿವೃತ್ತಿಯಾದುದೇ ಜ್ಞಾನಶಕ್ತಿ. ಅಂತಪ್ಪ ಜ್ಞಾನಶಕ್ತಿಯ ಮಥನದಿಂದ ಅಪಾನವಾಯುವನಿಲ್ಲಿಸಿ, ಅಪಾನವಾಯುವೆಂಬುದು ತಾನು ಹರಿತವರ್ಣದಿಂದ ಗುದಸ್ಥಾನದಲ್ಲಿರ್ದು ಮಲಮೂತ್ರಂಗಳಂ ವಿಸರ್ಜನವಂಮಾಡಿಸಿ, ಅಧೋದ್ವಾರವಂ ಬಲಿದು ಅನ್ನರಸವ್ಯಾಪ್ತಿಯಂ ಮಾಡಿಸುತ್ತಿಹುದು ಎಂದು ಹೇಳಿಸಿಕೊಂಬುವದೇ ಅಪಾನವಾಯು. ಅಂತಪ್ಪ ಅಪಾನವಾಯುವಿನ ಸ್ಥಾನಧರ್ಮಕರ್ಮವರ್ಣಂಗಳನ್ನು ತಡೆದು ಸ್ವಾಧಿಷ್ಠಾನಚಕ್ರದ ಲಿಂಗಸ್ಥಾನದಲ್ಲಿ ಧನುರ್ಗತಿಯಾಕಾರದಿಂದೊಪ್ಪುವಂತಾದ್ದೇ ಸ್ವಾಧಿಷ್ಠಾನಚಕ್ರವು. ಅಂತೊಪ್ಪುವ ಚಕ್ರದವರ್ಣವು ಪುರುಷರುಗಳು ಕರ್ಣಕಿಟ್ಟುಕೊಂಬುವ ನೀಲದರಳಿನ ಕಾಂತಿಯಿಂದಿರುತಿಹುದು. ಅಂತಪ್ಪ ವರ್ಣದ ಷಡ್ದಳ ಆ ಚಕ್ರದ ಸುತ್ತುವಳೆಯದಲ್ಲಿ ಆರೆಸಳುಗಳಿಂದೊಪ್ಪುತಿಹುದು ಅಂತಪ್ಪ ಆರೆಸಳುಗಳ (ಬಭಮಯರಲ) ವೆಂಬ ಷಡಕ್ಷರದ ಬಕಾರಾದಿಲಕಾರಾಂತ್ಯವಾದ ಆರಕ್ಷರಂಗಳೇ ಆ ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪಾರಕ್ಷರದ ಅಧಿದೈವ ಇಷ್ಟರೊಡನೆ ಕೂಡಿರುವಂತಾದ್ದೇ ಒಂದು ಸ್ವಾಧಿಷ್ಠಾನಚಕ್ರವು. ಆ ಚಕ್ರಕ್ಕೆ ನಾರಾಯಣನೇ ಅಧಿದೇವತೆ ಅಧಿಷ್ಠಾಯಕನಾಗಿರುತಿಹನು. ಅಂತಪ್ಪನಾರಾಯಣನೆಂಬ ಅಧಿದೇವತೆಯು ಸ್ವಪ್ನಾವಸ್ಥೆಯನ್ನು ಲೋಚನಾಪ್ರಸ್ಥಾನದಲ್ಲಿರ್ದ ಆತ್ಮನು ಗಳಸ್ಥಾನಕ್ಕಿಳಿದುಬಂದಾಗ ಹದಿನೇಳು ತತ್ವ ಸಮಪೇಕ್ಷಿತವಾಗಿನಿಂದು ಸ್ಥೂಲತನುವಿನ ಮರವೇ ಸೂಕ್ಷ್ಮತನುವಿನ ಅರುವಿನೊಳು ಕೂಡಿಕೊಂಡು ದೃಶ್ಯಾದೃಶ್ಯಮಾದ ಕಲ್ಪಿತರೂಪಿನ ಕಾಣಿಕೆಯಾಗಿರ್ಪ ಸುಖದುಃಖ ಮೋಹರೂಪವಾದ ಕನಸ ಕಾಣುವುದೇ ಸ್ವಪ್ನಾವಸ್ಥೆ. ಆ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿಹುದು. ಅಂತಪ್ಪಾವಸ್ಥೆಯನ್ನು ಮಕಾರವೆಂಬ ಬೀಜಾಕ್ಷರಿಂತಿಳಿದು ಇವೆಲ್ಲಾ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ

ಕೂಡಿಕೊಂಡು ಪ್ರಕೃತಿ ತತ್ವಂಗಳಾಗಿ ಸಕಲ ಜೀವರುಗಳನ್ನು ಜನ್ಮ ಜನ್ಮಾಂತರ ಗತಿಗಳೊಳಗೆ ತಂದು ಸಹ್ಮರಿಸುವದಕ್ಕೆ ಕಾರಣವಾಗಿರುತಿಹವು. ಇತ್ತ ಗುರುಕಾರುಣ್ಯವಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಅವೆಲ್ಲಾ ನಿವೃತ್ತಿಯಾಗಿಹೋಗಿ ಮಕಾರಷಡಕ್ಷರೀಮಂತ್ರಸ್ವರೂಪವಾಗಿರುತಿಹವು. ಅದು ಹ್ಯಾಗೆಂದೊಡೆ— ಆ ಚಕ್ರವೇ ಮಕಾರಪ್ರಣವಸ್ವರೂಪವಾದಲ್ಲಿ ಅಲ್ಲಿ ತೋರುವಂತವರ್ಣವೆ ಮಕಾರಪ್ರಣವದೊಳಗಣ ನಕಾರಪ್ರಣವಸ್ವರೂಪು. ಅಲ್ಲಿರುವಂತ ದಳಗಳೇ ಮಕಾರಪ್ರಣವದೊಳಗಣ ಶಿಕಾರಪ್ರಣವಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವಂತ ಅಕ್ಷರಂಗಳೇ ಮಕಾರಪ್ರಣವದೊಳಗಣ ವಕಾರಪ್ರಣವಸ್ವರೂಪು. ಅಲ್ಲಿ ನೆಲಸಿರುವಂತ ಅಧಿದೇವತೆಯೇ ಮಕಾರಪ್ರಣವದೊಳಗಣ ಯಕಾರಪ್ರಣವಸ್ವರೂಪು. ಅಲ್ಲಿ ಸಂಬಂಧವಾಗಿರುವಂತ ಅವಸ್ಥೆಯೇ ಮಕಾರಪ್ರಣವದೊಳಗಣ ಓಂಕಾರಪ್ರಣವಸ್ವರೂಪವಾಗಿ ಸ್ವಾಧಿಷ್ಠಾನಚಕ್ರದ ಸಂಬಂಧವಾದ ಷಡ್ವಿಧತತ್ವಂಗಳೆಲ್ಲವೂ ನಿವೃತ್ತಿಯಾಗಿಹೋಗಿ ಮಕಾರಷಡಕ್ಷರ ಮಂತ್ರಸ್ವರೂಪವಾಗಿರ್ಪವು. ಈಪ್ರಕಾರದಿಂದ ಹೇಳಲ್ಪಟ್ಟಂತೀ ಷಡ್ವಿಧವಿಚಾರವಿಡಿದು ಈ ಮಕಾರಷಡಕ್ಷರೀ ಮಂತ್ರಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ಮಕಾರಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ ವಿವೇಕದವಿಶಾಲ್ಯವು ತಾನೆಂತುಟೆಂದೆ ಸ್ವಾಮಿಯೆಂದು ಬೆಸಗೊಂಡೊಡೆ—ಮಕಾರಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಆ ಚಕ್ರವೇಪ್ರಣವಪೀಠದ ಗದ್ದುಗೆಯಾಗಿ ಅಲ್ಲಿ ತೋರುವ ವರ್ಣವೇ ನಂದಾದೀಪಂದದ ಸ್ವಯಂಜ್ಯೋತಿಪ್ರಕಾಶವಾಗಿ ಅಳವಟ್ಟುದೇ ಎರಡನೆಯವಿಚಾರವು. ಅಲ್ಲಿರುವಂತ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಾಕ್ಷರಂಗಳೇ ಮಕಾರಮಂತ್ರಮೂರ್ತಿಯಾದ ಗುರುಲಿಂಗವನೆನೆವುದಕ್ಕೆ (ಮಾಂಮಾಂಮಾಂ) ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯವಿಚಾರವು. ಅಲ್ಲಿ ನೆಲಸಿರುವಂತ ಅಧಿದೇವತೆಯೇ ಮಹೇಶ್ವರನೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯವಿಚಾರವು. ಈರೀತಿಯಲ್ಲಿ ಮಕಾರಷಡಕ್ಷರೀಮಂತ್ರ ಸ್ವರೂಪವಾದ

ಷಡ್ವಿಧತತ್ವಂಗಳೆಲ್ಲವೂ ಮಕಾರಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ, ನೈಷ್ಠಿಕಾಭಕ್ತಿಯಿಂದ ದೇವನಾರೋ ಗುರುದೇವನಲ್ಲದೆ, ದೇವನಾರೋ ಲಿಂಗದೇವನಲ್ಲದೆ, ದೇವನಾರೋ ಜಂಗಮದೇವನಲ್ಲದೆ ಎಂದು ಹೇಳುತಿಹುದಾದಕಾರಣ ಶ್ರೀಗುರು ಜಂಗಮವೇ ದೇವವಲ್ಲದೆ ಮತ್ತಾಂಥಃ ಪರದೈವವಿಲ್ಲವೆಂಬೇಕೋಲಿಂಗನೈಷ್ಠಿಯ ಮುಂದುಗೊಂಡಾಚರಿಸುವೆಂತಾದ್ದೇನೈಷ್ಠಿಕಾಭಕ್ತಿ. ಅಂತಪ್ಪ ಭಕ್ತಿಯಿಂದೆರಡನೆಯತತ್ವವೇ ಅಪ್ಪುತತ್ವ. ಆ ಅಪ್ಪುತತ್ವದ ಜನ್ಮಕ್ಕೆ ಮೂಲಾಧಾರಸ್ಥಾನವಾದುತ್ತರದಿಕ್ಕಿನ ಆ ಸದಾಶಿವಮೂರ್ತಿಗೆಡದ ಭಾಗದಲ್ಲಿಪ್ಪುದೇ ಉತ್ತರದಿಕ್ಕು. ಅಂತಪ್ಪ ದಿಕ್ಕಿನಲ್ಲಿ ತೋರುವ ವಾಮದೇವಮುಖನನರಿದು ಕರ್ಮಸಾದಾಖ್ಯಸ್ವರೂಪವಾದ ವಾಮದೇವಮುಖವೆಂಬುದು ತಾನು ಇಲ್ಲಿ ಶಿವಶರಣನ ಜಿಹ್ವೇಂದ್ರಿಯದಲ್ಲಿ ಮಂತ್ರಮೂರ್ತಿಯಾದ ಗುರುಲಿಂಗಸ್ವರೂಪಿನಿಂದ ವಾಸವಾಗಿಪ್ಪುದೆಂದೇ ತಿಳಿದು ಅಪ್ಪುತತ್ವದ ಮೃದುವನ್ನು (ಲಾಲಾಮೂತ್ರಸ್ತಥಾಸ್ವೇದ ಶ್ಶುಕ್ಲಶೋಣಿತಮೇವಚ) ಎಂಬಂಶಗುಣವನ್ನು ದೃಢವ್ರತದಿಂ ತಿಳಿದು ತನುಮನಗುಣನಾಸ್ತಿಯಾಗಿ ದೃಢವಿಡಿದಂತಾವುದಾನೊಂದು ಶೀಲವ್ರತ ನಿಯಮಾಚಾರಂಗಳಲ್ಲಿ ಕೃತನಿಶ್ಚಯ ಬುದ್ಧಿಯ ಮುಂದುಗೊಂಡಾಚರಿಸುವಂತ ವೀರ ಮಾಹೇಶ್ವರರುಗಳಿಗೆ ಅಪ್ಪುವಿನಂಶಗುಣಂಗಳು ನಷ್ಟವಾಗಿರ್ಪವೆಂದರಿದು, ಸಂಸಾರನಾಸ್ತಿಯಾಗಿ ಸಲಿಲಮದವೆತ್ತಿದಲ್ಲಿ ಸಂಸಾರಭರಿತನಾಗಿ ಮನೆಗೆಬೇಕು, ಎನಗೆಬೇಕು, ಮಕ್ಕಳಿಗೆ ಬೇಕೆನುತಿಹನೆಂಬ ಅಪ್ಪುವಿನ ಮದಗುಣವು ನಷ್ಟವಾಗಿ ಮಹೇಶ್ವರಸ್ಥಲಸಂಗಂಗೊಂಡುದೀಗ ಇಷ್ಟರ ಸಾಧನದಿಂದಪ್ಪುವಿನ ಮದಗುಣ ಅಂಶಗುಣಂಗಳಳಿದು ಚಿದಪ್ಪುಸ್ವರೂಪಿನಿಂದ ಮಹೇಶ್ವರಂಗಂಗವಾಗಲಂತಪ್ಪ ಪರಾತ್ಪರವಾದ ಸದ್ವೀರಮಾಹೇಶ್ವರಸ್ಥಲವ ನೊಡಲಮಾಡಿಕೊಂಡಾಚರಿಸುವಂತಾದ್ದು ತಾನೇ ಸುಬುದ್ಧಿಯನೆಲೆ, ಕುಬುದ್ಧಿಯಳಿದು ಸುಬುದ್ಧಿನೆಲೆ ಎಂಬ ಕರಕಮಲಕ್ಕೆ ಮಂತ್ರಮೂರ್ತಿಯಾದ ಗುರುಲಿಂಗವುಬಂದು ನೆಲೆಗೊಂಬಂತನಿಲುಕಡೆಯು ‖೭೪‖ ಇಚ್ಛಾಶಕ್ತಿಯ ಮಥನದಿಂದ (ಶಕ್ತಿಶ್ಚದ್ವಿವಿಧಾಪ್ರೋಕ್ತಾ) ಎಂದು ಹೇಳುತಿಹುದಾದಕಾರಣ ಇಚ್ಛಾಶಕ್ತಿಯೆಂಬಾಕೆಯು ಎರಡುತೆರನಾಗಿರುತಿಹಳು. ಅದು ಹ್ಯಾಗೆಂದೊಡೆ—ಲೋಕದಾತ್ಮರುಗಳಿ

ಗೆ ಹುಸಿ, ಕಳವು, ಪರದಾರಾ, ಪರಹಿಂಸೆ, ಅತಿಕಾಂಕ್ಷೆಯೆಂಬ ಪಂಚಮ ಹಾಪಾತಕಂಗಳ ಮೇಲಣಿಚ್ಛೆಯನ್ನು ಂಟುಮಾಡಿ ಕೊಡುತಿಹಳು. ಇ ತ್ತ ಗುರುಕಾರುಣ್ಯವಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಪಂಚಾಚಾರದ ಮೇಲಣಿಚ್ಛೆಯನ್ನುಂಟುಮಾಡಿ ಕೊ ಡುತಿಹಳು. ಮತ್ತಂತುಮಲ್ಲದೆ ಶಬ್ದಾದಿವಿಷಯಂಗಳೈದು ಇಚ್ಛಾಶ ಕ್ತಿಯಸ್ವರೂಪೆಂದಿದ್ದಿತಾದಕಾರಣ ಆ ಇಚ್ಛಾಶಕ್ತಿಯಸ್ವರೂಪವಾದ ಶ ಬ್ದಾದಿವಿಷಯಂಗಳೊಳಗೆ, ಶಬ್ದ ಗುರು, ಸ್ಪರುಶನ ಲಿಂಗ, ರೂಪು ಶಿವ ಲಾಂಛನ, ರಸ ಶಿವಪ್ರಸಾದಸೇವನೆ, ಶಿವನಿರ್ಮಾಲ್ಯಗಂಧವಾಗಿ ಶಬ್ದಾ ದಿವಿಷಯಂಗಳೈದು ನಿವೃತ್ತಿಯಾದುದೇ ಇಚ್ಛಾಶಕ್ತಿ. ಅಂತಪ್ಪಿಚ್ಛಾಶ ಕ್ತಿಯ ಮಥನದಿಂದೆ ವ್ಯಾನವಾಯುವನಿಲಿಸಿ, ವ್ಯಾನವಾಯು ಗೋಕ್ಷೀರ ವರ್ನ, ಸರ್ವಸಂಧಿಯಲ್ಲಿರ್ದು ನೀಡಿಕೊಂಡಿಹುದಲ್ಲೂ ಮುದುಡಿಕೊಂಡಿ ಹುದನೂ ಅನುಮಾಡಿಸಿ, ಅನ್ನಪಾನಮಂ ತುಂಬಿಸುತಿಹುದು. ಎಂದು ಹೇಳಿಸಿಕೊಂಬುವದೇ ವ್ಯಾನವಾಯುವು. ಅಂತಪ್ಪ ವ್ಯಾನವಾಯುವಿ ನ ಸ್ಥಾನಧರ್ಮಕರ್ಮವರ್ನಂಗಳಂ ಶಿಕಾರಮಂತ್ರದಿಂತಡೆದು ಮಣಿ ಪೂರಕಚಕ್ರದ ಪೊಕ್ಕುಳಸ್ಥಾನದಲ್ಲಿ ಒಂದಾನೊಂದು ತ್ರಿಕೋಣೆಯಾ ಕಾರಾದಿಂದೊಪ್ಪುತಿಹುದೇ ಮಣಿಪೂರಕಚಕ್ರವು. ಅಂತಪ್ಪ ಚಕ್ರದ ಕುಂಕುಮವರ್ನದ ಆ ಚಕ್ರವೆಂಬುದು ತಾನು ಒಂದಾನೊಂದು ಕಾಶ್ಮೀ ರವರ್ನದ ಕಾಂತಿಯಿಂದಿರುತಿಹುದು. ಅಂತಪ್ಪವರ್ನದ ದಳದಳದ ಆ ಚಕ್ರದಸುತ್ತು ವಳಯದಲ್ಲಿ ಹತ್ತೆಸಳುಗಳಿಂದೊಪ್ಪುತಿಹವು. ಅಂತಪ್ಪ ಹತ್ತೆಸಳುಗಳು (ಡಢಣ-ತಥದಧನ-ಪಫ) ಎಂಬ ದಶಾಕ್ಷರದ ಡಕಾರಾ ದಿ ಫಕಾರಾಂತ್ಯವಾದ ಹತ್ತಕ್ಷರಂಗಳೇ ಆ ದಳಂಗಳಲ್ಲಿ ಜೀವಸಾಕ್ಷರ ಸ್ವರೂಪನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹತ್ತಕ್ಷರದ ಅಧಿದೈ ವರುದ್ರನು ಇಷ್ಟರೊಡನೆ ಕೂಡಿಕೊಂಡಿರುವಂತಾದ್ದೊಂದು ಮಣಿಪೂ ರಕಚಕ್ರವು. ಆ ಚಕ್ರಕ್ಕೆ ಶ್ರೀರುದ್ರಮೂರ್ತಿಯೇ ಅಧಿಷ್ಠಾಯಕನಾ ಗಿರುತಿಹನು. ಅಂತಪ್ಪ ಶ್ರೀರುದ್ರಮೂರ್ತಿಯೆಂಬಧಿದೇವತೆಯು ಸುಷು ಪ್ತಾವಸ್ಥೆಯನ್ನು ಗಳಸ್ಥಾನದಲ್ಲಿರ್ದಾತ್ಮನು ಹೃತ್ಕಮಲಕರ್ಣಿಕಾಕುಹ ರಕ್ಕಿಳಿದುಬಂದಾಗ, ಚಿತ್ತ, ಪ್ರಾಣವಾಯು, ಪ್ರಕೃತಿಯೆಂಬ ಮೂರುತ ತ್ವಂಗಳೇ ಸಮಷ್ಟಿವ್ಯಷ್ಟಿಯಾಗಿನಿಂದು ಸ್ಥೂಲತನುವಿನಮರವೇ ಸೂಕ್ಷ್ಮ ತನುವಿನ ಅರುವುಗಳೇ ಹೊಯಿಲ್ಲದೊಂದಾನೊಂದು ಚರಣಾಯುಧಸಂಪ

ರಿದು ಮೆಯ್ಯುತಿರ್ಪವುರಿಗಳನೆಲ್ಲವನ್ನು ತನ್ನ ಪಕ್ಕದ ಮರೆಯಲ್ಲಡಗಿಸಿ ಕೊಂಡು ತಾನೊಂದೆಡೆಯಲ್ಲಿ ನಿದ್ರೈಸ್ವುಹಾಂಗೆ ಬಾಹ್ಯಾಭ್ಯಂತರ ಸಂಬಂಧವಾದ ಸಕಲಕರಣಂಗಳನ್ನು ತನ್ನಲ್ಲಡಗಿಸಿಕೊಂಡು ತಾನು ಮಾ ಯಾನಂದಭೋಗದಲ್ಲಿ ಪರವಶವನ್ನೈದಿರುವದೇ ಸುಷುಪ್ತ್ಯಾವಸ್ಥೆ. ಆ ಅ ವಸ್ಥೆಯಾಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪಾವಸ್ಥೆಯನ್ನು ಶಿಕಾರವೆಂಬ ಬೀಜಾಕ್ಷರದಿಂತಿಳಿದು ಇವೆಲ್ಲಾ ಲೋಕದಾತ್ಮರುಗಳಲ್ಲಿ ಪೂ ರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿತತ್ವಂಗಳಾಗಿ ಸಕಲಜೀವಾ ತ್ಮರುಗಳನ್ನು ಜನ್ಮಾಂತರಗತಿಗಳೊಳಗೆ ತಂದು ಸಹ್ಯರಿಸುವದಕ್ಕೆ ಕಾ ರಣವಾಗಿರುತಿಹುದು. ಇತ್ತ ಗುರುಕಾರುಣ್ಯಮಂಪಡೆದು ಲಿಂಗಾಂಗಸಂ ಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಅವೆಲ್ಲಾ ನಿವೃತ್ತಿಯಾಗಿ ಹೋಗಿ ಶಿಕಾರಷಡಕ್ಷರ ಸ್ವರೂಪವಾಗಿರುತಿಹುದು. ಅದು ಹ್ಯಾಗೆಂದೊ ಡೆ—ಆ ಚಕ್ರವೇ ಶಿಕಾರಪ್ರಣವಸ್ವರೂಪವಾದಲ್ಲಿ ಅಲ್ಲಿ ತೋರುವಂತ ವ ರ್ಣವೇ ಶಿಕಾರಪ್ರಣವದೊಳಗಣ ನಕಾರಪ್ರಣವಸ್ವರೂಪು. ಅಲ್ಲಿರುವಂ ತ ದಳಂಗಳೇ ಶಿಕಾರಪ್ರಣವುದೊಳಗಣ ಮಕಾರಪ್ರಣವುಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವಂತ ಅಕ್ಷರಂಗಳೇ ಶಿಕಾರಪ್ರಣವುದೊಳಗಣ ವಕಾರಪ್ರಣವಸ್ವರೂಪು. ಅಲ್ಲಿ ನೆಲಸಿರುವಂತ ಅಧಿದೇವತೆಯೇ ಶಿಕಾರ ಮಂತ್ರದೊಳಗಣ ಯಕಾರಪ್ರಣವುಸ್ವರೂಪು. ಅಲ್ಲಿ ಸಂಬಂಧವಾಗಿರು ವಂತ ಅವಸ್ಥೆಯೇ ಶಿಕಾರಪ್ರಣವುದೊಳಗಣ ಓಂಕಾರಪ್ರಣವಸ್ವರೂಪು. ಮಣಿಪೂರಕಚಕ್ರಸಂಬಂಧವಾದ ಷಡ್ವಿಧತತ್ವಂಗಳೆಲ್ಲವೂ ನಿವೃತ್ತಿಯಾ ಗಿ ಹೋಗಿ ಶಿಕಾರಷಡಕ್ಷರ ಮಂತ್ರಸ್ವರೂಪವಾಗಿರ್ಪವೆಂದೇ ತಿಳಿವುದು. ಈಪ್ರಕಾರದಿಂದ ಹೇಳಲ್ಪಟ್ಟೀಷಡ್ವಿಧವಿಚಾರವಿಡಿದು ಈ ಶಿಕಾರಷಡಕ್ಷ ರಮಂತ್ರಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ಶಿಕಾರಪ್ರಣವು ಮಂ ತ್ರಮೂರ್ತಿಯಾದ ಶಿವಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹ ವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿಯೆಂಬಲ್ಲಿ ಆ ವಿಚಾರದ ವಿಶಾಲ್ಯವು ತಾನೆಂತುಂಟಿಲೆ ಸ್ವಾಮಿಯೆಂದು ಬೆಸಗೊಂಡೊ ಡೆ—ಶಿಕಾರಮಂತ್ರಮೂರ್ತಿಯಾದ ಶಿವಲಿಂಗಕ್ಕೆ ಆ ಚಕ್ರವೇ ಪ್ರಣವು ಪೀಠದ ಗದ್ದುಗೆಯಾಗಿಯೂ, ಅಲ್ಲಿ ತೋರುವಂತ ವರ್ಣವೇ ನಂದದ ಕುಂಡದ ಸ್ವಯಂಜ್ಯೋತಿಪ್ರಕಾಶವಾಗಿಯೂ, ಅಳವಟ್ಟದೆರಡನೆಯ ವಿಚಾರವು. ಅಲ್ಲಿ ತೋರುವಂತ ದಳಂಗಳೇ ಇಂಡೆ ದಂಡೆ ಕುಸುಮಾ

ಲಂಕಾರಂಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತ ಅಕ್ಷರಂಗಳೇ ಶಿಕಾರಮಂತ್ರಮೂರ್ತಿಯಾದ ಶಿವಲಿಂಗವೆನೆಸಹುದಕ್ಕೆ (ಶೀಂ-ಶೀಂ-ಶೀಂ) ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯವಿಚಾರವು. ಅಲ್ಲಿ ನೆಲಸಿರುವಂತ ಅಧಿದೇವತೆಯೇ ಪ್ರಸಾದಿಯೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತ ಅವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯವಿಚಾರವು. ಈರೀತಿಯಲ್ಲಿ ಶಿಕಾರಷಡಕ್ಷರಮಂತ್ರಮೂರ್ತಿಸ್ವರೂಪವಾದ ಶಿವಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಅವಧಾನಭಕ್ತಿಯಿಂದ ಸರ್ವಾಚಾರಸಂಪತ್ತಿನಾಚರಣೆಯಲ್ಲಿ ಎಚ್ಚರಗುಂದದೆ ಅತ್ಯಂತ ಸುಮಿಧಾನಿಯಾಗಿ ಆಚರಿಸುವಂತಾದ್ದು ಅವಧಾನಭಕ್ತಿ. ತನುತ್ರಯಸಂಬಂಧವಾದ ರೂಪು, ರುಚಿ, ತೃಪ್ತಿಗಳನ್ನು ಇಷ್ಟಪ್ರಾಣಭಾವಲಿಂಗಂಗಳಿಗೆಸಮರ್ಪಿಸಿ, ಆ ಇಷ್ಟಪ್ರಾಣಭಾವಲಿಂಗಂಗಳ ಮುಖದಿಂದುಳುಮೆಯಾಗಿಬಂದ ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದತ್ರಯಂಗಳ ಪಡೆದನುಭವಿಸುವಂತಾದ್ದು ಅವಧಾನಭಕ್ತಿ. ಅಂತಪ್ಪ ಭಕ್ತಿಯಿಂದ ಮೂರನೆಯತತ್ವದಾದಿಯತಿಳಿದು ಮೂರನೆಯತತ್ವವೇ ಅಗ್ನಿತತ್ವ. ಆ ಅಗ್ನಿತತ್ವದ ಜನನಕ್ಕೆ ಮೂಲಾಧಾರಸ್ಥಾನವಾದ ದಕ್ಷಿಣದಿಕ್ಕಿನ ಸದಾಶಿವಮೂರ್ತಿಗೆ ಬಲದಭಾಗದಲ್ಲಿರುವಂತಾದ್ದೇ ದಕ್ಷಿಣದಿಕ್ಕು, ಅಂತಪ್ಪ ದಿಕ್ಕಿನಲ್ಲಿತೋರುವ ಅಘೋರಮುಖವನರಿಧು ಮೂರ್ತಿಸಾದಾಖ್ಯಸ್ವರೂಪವಾದ ಅಘೋರಮುಖವು ತಾನೇ ಇಲ್ಲಿ ಶಿವಶರಣನ ನೇತ್ರೇಂದ್ರಿಯದಲ್ಲಿ ಪರಮಪ್ರಕಾಶ ಸ್ವರೂಪವಾದ ಶಿವಲಿಂಗಸ್ವರೂಪಿನಿಂದ ವಾಸವಾಗಿಪ್ಪುದೆಂದು ತಿಳಿವುದು. ತೇಜಸತ್ವದುಷ್ಣವನ್ನು (ಕ್ಷುಧಾತೃಷ್ಣಾನಿದ್ರಾಲಸ್ಯಂಸಂಗಮೇವಚ) ಎಂಬ ಅಂಶಗುಣಗಳನ್ನು ಶಿವಯೋಗದಿಂಕೆಡಿಸಿ, ಶಿವಜ್ಞಾನ, ಶಿವಧ್ಯಾನ, ಶಿವಪೂಜೆ, ಶಿವವ್ರತ, ಶಿವಲಿಂಗ ಧಾರಣವೆಂಬ ಶಿವಯೋಗ ಪಂಚಕವನುಳ್ಳ ಶಿವಪ್ರಸಾದಿಗಳಿಗೆ ಅಗ್ನಿಯ ಅಂಶಗುಣಂಗಳು ನಷ್ಟವಾಗಿಪ್ಪವೆಂದರಿದು ಕಾಮ್ಯನಾಸ್ತಿಯಾಗಿ ಪಾವಕಮದವೆತ್ತಿದಲ್ಲಿ ಕಾಮ್ಯರಸಭರಿತನಾಗಿ ಕರಸಬೇಕು, ನೋಡಬೇಕು, ನುಡಿಸಬೇಕು, ಆಲಿಂಗಿಸಬೇಕು ಎನುತಿಹನೆಂಬ ಅಗ್ನಿಯ ಮದಗುಣವು ನಷ್ಟವಾಗಿಹೋಗಿ, ಪ್ರಸಾದಿಸ್ಥಲವನಂಗಂಗೊಂಡುದೀಗ ಇಷ್ಟರಸಾಧನದಿಂದ ಅಗ್ನಿಯ ಮದಗುಣ ಅಂಶಗುಣಂಗಳನಲಿದು ಚಿದಾ

ಗ್ನಿಸ್ವರೂಪನಿಂದ ಪ್ರಸಾದಿಗಂಗವಾಗಲು, ಅಂತಪ್ಪ ಪರಾತ್ಪರವಾದ ಶಿವಪ್ರಸಾದಿಸ್ಥಲವ ನೋಡಲುಮಾಡಿಕೊಂಡು ಆಚರಿಸುವಂತಾದ್ದು ತಾನೇ ನಿರಹಂಕಾರದನೆಲೆಯು. ಅಹಂಕಾರವಳಿದು ನಿರಹಂಕಾರವೆಂಬ ಕರಕಮಲಕ್ಕೆ ಪರಮಪ್ರಕಾಶ ಸ್ವರೂಪವಾದ ಶಿವಲಿಂಗವುಬಂದು ನೆಲೆಗೊಂಬಂತ ನಿಲುಕಡೆಯು ||೨೬|| ಆದಿಶಕ್ತಿಯ ಮಥನದಿಂದ (ಶಕ್ತಿಶ್ಚದ್ವಿವಿಧಾಪ್ರೋಕ್ತಾ) ಎಂದಾದಿಶಕ್ತಿಯೆಂಬಾಕೆಯು ಎರಡುತೆರನಾಗಿರುತಿಹಳು. ಅದು ಹ್ಯಾಗೆಂದೊಡೆ-ಲೋಕದಾತ್ಮರುಗಳಿಗೆ ಜಾತಿವರ್ಣಾಶ್ರಮ ಕುಲಗೋತ್ರ ಸೂತ್ರನಾಮಾಚಾರಗಳನ್ನೇ ಆದಿಯಮಾಡಿ ಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಭಕ್ತಿಜ್ಞಾನವೈರಾಗ್ಯವೆಂಬ ತ್ರಿವಿಧವನ್ನೇ ಆದಿಯಮಾಡಿಕೊಡುತಿಹಳು. ಕುಲವೆ ಶಿವಕುಲವಾಗಿಯೂ, ಗೋತ್ರವೆ ನಂದೀಶ್ವರನ ಗೋತ್ರವಾಗಿಯೂ, ಸಕಲ ಸದ್ಭಕ್ತಶರಣ ಜನಂಗಳೆ ತಂದೆತಾಯಿ ಬಂಧು ಬಳಗಂಗಳಾಗಿಯೂ ಅಳವಡಿಸಿಕೊಂಡು ಆಚರಿಸುವಂತಾ ಚರಣೆಯನ್ನೇ ಆದಿಯಮಾಡಿಕೊಡುತಿಹಳು. ಮತ್ತಂತುಮಲ್ಲದೆ ಪ್ರಾಣಾದಿ ವಾಯುಗಳೈದು ಆದಿಶಕ್ತಿಯ ಸ್ವರೂಪನಿಂದಿದ್ದಿತಾದಕಾರಣ ಆ ಆದಿಶಕ್ತಿಯ ಸ್ವರೂಪವಾದ ಪ್ರಾಣಾದಿ ವಾಯುಗಳೊಳಗೆ ಪ್ರಾಣವಾಯುವೇಸತ್ತು, ಅಪಾನವಾಯುವೆ ಚಿತ್ತು, ವ್ಯಾನವಾಯುವೆ ಆನಂದ, ಉದಾನವಾಯುವೇ ನಿತ್ಯ, ಸಮಾನವಾಯುವೇ ಪರಿಪೂರ್ಣವಾಗೀರೀತಿಯಲ್ಲಿ ಪಂಚಪ್ರಾಣವಾಯುಗಳೇ ಪಂಚಲಕ್ಷಣಸ್ವರೂಪನಿಂದ ನಿವೃತ್ತಿಯಾದುದೇ ಆದಿಶಕ್ತಿಯು. ಅಂತಪ್ಪಾದಿಶಕ್ತಿಯ ಮಥನದಿಂದುದಾನವಾಯುವನಿಲಿಸಿ ಉದಾನವಾಯುವೆಂಬುದು ತಾನು ಎಳೆಯ ಮಿಂಚಿನವರ್ನ, ಕಂಠಸ್ಥಾನದಲ್ಲಿರ್ದು ಸೀನುವ, ಕೆಮ್ಮುವ, ಕನಸುಕಾಣುವ, ಎಳಿಸುವ, ಚರ್ದಿನಿರೋಧನಂಗಳಂಮಾಡಿಸಿ ಅನ್ನರಸಾಹಾರಸ್ಥಾಪನಂಗೈಸುತ್ತಿಹುದೆಂದು ಹೇಳಿಸಿಕೊಂಬುವದೇ ಉದಾನವಾಯು. ಅಂತಪ್ಪ ವಾಯುವಿನ ಸ್ಥಾನಧರ್ಮಕರ್ಮವರ್ನಂಗಳನ್ನು ವಕಾರ ಮಂತ್ರದಿಂದೇ ತಡೆದು, ಅನಾಹತ ಚಕ್ರದ ಹೃದಯಸ್ಥಾನದಲ್ಲಿ ಒಂದಾನೊಂದು ಷಟ್ಕೋಣೆಯಾಕಾರದಿಂದೊಪ್ಪುವಂತಾದ್ದೇ ಅನಾಹತಚಕ್ರವು. ಅಂತಪ್ಪ ಚಕ್ರದ ಪೀತವರ್ನದ ಆ ಚಕ್ರವೆಂಬುವದು ತಾನೊಂದಾನೊಂದು ಹಳದಿವರ್ನದ ಕಾಂತಿಯಿಂದಿರುತಿಹುದು. ಅಂತಪ್ಪ ವರ್ನದ ದ್ವಾದಶ

ದಳದ ಆ ಚಕ್ರದ ಸುತ್ತುವಳಯದಲ್ಲಿ ಹನ್ನೆರಡೆಸಲುಗಳಿಂದೊಪ್ಪುತಿಹುದು. ಅಂತಪ್ಪ ಹನ್ನೆರಡೆಸಲುಗಳ (ಕಖ-ಗಘ-ಙ, ಚಛ-ಜಝ-ಞ, ಟಠ)ಎಂಬದ್ವಾದಶಾಕ್ಷರದ ಕಕಾರಾದಿ ಠಕಾರಾಂತ್ಯಮಾದ ಹನ್ನೆರಡಕ್ಷರಂಗಳೇ ಆ ದಳಗಳಲ್ಲಿ ಜೀವನಾಕ್ಷರಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹನ್ನೆರಡಕ್ಷರದಧಿದೈವ ಈಶ್ವರಮೂರ್ತಿಯೇ ಅಷ್ಟಕೊಡನೆ ಕೂಡಿಕೊಂಡಿರುವನು. ಆ ಚಕ್ರಕ್ಕೆ ಈಶ್ವರಮೂರ್ತಿಯೇ ಅಧಿಷ್ಠಾಯಕನಾಗಿರುತಿಹನು. ಅಂತಪ್ಪ ಈಶ್ವರನೆಂಬ ಅಧಿದೇವತೆಯು ತುರ್ಯಾವಸ್ಥೆಯನ್ನು ಹಲವುಮುಖವಾದ ದಿವ್ಯಾನಂದದ ಮೇಲಣಿಚ್ಛೆಯೇ ತುರ್ಯಾವಸ್ಥೆಯು. ಆ ಅವಸ್ಥೆಯೇ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪಾವಸ್ಥೆಯನ್ನು ವಕಾರವೆಂಬ ಬೀಜಾಕ್ಷರದಿಂ ತಿಳಿದು, ಇವೆಲ್ಲಾ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿತತ್ವಗಳಾಗಿ ಸಕಲ ಜೀವರುಗಳನ್ನು ಜನ್ಮಾಂತರಗತಿಗಳೊಳಗೆತಂದು ಸಹ್ಮರಿಸುವದಕ್ಕೆ ಕಾರಣವಾಗಿರುತಿಹವು. ಇತ್ತ ಗುರುಕಾರುಣ್ಯವಪಡೆದು ಲಿಂಗಾಂಗ ಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಅವೆಲ್ಲಾ ನಿವೃತ್ತಿಯಾಗಿಹೋಗಿ, ವಕಾರ ಷಡಕ್ಷರಮಂತ್ರಸ್ವರೂಪವಾಗಿರುತಿಹವು. ಅದು ಹ್ಯಾಗೆಂದೊಡೆ—ಆ ಚಕ್ರವೇ ವಕಾರಪ್ರಣಮ ಸ್ವರೂಪವಾದಲ್ಲಿ ಅಲ್ಲಿ ತೋರುವಂತ ವರ್ನವೇ ವಕಾರದೊಳಗಣ ನಕಾರ ಪ್ರಣಮ ಸ್ವರೂಪು, ಅಲ್ಲಿ ತೋರುವಂತ ದಳಂಗಳೇ ವಕಾರಪ್ರಣಮದೊಳಗಣ ಮಕಾರ ಪ್ರಣವಸ್ವರೂಪು, ಆ ದಳಂಗಳಲ್ಲಿ ನ್ಯಾಸವಾಗಿರುವಂತ ಅಕ್ಷರಂಗಳೇ ವಕಾರಪ್ರಣಮದೊಳಗಣ ಶಿಕಾರಪ್ರಣಮಸ್ವರೂಪು, ಅಲ್ಲಿ ನೆಲಸಿರುವಂತಧಿದೇವತೆಯೇ ವಕಾರ ಪ್ರಣಮದೊಳಗಣ ಯಕಾರ ಪ್ರಣಮಸ್ವರೂಪು. ಅಲ್ಲಿ ಸಂಬಂಧವಾಗಿರುವಂತವಸ್ಥೆಯೇ ವಕಾರ ಪ್ರಣಮದೊಳಗಣ ಓಂಕಾರ ಪ್ರಣಮಸ್ವರೂಪವಾಗೀರೀತಿಯಲ್ಲಿ ಅನಾಹತಚಕ್ರ ಸಂಬಂಧವಾದ ಷಡ್ವಿಧ ತತ್ವಂಗಳೆಲ್ಲವೂ ನಿವೃತ್ತಿಯಾಗಿಹೋಗಿ, ವಕಾರ ಷಡಕ್ಷರಮಂತ್ರ ಸ್ವರೂಪವಾಗಿರ್ಪವೆಂದೇ ಅರಿವುದು. ಈ ಪ್ರಕಾರದಿಂದ ಹೇಳಲ್ಪಟ್ಟಂತೀಷಡ್ವಿಧ ವಿಚಾರವಿಡಿದು ಈ ವಕಾರ ಷಡಕ್ಷರಮಂತ್ರ ಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ವಕಾರ ಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ, ಆ

ವಿಚಾರದ ವಿಶಾಲ್ಯವು ತಾನೆಂತುಟಲೆಸ್ವಾಮಿಯೆಂದು ಬೆಸಗೊಂಡೊಡೆ, ವಕಾರ ಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಆ ಚಕ್ರವೇ ಪ್ರಣವ ಪೀಠದ ಗದ್ದುಗೆಯಾಗಿ, ಅಲ್ಲಿ ತೋರುವಂತ ವರ್ಣವೇ ನಂದದ ಕುಂಡದ ಸ್ವಯಂಜ್ಯೋತಿ ಪ್ರಕಾಶವಾಗಿ ಅಳವಟ್ಟದೆರಡನೆಯ ವಿಚಾರವು. ಅಲ್ಲಿ ತೋರುವಂತ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂಗಳಾಗಿ ಆ ದಳಗಳಲ್ಲಿ ನ್ಯಾಸವಾಗಿರುವಂತಕ್ಷರಂಗಳೇ ವಕಾರಮಂತ್ರಮೂರ್ತಿಯಾದ ಜಂಗಮಲಿಂಗವನ್ನು ಸೆನಹುದಕ್ಕೆ (ವಾಂ ವಾಂ ವಾಂ) ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟದೇ ನಾಲ್ಕನೆಯ ವಿಚಾರವು. ಅಲ್ಲಿ ನೆಲಸಿಹುವಂತಧಿದೇವತೆಯೇ ಪ್ರಾಣಲಿಂಗಿಯೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟದೇ ಆರನೆಯ ವಿಚಾರವು. ಈರೀತಿಯಲ್ಲಿ ವಕಾರಷಡಕ್ಷರಮಂತ್ರಸ್ವರೂಪವಾದ ಷಷ್ಠ್ಯಾಥತತ್ವಂಗಳೆಲ್ಲವೂ ವಕಾರಮಂತ್ರಮೂರ್ತಿಯಾದ ಜಂಗಮಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ ಅನುಭಾವಭಕ್ತಿಯಿಂದ ಭಕ್ತನಾದೊಡೆ ಭಕ್ತಿಯದಾಸೋಹಂಯುಕ್ತನಾದೊಡೆ ಮುಕ್ತಿಯ ದಾಸೋಹವೈಕ್ಯನಾದೊಡೆ ಮುಕಾರದ ದಾಸೋಹನೆಂದು ಸರ್ವರಲ್ಲಿಯೂ ದಾಸೋಹವೇ ಇರಬೇಕು. ದಾಸೋಹವಿಲ್ಲದವರನ್ನು ಮೆಚ್ಚ, ನಮ್ಮ ಕೂಡಲಸಂಗಮದೇವ ಎಂದು ಹೇಳುತಿಹುದಾದಕಾರಣ ಶಿವಶರಣರುಗಳಿಗೆ ಶಿವಾನುಭಾವವನ್ನು ಬೋಧಿಸುವಂತಾದ್ದು ಅನುಭಾವಭಕ್ತಿಯು. ಅಂತರಂಗಬಹಿರಂಗದಲ್ಲಿ ಇಷ್ಟಪ್ರಾಣಭಾವಲಿಂಗವ ಸಂಬಂಧವಮಾಡಿಕೊಂಡು ಜ್ಞಾನಕ್ರಿಯೆಗಳನ್ನು ವಿಡಿದು ಆಚರಿಸುವಂತಾದ್ದು ಅನುಭಾವಭಕ್ತಿ. ಅಂತಪ್ಪ ಭಕ್ತಿಯಿಂದ ನಾಲ್ಕನೆಯ ತತ್ವವಾದಿಯನರಿದು ನಾಲ್ಕನೆಯತತ್ವವೇ ವಾಯುತತ್ವ. ಆ ವಾಯುತತ್ವಜನನಕ್ಕೆ ಮೂಲಾಧಾರಸ್ಥಾನವಾದ ಪೂರ್ವದಿಕ್ಕಿನ ಆ ಸದಾಶಿವಮೂರ್ತಿಗೆ ಮುಂಭಾಗವೆಲ್ಲಿರ್ಪುದೇ ಪೂರ್ವದಿಕ್ಕು. ಅಂತಪ್ಪದಿಕ್ಕಿನಲ್ಲಿ ತೋರುವ ತತ್ಪುರುಷಮುಖವನರಿದು ಆ ಮೂರ್ತಿ ಸಾದಾಖ್ಯಸ್ವರೂಪವಾದ ತತ್ಪುರುಷಮುಖವು ತಾನೇ ಇಲ್ಲಿ ಶಿವಶರಣನ ತ್ವಗಿಂದ್ರಿಯದಲ್ಲಿ ಯಜನಸ್ವರೂಪವಾದ ಚರಲಿಂಗಸ್ವರೂಪಿನಿಂದ ವಾಸವಾಗಿರ್ಪುದೆಂದೇ ತಿಳಿವುದು. ವಾಯುವಿನ ಚಲನೆಯೆಂನು (ಧಾವನಂವಲ್ಗನಂಚೈವ ಕುಂಚನಂಚಪ್ರಚಾರಣಂ । ವಿಯೋಗಶ್ಚ ಇತಿಜ್ಞೇಯಂ ವಾ

ಯೋಃಪಂಚಗುಣಾಸ್ಸ್ಮೃತಾಃ||) ಎಂಬ ಅಂಶಗುಣಂಗಳನ್ನು ಪರಿಪೂರ್ಣ ತ್ವದಿಂಕೆಡಿಸಿ ಮಲತ್ರಯವಿದೂರನಾಗಿ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನ ನಾಗಿ, ದೇಶ ಗ್ರಾಮ ನಿಲಯ ಬಂಧನಂಗಳಿಲ್ಲದೆ ಎಲ್ಲಾದೇಶ, ಎಲ್ಲಾ ಗ್ರಾಮ, ಎಲ್ಲಾಭಕ್ತರನ್ನೂ ಒಂದೇಸಮಾನಂಗಂಡು, ತನ್ನ ತಟ್ಟಿದವ ರನ್ನೂ, ಮುಟ್ಟಿದವರನ್ನೂ, ಕಂಡವರನ್ನೂ, ಕೇಳಿದವರನ್ನೂ ಅರಿದು ಭಕ್ತಿಯಮಾಡಿದವರನೆಲ್ಲಾ ಕೃತಾರ್ಥರಂ ಮಾಡುತ್ತ ಜಗತ್ಪಾವನಮೂ ರ್ತಿಯಾಗಿ ಆಚರಿಸುವಂತ ಪರಿಪೂರ್ಣ ಜಂಗಮಸ್ಥಳದ ಆಚರಣೆಯನು ಳ್ಳ ಶಿವಪ್ರಾಣಲಿಂಗಿಗಳಿಗೆ ವಾಯುವಿನ ಅಂಶಗುಣಂಗಳು ನಷ್ಟವಾಗಿರ್ಪ ವೆಂದರಿದು ಗಮನನಾಸ್ತಿಯಾಗಿ, ಪವನಮದಪೆತ್ತಿದಲ್ಲಿ ಪ್ರಮಾಣಭರಿತ ನಾಗಿ ಹೋದೆಹೆ, ಕೊಂಡೆಹೆ ಕೊಟ್ಟೆನೆನೆನುತಿಹನೆಂಬ ವಾಯುವಿನ ಮ ದಗುಣವು ನಷ್ಟವಾಗಿಹೋಗಿ ಪ್ರಾಣಲಿಂಗಿಸ್ಥಲವನಂಗಂಗೊಂಡುದೀಗ ಇಷ್ಟರಸಾಧನದಿಂದೇ ವಾಯುವಿನ ಮದಗುಣ ಅಂಶಗುಣಂಗಳಳಿದು ಚಿದ್ವಾಯುಸ್ವರೂಪಿನಿಂದೆ ಪ್ರಾಣಲಿಂಗಿಗಂಗವಾಗಲು, ಅಂತಪ್ಪ ಪರಾ ತ್ಪರವಾದ ಶಿವಪ್ರಾಣಲಿಂಗಿಯಸ್ಥಲವ ನೋಡಲುಃಮಾಡಿಕೊಂಡು ಆಚರಿ ಸುವಂತಾದ್ದುತಾನೇ ಸುಮನದನೆಲೆ. ಕುಮನವಳಿದು ಸುಮನವೆಂಬ ಕರಕಮಲಕ್ಕೆ ಯಜನಸ್ವರೂಪವಾದ ಚರಲಿಂಗವು ಬಂದು ನೆಲೆಗೊಂ ಬಂತ ನಿಲುಕಳೆಯೆಂಬುದರ್ಥ ||೭೭|| ಪರಶಕ್ತಿಯ ಮಥನದಿಂದ (ಶ ಕ್ತಿಶ್ಚದ್ವಿವಿಧಾಪ್ರೋಕ್ತಾ) ಎಂದು ಪರಶಕ್ತಿ ಎರಡುತೆರನಾಗಿರುತಿಹಳು. ಅದು ಹ್ಯಾಗೆಂದೊಡೆ, ಲೋಕದಾತ್ಮರುಗಳಿಗೆ ಇಂದ್ರಿಯವಿಷಯ ಪ್ರ ಪಂಚವನೇ ಪರವಶಮಾಡಿಕೊಡುತಿಹಳು. ಇತ್ತ ಗುರುಕಾರುಣ್ಯವ ಪಡೆ ದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಶರಣ ನೇ ಸತಿಯಾಗಿ, ಲಿಂಗವೇಪತಿಯಾಗಿ, ಇಂದ್ರಿಯಗಳೇ ಲಿಂಗೇಂದ್ರಿಯ ಗಳಾಗಿ, ವಿಷಯಗಳೆಲ್ಲಾ ಲಿಂಗಪ್ರಸಾದವಾಗಿ ಅಳವಡಿಸಿಗೊಂಡು ಆ ಚರಿಸುವಂತಾಚರಣೆಯನೇ ಪರವಶಮಾಡಿಕೊಡುತಿಹಳು. ಮತ್ತಂತು ಮಲ್ಲದೆ ಮನಸಾದಿ ಕರಣಂಗಳೈದು ಪರಶಕ್ತಿಯಸ್ವರೂಪಿನಿಂದಿದ್ದಿತಾದ ಕಾರಣ, ಆ ಪರಶಕ್ತಿಯ ಸ್ವರೂಪವಾದ ಮನಸಾದಿ ಕರಣಂಗಳೊಳಗೆ ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನೆ, ಚಿತ್ತದಲ್ಲಿ ಶಿವದಾಸೋ ಹಮಹಂಕಾರದಲ್ಲಿ ನಿರಹಂಕಾರ, ಅಜ್ಞಾನವಳಿದು ಸುಜ್ಞಾನವಾಗಿ ಮಾನ ಸಾದಿ ಕರಣಂಗಳೈದು ನಿವೃತ್ತಿಯಾದುದೇ ಪರಶಕ್ತಿ. ಅಂತಪ್ಪ ಪರಶ

ಕ್ತಿಯ ಮಥನದಿಂದೇ ಸಮಾನವಾಯುವನಿಲಿಸಿ, ಸಮಾನವಾಯುವೇ ನೀಲವರ್ಣ, ನಾಭಿಸ್ಥಾನದಲ್ಲಿದ್ದು ಆಪಾದಮಸ್ತಕ ಪರ್ಯಂತರ ಸತ್ವಾಪ್ರ ಣಿಸಿಕೊಂಡು ಆತ್ಮನುಕೊಂಡಂತನ್ನರಸಮಂ ಎಲ್ಲಾ ರೋಮನಾಳಂಗ ಳಿಗೆ ಅಂಚಿಹಾಕುತ್ತಿಹುದು ಎಂದು ಹೇಳಿಸಿಕೊಂಬುತಿಹುದೇ ಸಮಾನ ವಾಯುವು. ಅಂತಪ್ಪ ಸಮಾನವಾಯುವಿನ ಸ್ಥಾನಧರ್ಮಕರ್ಮವರ್ಣಂಗ ಳನ್ನು ಯಕಾರಮಂತ್ರದಿಂದ ತಡೆದು ವಿಶುದ್ಧಿಚಕ್ರದ ಗಳಸ್ಥಾನದಲ್ಲಿ ಒಂದಾನೊಂದು ಮೃದಂಗದಾಕಾರದಿಂದೊಪ್ಪುವಂತಾದ್ದೇ ವಿಶುದ್ಧಿಚ ಕ್ರವು. ಅಂತಪ್ಪ ಚಕ್ರದ ಸ್ವೇತವರ್ಣದ ಆಚಕ್ರವೆಂಬುದು ತಾನೊಂ ದಾನೊಂದು ಧವಳವರ್ಣದ ಕಾಂತಿಯಿಂದಿರುತಿಹುದು. ಅಂತೊಪ್ಪುವ ವರ್ಣದ ಷೋಡಶದಳದ ಆ ಚಕ್ರದ ಸುತ್ತುವಳಯದಲ್ಲಿ ಹದಿನಾರೆಸಲು ಗಳಿಂದೊಪ್ಪುತಿಹುದು. ಅಂತಪ್ಪ ಹದಿನಾರೆಸಲುಗಳಲ್ಲಿ (ಅಆ-ಇಈ-ಉ ಊ-ಋೠ-ಌೡ-ಎಐ-ಒಔ-ಅಂಅಃ) ಎಂಬ ಷೋಡಶಾಕ್ಷರದ ಅ ಕಾರಾದಿ ಅಃಕಾರಾಂತ್ಯವಾದ ಹದಿನಾರಕ್ಷರಂಗಳೇ ಆ ದಳಂಗಳಲ್ಲಿ ಜೀ ವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತಪ್ಪ ಹದಿನಾರಕ್ಷ ರದ ಅಧಿದೈವ ಸದಾಶಿವನ ವಿಷ್ಟರೊಡನೆ ಕೂಡಿರುವಂತಾದ್ದೇ ಒಂದು ವಿಶುದ್ಧಿಚಕ್ರವು. ಆ ಚಕ್ರಕ್ಕೆ ಸದಾಶಿವಮೂರ್ತಿ ಅಧಿಷ್ಠಾಯಕನಾ ಗಿರುತಿಹನು. ಅಂತೊಪ್ಪುವ ಸದಾಶಿವನೆಂಬ ಅಧಿದೇವತೆಯು ಅತೀತಾ ವಸ್ಥೆಯನು ನಿಬ್ಬೆರಗಾಗಿನಿಂದ ಏನೂಯಿಲ್ಲವೆಂಬ ಕೋರಿಕೆಯೇ ಅತೀ ತಾವಸ್ಥೆಯು. ಆ ಅವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತಿಹು ದು. ಅಂತಪ್ಪಾವಸ್ಥೆಯನ್ನು ಯಕಾರವೆಂಬ ಬೀಜಾಕ್ಷರದಿಂತಿಳಿದು ಆ ವೆಲ್ಲಾ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿತತ್ವಂಗಳಾಗಿ ಸಕಲಜೀವರುಗಳನ್ನು ಜನ್ಮಾಂತರಗತಿಗಳೊಳಗೆ ತಂದು ಸಹ್ಮರಿಸುವುದಕ್ಕೆ ಕಾರಣವಾಗಿರುತಿಹವು. ಇತ್ತ ಗುರುಕಾ ರುಣ್ಯಮಂಪಡೆದು ಲಿಂಗಾಂಗಸಂಬಂಧಿಗಳಾಗಿ ಆಚರಿಸುವಂತ ಶಿವಶರ ಣರುಗಳಿಗಿವೆಲ್ಲಾ ನಿವೃತ್ತಿಯಾಗಿಹೋಗಿ, ಯಕಾರಷಡಕ್ಷರಮಂತ್ರ ಸ್ವ ರೂಪವಾಗಿರುತಿಹವು. ಅದು ಹ್ಯಾಗೆಂದೊಡೆ, ಆ ಚಕ್ರವೇ ಯಕಾರ ಪ್ರಣವಸ್ವರೂಪವಾದಲ್ಲಿ ಅಲ್ಲಿ ತೋರುವಂತ ವರ್ಣವೇ ಯಕಾರಪ್ರಣವ ದೊಳಗಣ ನಕಾರಪ್ರಣವಸ್ವರೂಪು. ಅಲ್ಲಿರುವಂತ ದಳಗಳೇ ಯಕಾ ರಪ್ರಣವದೊಳಗಣ ಮಕಾರಪ್ರಣವಸ್ವರೂಪು. ಆ ದಳಂಗಳಲ್ಲಿ ನ್ಯಾ

ಸವಾಗಿರುವಂತಕ್ಷರಂಗಳೇ ಯಕಾರಪ್ರಣವದೊಳಗಣ ಶಿಕಾರಪ್ರಣವ ಸ್ವರೂಪು. ಅಲ್ಲಿನೆಲಸಿರುವಂತಧಿದೇವತೆಯೇ ಯಕಾರಪ್ರಣವದೊಳಗೆ ಣ ವಕಾರಪ್ರಣವಸ್ವರೂಪು. ಅಲ್ಲಿ ಸಂಬಂಧವಾಗಿರುವಂತವಸ್ಥೆಯೇ ಯಕಾರದೊಳಗಣ ಓಂಕಾರಪ್ರಣವಸ್ವರೂಪವಾಗಿ ವಿಶುದ್ಧಿಚಕ್ರ ಸಂ ಬಂಧವಾದ ಷಡ್ವಿಧತತ್ವಂಗಳೆಲ್ಲವೂ ನಿವೃತ್ತಿಯಾಗಿ ಹೋಗಿ, ಯಕಾರ ಷಡಕ್ಷರಮಂತ್ರಸ್ವರೂಪವಾಗಿರುತಿರ್ಪವೆಂದೇ ತಿಳಿವುದು. ಈ ಪ್ರಕಾರ ದಿಂದ ಹೇಳಲ್ಪಟ್ಟಂತೀ ಷಡ್ವಿಧವಿಚಾರವಿದಿದು ಈ ಯಕಾರಮಂತ್ರಸ್ವ ರೂಪವಾದ ಷಡ್ವಿಧತತ್ವಂಗಳೆಲ್ಲವೂ ಯಕಾರಮಂತ್ರಮೂರ್ತಿಯಾದ ಪ್ರಸಾದ ಲಿಂಗಮೂರ್ತಿಗಾಚಕ್ರವೇ, ಪ್ರಣವಪೂಜೋಪಕರಣಂಗಳಾ ಗಿ ಅಳವಟ್ಟಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರ ಹಿಸಿ, ಆ ವಿಚಾರದ ವಿಶಾಲ್ಯವು ತಾನೆಂತಪ್ಪುದೆಂದು ಬೆಸಗೊಂ ಡೊಡೆ, ಯಕಾರಮಂತ್ರಮೂರ್ತಿಯಾದ ಪ್ರಸಾದಲಿಂಗಕ್ಕೆ ಆ ಚಕ್ರವೇ ಪ್ರಣವಪೀಠದ ಗದ್ದುಗೆಯಾಗಿ ಅಲ್ಲಿ ತೋರುವಂತ ವರ್ಣವೇ ಸಂದಡ ಕುಂದದ ಸ್ವಯಂಜ್ಯೋತಿಪ್ರಕಾಶವಾಗಿ ಅಳವಟ್ಟುದೆರಡನೆಯ ವಿಚಾರ ವು. ಅಲ್ಲಿ ತೋರುವಂತ ದಳಂಗಳೇ ಇಂಡೆ ದಂಡೆ ಕುಸುಮಾಲಂಕಾರಂ ಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಕ್ಷರಂಗಳೇ ಯಕಾರಮಂ ತ್ರಮೂರ್ತಿಯಾದ ಪ್ರಸಾದಲಿಂಗವನ್ನು ನೆನವುದಕ್ಕೆ (ಯಾಂ ಯಾಂ ಯಾಂ) ಎಂಬ ಮಂತ್ರಾಕ್ಷರವಾಗಳವಟ್ಟುದೇ ನಾಲ್ಕನೆಯ ವಿಚಾರವು. ಅಲ್ಲಿ ನೆಲಸಿರುವಂತಧಿದೇವತೆಯೇ ಶರಣನೆಂಬ ಪೂಜಾರಿಯಾಗಿ ಅಲ್ಲಿ ಸಂಬಂಧವಾಗಿರುವಂತವಸ್ಥೆಯೇ ಘನಲಿಂಗಾವಸ್ಥೆಯಾಗಿ ಅಳವಟ್ಟುದೇ ಆರನೆಯ ವಿಚಾರವು. ಈ ರೀತಿಯೆಲ್ಲಿ ಯಕಾರ ಷಡಕ್ಷರಮಂತ್ರಸ್ವ ರೂಪವಾದ ಷಡ್ವಿಧತತ್ವಂಗಳೆಲ್ಲವೂ ಯಕಾರ ಮಂತ್ರಮೂರ್ತಿಯಾದ ಪ್ರಸಾದಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಹೆನೆಂಬ ಕೃತನಿ ಶ್ಚಯಭಾವವನ್ನು ತನ್ನೊಳಗೆಗ್ರಹಿಸಿ ಆನಂದಭಕ್ತಿಯಿಂದ ಶರಣನೇ ಸ ತಿ, ಲಿಂಗವೇ ಪತಿಯೆಂಬಭಾವದಿಂದ ಸಕಲಪದಾರ್ಥಗಳನ್ನು ಲಿಂಗಕ್ಕ ರ್ಪಿಸಿ, ಆ ಲಿಂಗಪ್ರಸಾದವನ್ನು ಪಡೆದನುಭವಿಸಿ ಪರಮಪರಿಣಾಮಿಯಾ ಗಿರುವಂತಾದ್ದೇ ಆನಂದಭಕ್ತಿಯು. ಅಂತಪ್ಪ ಭಕ್ತಿಯಿಂದೈದನೆಯ ತತ್ವದಾದಿಯನರಿದು ಐದನೆಯತತ್ವವೇ ಆಕಾಶತತ್ವ, ಆ ಆಕಾಶತತ್ವದ ಜನನಕ್ಕೆ ಮೂಲಾಧಾರಸ್ಥಾನವಾದೂರ್ಧ್ವದಿಕ್ಕಿನ ಸದಾಶಿವಮೂರ್ತಿ

ಗೆ ಮೇಲುಭಾಗದಲ್ಲಿರ್ಪುದೇ ಊರ್ಧ್ವದಿಕ್ಕು, ಅಂತಪ್ಪ ದಿಕ್ಕಿನಲ್ಲಿ ತೋ ರುವಂತ ಈಶಾನ್ಯಮುಖವೆನರಿದು ಶಿವಸಾದಾಖ್ಯಸ್ವರೂಪವಾದ ಈಶಾನ್ಯ ಮುಖವುತಾನೇ ಇಲ್ಲಿ ಶಿವಶರಣನ ಶ್ರವಣೇಂದ್ರಿಯದಲ್ಲಿ ಈಳನಸ್ವರೂಪ ವಾದ ಪ್ರಸಾದಲಿಂಗಸ್ವರೂಪಿನಿಂದ ವಾಸವಾಗಿರ್ಪುದೆಂದೇ ತಿಳಿವುದು. ಆ ಕಾಶತತ್ವದ ಭ್ರಮೆಯೆನಿಪ ರಾಗ, ದ್ವೇಷ, ಭಯ, ಲಜ್ಜೆ, ಮೋಹವೆಂಬ ಅಂಶಗುಣಗಳನ್ನು ಪರಿಣಾಮದಿಂತಿಳಿದು, ಲಿಂಗಾಣತಿಯಿಂದ ಅಂಬಲಿ ಯೇಬರಲಿ, ಅಮೃತವೇಬರಲಿ, ಕಂಬಳಿಯೇಬರಲಿ, ಕಡುಸಣ್ಣವಾದ ಧೋತ್ರಂಗಳೇಬರಲಿ ಲಿಂಗಕ್ಕೆಕೊಟ್ಟು ಆ ಲಿಂಗಪ್ರಸಾದವನವಿದು ಆನಂ ದಿಸುವಂತಾದ್ದೇ ಶಿವಶರಣರುಗಳಿಗೆ ಆಕಾಶದ ಅಂಶಗುಣಂಗಳು ನಷ್ಟ ವಾಗಿರ್ಪವೆಂದರಿವುದು. ಕರ್ಮನಾಸ್ತಿಯಾಗಿ ಅಸಿ, ಮಸಿ, ಕೃಷಿ, ವಾ ಣಿಜ್ಯ, ಯಾಚ್ನ, ಸೇವಾ ಷಟ್ಕೃಷಿವ್ಯಾಪಾರಂಗಳನ್ನು ಮಾಡುವಂತ ಧುಷ್ಕೃತ್ಯವು ನಷ್ಟವಾಗಿಹೋಗಿ ಅಂಬರಮದವೆತ್ತಿದಲ್ಲಿ ವಾಹನಭರಿ ತನಾಗಿ ಆನೆಬೇಕು, ಕುದುರೆಬೇಕು, ಅಂದಳವೆಬೇಕು, ಸೇನೆದಳತಂತ್ರ ಛತ್ರಿಚಾಮರಂಗಳಂ ಬಯಸುತ್ತಿಹನೆಂಬ ಆಕಾಶದ ಮದಗುಣವು ನಷ್ಟ ವಾಗಿಹೋಗಲು, ಶರಣಸ್ಥಲವೆನಂಗಂಗೊಂಡುದೀಗ ಇಷ್ಟರಸಾಧನದಿಂ ದ ಆಕಾಶದ ಮದಗುಣ ಅಂಶಗುಣಂಗಳನಳಿದು ಚಿದಾಕಾಶಸ್ವರೂಪಿನಿಂ ದ ಶರಣಂಗಂಗವಾಗಲು, ಅಂತಪ್ಪ ಪರಾತ್ಪರವಾದ ಶಿವಶರಣಸ್ಥಲವ ನೊ ಡಲುಮಾಡಿಕೊಂಡು ಆಚರಿಸುವಂತಾದ್ದುತಾನೇ ಸುಜ್ಞಾನದನೆಲೆ, ಅಜ್ಞಾನ ವಳಿದು ಸುಜ್ಞಾನವೆಂಬ ಕರಕಮಲಕ್ಕೆ ಈಳನಸ್ವರೂಪವಾದ ಪ್ರಸಾದ ಲಿಂಗವುಬಂದು ನೆಲೆಗೊಂಬಂತ ನಿಲುಕಡೆಯು ||೭೮|| ಚಿಚ್ಛಕ್ತಿಯ ಮ ಥನದಿಂದ (ಶಕ್ತಿಶ್ಚದ್ವಿವಿಧಾಪ್ರೋಕ್ತಾ) ಎಂದು ಹೇಳುತಿಹುದಾದಕಾರ ಣ, ಚಿಚ್ಛಕ್ತಿಯೆರಡುತೆರನಾಗಿರುತಿಹಳು. ಅದುಹ್ಯಾಗೆಂದೊಡೆ-ಲೋಕ ದಾತ್ಮರುಗಳಲ್ಲಿ ದೇಹಮೋಹವೆಂದುಲಿವ ಮೂಲಾಹಂಕಾರವನುಂಟುಮಾ ಡಿ ಕೊಡುತಿಹಳು. ಇತ್ತ ಗುರುಕಾರುಣ್ಯಮಂಪಡೆದು ಲಿಂಗಾಂಗಸಂಬಂ ಧಿಗಳಾಗಾಚರಿಸುವಂತ ಶಿವಶರಣರುಗಳಿಗೆ, ತಮ್ಮ ನಿಜವನರಿವಂತಮೂ ಲಜ್ಞಾನವನ್ನುಂಟುಮಾಡಿ ಕೊಡುತಿಹಳು. ಮತ್ತಂತುಮಲ್ಲದೆ ಮೇಲಣ ಭಾವಾದಿಕರಣಂಗಳೈದು ಚಿಚ್ಛಕ್ತಿಯಸ್ವರೂಪಿನಿಂದಿದ್ದಿತಾದಕಾರಣ, ಆ ಚಿಚ್ಛಕ್ತಿಯ ಸ್ವರೂಪವಾದ ಮೇಲಣ ಭಾವಾದಿಕರಣಂಗಳೊಳಗೆ ಭಾವ ವೇಭಕ್ತಿ,ಚಿತ್ತವೇ ಹಸ್ತ, ಮನವೇ ಲಿಂಗ, ಹೃದಯವೇ ಮುಖ, ಪರಿಣಾ

ಮವೇ ಪದಾರ್ಥವಾಗಿ ಮೇಲಣ ಭಾವಾದಿ ಕರಣಂಗಳೈದು ನಿವೃತ್ತಿಯಾ
ದುದೇ ಚಿಚ್ಛಕ್ತಿಯು. ಅಂತಪ್ಪ ಚಿಚ್ಛಕ್ತಿಯ ಮಥನದಿಂದ ನಾಗ,
ಕೂರ್ಮ, ಕೃಕರ, ದೇವದತ್ತ, ಧನಂಜಯವೆಂಬ ಪಂಚವಾಯುವ ನಿಲಿ
ಸಿ, ಐದುಪ್ರಕಾರವಾದ ಮೂರುತಂಗಳ ಸ್ಥಾನ ಧರ್ಮ ಕರ್ಮ ವರ್ಣಂ
ಗಳನ್ನು ಓಂಕಾರಮಂತ್ರದಿಂದ ತಡೆದು ಆಜ್ಞಾಚಕ್ರದ ಭ್ರೂಕುಟಿಸ್ಥಾನದ
ಲ್ಲಿ ಒಂದಾನೊಂದು ದರ್ಪಣಾಕಾರದಿಂದ ಬಟ್ಟತ್ತಾಗೊಪ್ಪುವಂತಾದ್ದೇ
ಆಜ್ಞಾಚಕ್ರವು. ಅಂತಪ್ಪ ಚಕ್ರದ ಮಾಣಿಕ್ಯವರ್ಣದ ಆ ಚಕ್ರವೆಂಬು
ವದು ತಾನೊಂದಾನೊಂದು ಜ್ಯೋತಿವರ್ಣದ ಕಾಂತಿಯಿಂದಿರುತಿಹುದು.
ಅಂತಪ್ಪ ವರ್ಣದ ದ್ವಿದಳದ ಆ ಚಕ್ರದಸುತ್ತುವಳಯದಲ್ಲಿ ಎರಡೆಸಲು
ಗಳಿಂದೊಪ್ಪುತಿಹುದು. ಅಂತಪ್ಪೆರಡೆಸಲುಗಳ ವಿವರಂ-(ಹಂಕ್ಷಂ) ಎಂ
ಬ ದ್ವ್ಯಕ್ಷರದ ಹಕಾರಾದಿ ಕ್ಷಕಾರಾಂತ್ಯವಾದುಭಯಾಕ್ಷರಂಗಳೇ ಆ
ದಳಂಗಳಲ್ಲಿ ಜೀವನಾಕ್ಷರ ಸ್ವರೂಪಿನಿಂದ ನ್ಯಾಸವಾಗಿರುತಿಹವು. ಅಂತ
ಪ್ಪೆರಡಕ್ಷರದ ಅಧಿದೈವ ಮಹಾಶ್ರೀಗುರುವಿನ ವಿಷ್ಟರೊಡನೆಕೂಡಿರು
ವಂತಾದ್ದೊಂದು ಆಜ್ಞಾಚಕ್ರ. ಆ ಚಕ್ರಕ್ಕೆ ಮಹಾಗುರುವೆಂದರೆ, ಉಪ
ಮಾತೀತನು, ಆ ಉಪಮಾತೀತನೇ ಅಧಿಷ್ಠಾಯಕನಾಗಿರುತ್ತಿಹನು.
ಅಂತಪ್ಪುಪಮಾತೀತನೆಂಬ ಅಧಿದೇವತೆಯ ನಿರಾವಸ್ಥೆಯೆನ್ನು ಪಂಚಾವ
ಸ್ಥೆಗಳಮೇಲಣ ಕೋರಿಕೆಯೇನೂ ಇಲ್ಲದಿರುವುದೇ ನಿರಾವಸ್ಥೆ. ಆ ಅ
ವಸ್ಥೆಯು ಆ ಚಕ್ರದಲ್ಲಿ ಸಂಬಂಧವಾಗಿರುತಿಹುದು. ಅಂತಪ್ಪವಸ್ಥೆಯ
ನ್ನು ಓಂಕಾರವೆಂಬ ಬೀಜಾಕ್ಷರದಿಂತಿಳಿದು ಇವೆಲ್ಲಾ ಲೋಕದಾತ್ಮರುಗ
ಳಿಗೆ ಪೂರ್ವವಾಸನೆಯೊಡನೆ ಕೂಡಿಕೊಂಡು ಪ್ರಕೃತಿತತ್ವಂಗಳಾಗಿ ಸಕ
ಲಜೀವರುಗಳನ್ನು ಜನ್ಮಾಂತರ ಗತಿಗಳೊಳಗೆತಂದು ಸಹ್ಮರಿಸುವದಕ್ಕೆ
ಕಾರಣವಾಗಿರುತಿಹವು. ಇತ್ತ ಗುರುಕಾರುಣ್ಯವಂಪಡೆದು ಲಿಂಗಾಂಗ
ಸಂಬಂಧಿಗಳಾಗಿ ಆಚರಿಸುವಂತ ಶಿವಶರಣರುಗಳಿಗೆ ಅವು ಎಲ್ಲಾನಿವೃ
ತ್ತಿಯಾಗಿಹೋಗಿ ಓಂಕಾರ ಷಡಕ್ಷರಮಂತ್ರ ಸ್ವರೂಪವಾಗಿರುತಿಹವು.
ಅದು ಹ್ಯಾಗೆಂದೊಡೆ, ಆ ಚಕ್ರವೇ ಓಂಕಾರಸ್ವರೂಪವಾದಲ್ಲಿ ಅಲ್ಲಿತೋ
ರುವವರ್ಣವೇ ಓಂಕಾರಪ್ರಣವದೊಳಗಣ ನಕಾರಪ್ರಣವು ಸ್ವರೂಪು.
ಅಲ್ಲಿ ತೋರುವಂತ ದಳಗಳೇ ಓಂಕಾರಪ್ರಣವದೊಳಗಣ ಮಕಾರಪ್ರಣ
ವುಸ್ವರೂಪು. ಆ ದಳಂಗಳಲ್ಲಿ ನ್ಯಾಸವಾಗಿರುವಂತ ಅಕ್ಷರಂಗಳೇ ಓಂ
ಕಾರಪ್ರಣವದೊಳಗಣ ಶಿಕಾರಪ್ರಣವುಸ್ವರೂಪು. ಅಲ್ಲಿ ನೆಲಸಿರುವಂತ

ಅಧಿದೇವತೆಯೇ ಓಂಕಾರ ಪ್ರಣವದೊಳಗಣ ವಕಾರಪ್ರಣವ ಸ್ವರೂಪು. ಅಲ್ಲಿ ಸಂಬಂಧವಾಗಿರುವಂತಹ ವಸ್ಥೆಯೇ ಓಂಕಾರಪ್ರಣವದೊಳಗಣ ಯಕಾರಪ್ರಣವಸ್ವರೂಪವಾಗಿ ಆಜ್ಞಾಚಕ್ರಸಂಬಂಧವಾದ ಷಡ್ವಿಧತತ್ವಂಗಳೆಲ್ಲವೂ ನಿವೃತ್ತಿಯಾಗಿ ಓಂಕಾರಷಡಕ್ಷರಮಂತ್ರ ಸ್ವರೂಪವಾಗಿರ್ಪವೆಂದರಿವುದು. ಓಂಕಾರವೆಂಬಬೀಜಾಕ್ಷರದಿಂ ತಿಳಿದು, ಈಪ್ರಕಾರದಿಂದ ಹೇಳಲ್ಪಟ್ಟಂತೀಷಡ್ವಿಧ ವಿಚಾರವಿಡಿದು ಈ ಓಂಕಾರಷಡಕ್ಷರಮಂತ್ರಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ಓಂಕಾರಮಂತ್ರಮೂರ್ತಿಯಾದ ಮಹಾಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ, ಆ ವಿಚಾರದ ವಿಶಾಲ್ಯವು ತಾನೆಂತುಟೆಲೆಸ್ವಾಮಿಯೆಂದು ಬೆಸಗೊಂಡೊಡೆ, ಓಂಕಾರ ಮಂತ್ರಮೂರ್ತಿಯಾದ ಮಹಾಲಿಂಗಕ್ಕೆ ಆ ಚಕ್ರವೇ ಪ್ರಣವಪೀಠದ ಗದ್ದುಗೆಯಾಗಿ ಅಲ್ಲಿ ತೋರುವಂತ ವರ್ನವೇ ನಂದದ ಕುಂದದ ಸ್ವಯಂಜ್ಯೋತಿಪ್ರಕಾಶವಾಗಿ ಅಳವಟ್ಟುದೆರಡನೆಯ ವಿಚಾರವು. ಅಲ್ಲಿರುವಂತ ದಳಗಳೇ ಇಂಡೆ ಪಂಡೆ ಕುಸುಮಾಲಂಕಾರಂಗಳಾಗಿ ಆ ದಳಂಗಳಲ್ಲಿ ನ್ಯಾಸವಾಗಿರುವಂತಕ್ಷರಂಗಳೇ ಓಂಕಾರಮಂತ್ರಮೂರ್ತಿಯಾದ ಮಹಾಲಿಂಗವನ್ನು ನೆನವುದಕ್ಕೆ (ಓಂ ಓಂ ಓಂ) ಎಂಬ ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ನಾಲ್ಕನೆಯ ವಿಚಾರವು. ಅಲ್ಲಿ ನೆಲಸಿರುವಂತ ಅಧಿದೇವತೆಯೇ ಐಕ್ಯನೆಂಬ ಪೂಜಾರಿಯಾಗಿ, ಅಲ್ಲಿ ಸಂಬಂಧವಾಗಿರುವಂತ ಅವಸ್ಥೆಯೇ ಘನಲಿಂಗಾವಸ್ಥೆಯಾಗಳವಟ್ಟುದೇ ಆರನೆಯ ವಿಚಾರವು. ಈ ರೀತಿಯಲ್ಲಿ ಓಂಕಾರ ಷಡಕ್ಷರಮಂತ್ರಸ್ವರೂಪವಾದ ಷಡ್ವಿಧತತ್ವಂಗಳೆಲ್ಲವೂ ಓಂಕಾರಮಂತ್ರಮೂರ್ತಿಯಾದ ಮಹಾಲಿಂಗಕ್ಕೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು ತನ್ನ ಮನದೊಳಗೆ ಗ್ರಹಿಸಿ, ಇಂತೀಷಡ್ವಿಧ ವಿಚಾರವಿಡಿದೆಂಬ ಶಬ್ದಾರ್ಥ. ಸಮರಸಭಕ್ತಿಯಿಂದೆ ಶಿಖಿಕರ್ಪೂರಸಂಯೋಗವಾದಹಾಂಗೆ ಲಿಂಗದಲ್ಲಿ ತಾ ಕೂಡಿ, ತನ್ನಲ್ಲಿ ಲಿಂಗವುಕೂಡಿ, ತಾನುಲಿಂಗವೆಂಬ ಉಭಯಭಾವವಳಿದು ತಾನುತಾನಾಗಿರುವುದೇ ಸಮರಸಭಕ್ತಿ. ಅಂತಪ್ಪ ಭಕ್ತಿಯಿಂದ ಆರನೆಯ ತತ್ವದಾದಿಯನರಿದು ಆ ಆರನೆಯ ತತ್ವವೇ ಆತ್ಮತತ್ವ. ಆ ಆತ್ಮತತ್ವದ ಜನನಕ್ಕೆ ಮೂಲಾಧಾರಸ್ಥಲವಾದ ಗಂಭೀರದಿಕ್ಕಿನ ಮುಖವನರಿದು ಸದಾಶಿವಮೂರ್ತಿಗೆ ಅಧೋಭಾಗದಲ್ಲಿರ್ಪುದೇ ಗಂಭೀರದಿಕ್ಕು.

ಅಂತಪ್ಪ ದಿಕ್ಕಿನಲ್ಲಿ ತೋರುವ ಮಹಾತತ್ವದ ಮುಖವನರಿದು ಮಹಾ ಸಾದಾಖ್ಯ ಸ್ವರೂಪವಾದ ಗೋಪ್ಯಮುಖವು ತಾನೇ ಇಲ್ಲಿ ಶಿವಶರಣನ ಹೃದಯ-ಇಂದ್ರಿಯದಲ್ಲಿ ಅರಿವುಸ್ವರೂಪವಾದ ಮಹಾಲಿಂಗ ಸ್ವರೂಪಿ ನಿಂದ ವಾಸವಾಗಿರ್ಪನೆಂಬೀ ತಿಳಿದು ಆತ್ಮನು ಅಹಂ ಮಮತೆಯನ್ನು ಆ ತ್ಮಮದವೆತ್ತಿದಲ್ಲಿ ಅಹಂಕಾರಭರಿತನಾಗಿ, ಎನ್ನಿಂದ ಬಲ್ಲಿದರಿಲ್ಲ, ಎನಗಿ ನ್ನಾರಿದಿರಿಲ್ಲವೆಂದು ಅಹಂಭಾವದಿಂದ ಅಹಂಕರಿಸುತಿಹನೆಂಬ ಆತ್ಮನ ಅ ಹಂಮಮತ್ವಾದಿ ಗುಣಂಗಳನ್ನು ಘನಪ್ರಕಾಶದಿಂತಿಳಿದು ಅಖಂಡಜ್ಞಾನ ಪ್ರ ಕಾಶವನುಳ್ಳ ಶಿವೈಕ್ಯರುಗಳಿಗೆ ಆತ್ಮನ ಅಹಂಮಮತ್ವಾದಿ ಗುಣಂಗಳು ನ ಷ್ಟವಾಗಿರ್ಪವೆಂದರಿದು ಘನಪ್ರಕಾಶದಿಂತಿಳಿದು, ಮೋಕ್ಷಾರ್ಥ ನಾಸ್ತಿ ಯಾಗಿ ಆತ್ಮನು ಮಧ್ಯಸ್ಥಾನಕ್ಕೆ ಬಂದಲ್ಲಿ ಮುಕ್ತಿಯನು ಬಯಸುತ್ತಿ ಹನೆಂಬ ಮೋಕ್ಷದಮೇಲಣ ಅಪೇಕ್ಷೆಯು ನಷ್ಟವಾಗಿಹೋಗಿ ಐಕ್ಯಸ್ಥ ಲವನಂಕಂಗೊಂಡುದೀಗ ಸದ್ಭಾವದನೆಲೆ. ಇಷ್ಟರ ಸಾಧನದಿಂದ ಆತ್ಮ ನ ಮದಗುಣ ಅಂಶಗುಣಂಗಳಳಿದು ಚಿದಾತ್ಮಸ್ವರೂಪಿನಿಂದ ಐಕ್ಯಂಗಂಗ ವಾಗಲು, ಅಂತಪ್ಪ ಪರಾತ್ಪರವಾದ ಶಿವೈಕ್ಯಸ್ಥಲವನೊಡಲುಮಾಡಿಕೊಂ ಡು ಆಚರಿಸುವಂತಾದ್ದುತಾನೇ ಸದ್ಭಾವದನೆಲೆ. ದುರ್ಭಾವವಳಿದು ಸ ದ್ಭಾವವೆಂಬ ಕರಕಮಲಕ್ಕೆ ಅರಿವುಸ್ವರೂಪವಾದ ಮಹಾಲಿಂಗವು ಬಂ ದುನೆಲೆಗೊಂಬಂತ ನಿಲುಕಡೆಯು ||೭೯|| ಈ ಪ್ರಕಾರದಿಂದ ಹೇಳಲ್ಪ ಟ್ಟಂತ ಈ ಷಡ್ವಿಧಶಕ್ತಿಯ ಮಥನದಿಂದ ಈ ಜ್ಞಾನ ಕರ್ಮೇಂದ್ರಿಯಗ ಳ ವಿಷಯ ಅಂತಃಕರಣವಾಯುಮೇಲಣ ಭಾವಾದಿ ಕರಣಂಗಳೆಂಬ ಮು ವ್ವತ್ತಾರು ತತ್ವಂಗಳು ನಿವೃತ್ತಿಯಾದುದೇ ಷಡ್ವಿಧಶಕ್ತಿ. ಅಂತಪ್ಪಾ ಶ ಕ್ತಿಯ ಮಥನದಿಂದ ದಶವಾಯುವನಿಲ್ಲಿಸಿ, ಆ ಪ್ರಕಾರವಾದ ಮಾರುತಂ ಗಳ ಸ್ಥಾನಧರ್ಮಕರ್ಮವರ್ಣಂಗಳನ್ನು ಷಡಕ್ಷರಮಂತ್ರದಿಂದ ತಡೆದೆಂ ಬುದೀಗ ||೮೦|| ಷಡ್ವಿಧಚಕ್ರ-ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯವೆಂಬಾರು ಚಕ್ರಗಳನ್ನು ಷಡ್ವಿಧವರ್ಣಂ ಗಳನ್ನು ಕೆಂಪು, ನೀಲ, ಕುಂಕುಮ, ಪೀತ, ಶ್ವೇತ, ಜ್ಯೋತಿವರ್ಣವೆಂ ಬಾರು ವರ್ಣಂಗಳನ್ನು ಷಡ್ವಿಧದಳ, ಚೌದಳ, ಷಡ್ದಳ, ದಶದಳ, ದ್ವಾ ದಶದಳ, ಷೋಡಶದಳ, ದ್ವಿದಳವೆಂಬ ಆರು ದಳಂಗಳನ್ನು ಷಡ್ವಿಧಾಕ್ಷರ ದಚತುರಕ್ಷರ, ಷಡಕ್ಷರ, ದಶಾಕ್ಷರ, ಷೋಡಶಾಕ್ಷರ, ದ್ವ್ಯಕ್ಷರವೆಂಬ ಆರುಅಕ್ಷರಗಳನ್ನು ಷಡ್ವಿಧ ಅಧಿದೈವ-ಬ್ರಹ್ಮ, ವಿಷ್ಣು, ರುದ್ರ, ಈಶ್ವರ,

ಸದಾಶಿವ, ಉಪಮಾತೀತರೆಂಬ ಅಧಿಷ್ಠಾನಕರ್ತೃಗಳೆಂಬುದೀಗ ||೮೧||
ಷಡ್ವಿಧಾವಸ್ಥೆಯನು-ಜಾಗ್ರ, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತ,
ನಿರಾವಸ್ಥೆಯೆಂಬಾರವಸ್ಥೆಗಳನ್ನು ಷಡ್ವಿಧ ಬೀಜಾಕ್ಷರದಿಂ ತಿಳಿದು ಇ
ವೆಲ್ಲಾ ಲೋಕದಾತ್ಮರುಗಳಲ್ಲಿ ಪೂರ್ವವಾಸನೆಯೊಡನೆ ಕೂಡಿಕೊಂಡು
ಪ್ರಕೃತಿತತ್ವಂಗಳಾಗಿ, ಸಕಲಜೀವರುಗಳನ್ನು ಜನ್ಮಾಂತರಗತಿಗಳೊಳಗೆ
ತಂದು ಸಹ್ಮರಿಸುವದಕ್ಕೆ ಕಾರಣವಾಗಿರುತಿಹವು ||೮೨|| ಗುರುಕಾರು
ಣ್ಯವಂಪಡೆದು ಲಿಂಗಾಂಗ ಸಂಬಂಧಿಗಳಾಗಾಚರಿಸುವಂತ ಶಿವಶರಣರು
ಗಳಿಗೆ ಅವೆಲ್ಲಾ ನಿವೃತ್ತಿಯಾಗಿ ಹೋಗಿ, ನಕಾರಷಡಕ್ಷರ, ಮಕಾರಷಡ
ಕ್ಷರ, ಶಿಕಾರಷಡಕ್ಷರ, ವಕಾರಷಡಕ್ಷರ, ಯಕಾರಷಡಕ್ಷರ, ಓಂಕಾರಷ
ಡಕ್ಷರವೆಂಬ ಮುವ್ವತ್ತಾರು ಪ್ರಣವುಸ್ವರೂಪವಾಗಿಪ್ಪವೆಂದೇ ಅರಿವು
ದು ||೮೩|| ಈಪ್ರಕಾರದಿಂದ ಹೇಳಲ್ಪಟ್ಟಂತ ಈ ಛತ್ತೀಶವಿಚಾರದಂತ
ರ್ಮ್ಮಖವಿಡಿದು, ಈ ಮುವ್ವತ್ತಾರು ಪ್ರಣವಸ್ವರೂಪವಾದ ಮುವ್ವತ್ತಾ
ರು ತತ್ವಂಗಳೆಲ್ಲವೂ ಷಡಕ್ಷರ ಮಂತ್ರಮೂರ್ತಿಗಳಾದ ಷಡ್ವಿಧಲಿಂಗಂಗ
ಳಿಗೆ ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವ
ನ್ನು ತನ್ನ ಮನದೊಳಗೆ ಗ್ರಹಿಸಿ, ಆ ವಿಚಾರದ ವಿಶಾಲ್ಯವು ತಾನೆಂತುಟೆ
ಲೆಸ್ವಾಮಿಯೆಂದು ಬೆಸಗೊಂಡೊಡೆ ||೮೪|| ಷಡಕ್ಷರ ಮಂತ್ರಮೂರ್ತಿಗ
ಳಾದ ಷಡ್ವಿಧಲಿಂಗಂಗಳಿಗೆ ಆಯಾಯ ಚಕ್ರಂಗಳೇ ಪ್ರಣವುಪೀಠದ
ಗದ್ದುಗೆಯಾಗಿ ಆಯಾಯ ವರ್ಣಂಗಳೇ ಆಯಾಯ ಲಿಂಗಂಗಳಿಗೆ ನಂದ
ದ ಕುಂದದ ಸ್ವಯಂಜ್ಯೋತಿಪ್ರಕಾಶವಾಗಳವಟ್ಟುದೇ ಹನ್ನೆರಡನೆಯ
ವಿಚಾರವು. ಆಯಾಯ ದಳಂಗಳೇ ಆಯಾಯ ಲಿಂಗಂಗಳಿಗೆ ಇಂಡೆ ದಂ
ಡೆ ಕುಸುಮಾಲಂಕಾರಂಗಳಾಗಿ ಆಯಾಯ ದಳಂಗಳಲ್ಲಿ ನ್ಯಾಸವಾಗಿರು
ವಂತ ಅಕ್ಷರಗಳೇ ಆಯಾಯ ಲಿಂಗಂಗಳನ್ನು ನೆನಹುದಕ್ಕೆ ಆಯಾಯ
ಮಂತ್ರಾಕ್ಷರಂಗಳಾಗಿ ಅಳವಟ್ಟುದೇ ಇಪ್ಪತ್ತುನಾಲ್ಕನೆಯವಿಚಾರವು||
ಆಯಾಯ ಅಧಿದೇವತೆಗಳೇ ಷಟ್ಸ್ಥಲನಾಯಕರೆಂಬ ಪೂಜಾರಿಗಳಾಗಿ,
ಆಯಾಯ ಅವಸ್ಥೆಗಳೇ ಆಯಾಯ ಲಿಂಗಂಗಳ ನೆನಹುದಕ್ಕೆ ಘನಲಿಂ
ಗಾವಸ್ಥೆಯಾಗಿ ಅಳವಟ್ಟುದೇ ಮುವ್ವತ್ತಾರನೆಯ ವಿಚಾರವು ||೮೫||
ಈ ರೀತಿಯಲ್ಲಿ ಮುವ್ವತ್ತಾರು ಪ್ರಣವುಸ್ವರೂಪವಾದ ಮುವ್ವತ್ತಾರು
ತತ್ವಂಗಳೆಲ್ಲಾ ಷಡಕ್ಷರ ಮಂತ್ರಮೂರ್ತಿಯಾದ ಷಡ್ವಿಧ ಲಿಂಗಂಗಳಿಗೆ
ಪೂಜೋಪಕರಣಂಗಳಾಗಿ ಅಳವಟ್ಟಿಹವೆಂಬ ಕೃತನಿಶ್ಚಯಭಾವವನ್ನು

ತನ್ನ ಮನದೊಳಗೆ ಗ್ರಹಿಸಿ ||೯೭|| ಕಾಣಿಸಿದೀಭೇದವೆನ್ನು ತನ್ನನಾಶ್ರೈ ಸಿದ ಶಿವಶರಣಜನಂಗಳಿಗೆ ಕರತಲಾಮಲಕವಾಗಿ ತೋರಿಸಿದ ಸದ್ಗುರು ದೇವಂಗೆ ನಮೋ ನಮೋ ಎನುತಿರ್ದನು. ಷಡ್ವಿಧಭಕ್ತಿಯಿಂದ ಶ್ರದ್ಧೆ, ನೈಷ್ಠೆ, ಸಾವಧಾನ, ಅನುಭಾವ, ಆನಂದ, ಸಮರಸವೆಂಬಾರುಭಕ್ತಿಯಿಂ ದ ಷಡ್ವಿಧತತ್ವದಾದಿಯು ಪೃಥ್ವೀ, ಅಪ್ಪು, ತೇಜ, ವಾಯು, ಆಕಾಶ, ಆ ತ್ಮವೆಂಬಾರುತತ್ವಂಗಳ ಜನನಕ್ಕೆ ಮೂಲಾಧಾರಸ್ಥಾನವಾದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ, ಊರ್ಧ್ವ, ಪಾತಾಳಂಗಳೆಂಬಾರುದಿಕ್ಕಿನಲ್ಲಿ ತೋರುವ ಷಡ್ವಿಧಮುಖವೆನರಿದು ||೯೮|| ಕರ್ಮಸಾದಾಖ್ಯ, ಕರ್ತೃಸಾ ದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮ ಹಾಸಾದಾಖ್ಯವೆಂಬ ಷಟ್ಸಾದಾಖ್ಯಸ್ವರೂಪವಾದ ಷಡ್ವದನಂಗಳೇ ಇಲ್ಲಿ ಶಿವಶರಣನ ಷಡಿಂದ್ರಿಯಂಗಳೊಳಗೆ ಷಡ್ವಿಧಲಿಂಗಸ್ವರೂಪನಿಂದ ವಾಸ ವಾಗಿರ್ಪವೆಂದೇ ತಿಳಿದು, ಪೃಥ್ವೀಭೂತ, ಅಪ್ಪುಭೂತ, ತೇಜೋಭೂತ, ವಾಯುಭೂತ, ಆಕಾಶಭೂತ, ಆತ್ಮಭೂತವೆಂಬಾರುಭೂತಂಗಳ ಗುಣ ವನು ; ಕಠಿಣ, ಮೃದು, ಉಷ್ಣ, ಚಲನ, ಶೂನ್ಯ, ಅಹಮ್ಮತತ್ವಗಳೆಂ ಬಾರು ಅಂಶಗುಣಂಗಳನ್ನು ಷಡ್ವಿಧಶೀಲವ್ರತದಿಂತಿಳಿದು, ಷಡ್ವಿಧಶೀಲ ವೆಂದೊಡೆ—ಅಕ್ರೋಧ, ಸತ್ಯವಚನ, ಕ್ಷಮೆ, ಭವಿಭಕ್ತಭೇದ, ಅನುಗ್ರ ಹ, ಸತ್ಪಾತ್ರದ್ರವ್ಯಾರ್ಪಣವೆಂಬಾರುಶೀಲಂಗಳನೇ ಅಂಗದಲ್ಲಿ ಷಡ್ವಿಧ ವ್ರತದಿಂತಿಳಿದು, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ಏ ಕಾದಶಪ್ರಸಾದಪರಿಜ್ಞಾನ, ದಶವಿಧಪಾದೋದಕ, ನಿರ್ನಯಭಕ್ತಿ, ನಿರ್ವ ಹವೆಂಬಾರುವ್ರತಂಗಳನೇ ಅಂತರಂಗದಲ್ಲಳವಡಿಸಿಕೊಂಡು, ಅವಿರಳಜ್ಞಾ ನಕ್ರಿಯೆವಿಡಿದು ಆಚರಿಸುವಂತ ಷಟ್ಸ್ಥಲಬ್ರಹ್ಮಿಗಳಿಗೆ ಷಡ್ಭೂತಂಗಳ ಅಂಶಗುಣಂಗಳು ನಷ್ಟವಾಗಿರ್ಪವೆಂದರಿದು ||೯೯|| ಪೃಥ್ವೀಮದ, ಅ ಪ್ಪುಮದ, ಅಗ್ನಿಮದ, ವಾಯುಮದ, ಆಕಾಶಮದ, ಆತ್ಮಮದವೆಂಬಾ ರುಭೂತಂಗಳ ಮದಗುಣಂಗಳು ನಷ್ಟವಾಗಿಹೋಗಿ ಷಡ್ವಿಧಾಂಗಸ್ಥಲ ವನುವಾಗಿ ಇಷ್ಟರಸಾಧನದಿಂದ ಷಡ್ಭೂತಂಗಳ ಮದಗುಣ ಅಂಶಗು ಣಂಗಳಳಿದು, ಷಟ್ಸ್ಥಲನಾಯಕರಿಗೆ ಅಂಗವಾಗಲಂತಪ್ಪ ಪಶಾತ್ಪರವಾ ಕ್ಷದ ಭಕ್ತಾದ್ಯೈಕ್ಯಾಂತಮಾದಾರುಸ್ಥಲಂಗಳಾಚರಣೆಯೇ ತನಗಂಗವಾ ಗಿ ಷಡ್ವಿಧಹಸ್ತ ಸುಚಿತ್ತಾದಿ ಸದ್ಭಾವಾಂತವಾದ ಆರುಕರಕಮಲಂಗಳು ಸ್ವೇಷ್ಟವಾಗಿ ಸಂಚಲ ವಿಸಂಚಲತ್ವವಿಲ್ಲದೆ ತನ್ನಲ್ಲಿ ಸ್ಥಿರಕರವಾಗಿ ನೆಲೆ

ಗೊಂಡು ಆಚಾರಾದಿಮಹಾಲಿಂಗಾಂತ್ಯಮಾದಾರುಲಿಂಗಂಗಳು ಸಾಧ್ಯವಾಗಿ ಷಡ್ವಿಧಹಸ್ತಂಗಳಲ್ಲಿ ಸಂಬಂಧವಾಗೆಂಬುದೀಗ ||೯೦|| ಈಪ್ರಕಾರದಿಂದ ಹೇಳಲ್ಪಟ್ಟೇಕಾಯಾರ್ಪಣವೀಪ್ರಥಮದಲ್ಲಿ ನಿರೂಪಣವಪಾಲಿಸಿದ ಕಾಯಾರ್ಪಣವು, ದ್ವಿತೀಯದಲ್ಲಿ ನಿರೂಪಣವಪಾಲಿಸಿದ ಕರಣಾರ್ಪಣವು, ತೃತೀಯದಲ್ಲಿ ನಿರೂಪಣವಪಾಲಿಸಿದ ಭಾವಾರ್ಪಣವೆಂಬ ತ್ರಿವಿಧಾರ್ಪಣಗಳಲ್ಲಿ ಷಡ್ವಿಧಕಾಯು, ಅಂಗಸಂಬಂಧವಾದ ರೂಪು, ಷಡ್ವಿಧಪದಾರ್ಥಂಗಳನ್ನು ಅರ್ಪಣ, ಷಡ್ವಿಧಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡು ಇಷ್ಟಲಿಂಗದೊಡನೆ ಕೂಡಿದಾಚಾರಾದಿಮಹಾಲಿಂಗಾಂತ್ಯಮಾದಾರು ಲಿಂಗಂಗಳೇ ಮಿಶ್ರ ವಿಭಜಿಸಿ ಇಂದ್ರಿಯಂಗಳಲ್ಲಿ ಬರುವ ವಿಷಯಪದಾರ್ಥಗಳನ್ನು ಸಮರ್ಪಿಸಿಕೊಳ್ಳಲೋಸುಗ ಮುವ್ವತ್ತಾರುಲಿಂಗಂಗಳಾಗಿ ಛತ್ತೀಶತತ್ವವ ಕುರುಹಿಸಲ್ಲಿ ಪ್ರಾಣಲಿಂಗದೊಡನೆ ಕೂಡಿದ ಮುವ್ವತ್ತಾರು ಲಿಂಗಗಳ ಮನೋಸಂಬಂಧವಾದ ಮುವ್ವತ್ತಾರುರುಚಿಪದಾರ್ಥಗಳನ್ನು ಸಮರ್ಪಿಸಿಕೊಂಡು, ಮುವತ್ತಾರು ತೆರದ ಭಕ್ತಿಸಂಜ್ಞೆಯೊಳಗೆ ಅರಿವು ಮನೋಸಂಬಂಧವಾದ ಮುವ್ವತ್ತಾರುತೆರದ ರುಚಿಪದಾರ್ಥಗಳನ್ನು ಮುವ್ವತ್ತಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡ ಪ್ರಾಣಲಿಂಗದೊಡನೆ ಕೂಡಿದ ಮುವ್ವತ್ತಾರುಲಿಂಗಂಗಳೇ ವಿಭಜಿಸಿ, ಷಡ್ವಿಧವಾಗಿ ಒಂದೊಂದಾರಾರಾಗಿ ವಿಶಾಲ್ಯತರವೆನ್ನೈದಿ, ಇನ್ನೂರುಹದಿನಾರು ಲಿಂಗಂಗಳಾಗಿ ಭಾವಲಿಂಗದೊಡನೆಕೂಡಿದ ಇನ್ನೂರುಹದಿನಾರು ಲಿಂಗಗಳೇ ಅರ್ಪಣದಲ್ಲಿ ಆತ್ಮಸಂಬಂಧವಾದ ಇನ್ನೂರುಹದಿನಾರು ತೃಪ್ತಿಪದಾರ್ಥಗಳನ್ನು ಇನ್ನೂರುಹದಿನಾರುತೆರದ ಭಕ್ತಿಸಕೀಲಂಗಳಿಂದ ಸಮರ್ಪಿಸಿಕೊಂಡಾಗ ಪರಿಣಾಮಪ್ರಸಾದದೊಳಗೆಂಬುದೀಗ||೯೧ ಕಾಯಾರ್ಪಿತವಾಗುಳಿದುದೇ ಶುದ್ಧಪ್ರಸಾದ, ಕರಣಾರ್ಪಿತವಾಗುಳಿದುದೇ ಸಿದ್ಧಪ್ರಸಾದ, ಭಾವಾರ್ಪಿತವಾಗುಳಿದುದೇ ಪ್ರಸಿದ್ಧಪ್ರಸಾದ, ಶುದ್ಧವೇ ಸಿದ್ಧದಲ್ಲಿ ಸಿದ್ಧವೇ ಪ್ರಸಿದ್ಧದಲ್ಲಿ ಪ್ರಸಿದ್ಧವೇ ಚಿತ್ಕಳಾಪ್ರಸಾದದಲ್ಲಿ ಅಡಗಲು, ಅಂತಪ್ಪ ಚಿತ್ಕಳಾಪ್ರಸಾದದಲ್ಲಿ ಓಲಾಡುತ್ತ ಆಳುತ್ತ ಏಳುತ್ತ ಸದಾಕ್ರೀಡಾಪರನಾಗಿ ವಿನೋದಿಸುತ್ತಿರುವ ಪರಿಣಾಮವೇ ಚಿತ್ಕಲಾಪ್ರಸಾದವೇ ಷಡ್ವಿಧಅಂಗ ಸ್ವರೂಪವಾಗಿ ಪರಿಣಾಮವೆ ಚಿತ್ಕಳಾಪ್ರಸಾದವೇ ಷಡ್ವಿಧಲಿಂಗಸ್ವರೂಪವಾಗಿ, ಪರಿಣಾಮವೇ ಚಿತ್ಕಳಾಪ್ರಸಾದವೆ ಸಂಗವಾಗಿ ಷಡ್ವಿಧಭಕ್ತಿಯ ಸ್ವರೂಪವಾಗಿ, ಪರಿಣಾಮವೇ ಚಿತ್ಕ

ಳಾ ಪ್ರಸಾದವೇ ಸಮರಸವಾಗಿ, ಷಡ್ವಿಧ ಅಂಗಲಿಂಗಭಕ್ತಿಗಳ ಕೂಟ ಸ್ವರೂಪವಾಗಿ ಎಂಬುದೀಗ ||೯೨|| ಬಾಹ್ಯಾಭ್ಯಂತರಂಗಳಲ್ಲಿ ಭಿನ್ನವಿಲ್ಲದೆ ಭಕ್ತಾದ್ಯೈಕ್ಯವಮಾದಾರು ಸ್ಥಲಗಳ ಬೆಳಗನು ಪ್ರಕಾಶಸ್ವರೂಪವಾದ ಷಡ್ವಿಧಲಿಂಗದಾಚರಣೆಯನು ಬೀರುತ್ತ, ಬೀರುಪ್ರಭಾವನೆಯೆಂದು ಪ್ರಭಾವಿಸುತ್ತ, ತೋರುತ್ತ, ಅಂಗವಿದು, ಲಿಂಗವಿದು, ಶಕ್ತಿಯಿದು, ಭಕ್ತಿಯಿದು, ಹಸ್ತವಿದು, ಮುಖವಿದು, ಪದಾರ್ಥವಿದು, ಪ್ರಸಾದವಿದು ಎಂದು ಕೈದೋರಿಕೆಯು ಕಾಣಿಸುತ್ತಮಿರುತ್ತ, ಷಡ್ವಿಧ ಅಂಗಲಿಂಗ ಭಕ್ತಿಗಳ ಆಚರಣೆಯು ನೊಳಗೊಂಡು ಮಿಗೆಮಿಗೆಯಾಗುತ್ತ ಈ ಪ್ರಕಾರದಿಂದ ಹೇಳಲ್ಪಟ್ಟೀಷಡ್ವಿಧಸ್ಥಲದ ಭಕ್ತಾದ್ಯೈಕ್ಯಾಂತಮಾದಾರುಸ್ಥಲದ ನಿರ್ದೇಶವನು ವಿಸ್ತಾರರೂಪವಾದ ಷಡ್ವಿಧಲಿಂಗದಾಚರಣೆಯನು ಗುರುಲಿಂಗ ಜಂಗಮವೆಂದು ಸದ್ರೂಪವಾದ ಗುರು, ಚಿದ್ರೂಪವಾದ ಲಿಂಗ, ಆನಂದಸ್ವರೂಪವಾದ ಚರಲಿಂಗವೆಂದು ಹೇಳಿಸಿಕೊಂಬ ಮೂರು ಸ್ಥಲದಲ್ಲಿ ಕಾಣಿಸಿ, ಭಕ್ತ, ಮಹೇಶ್ವರ, ಆಚಾರಲಿಂಗ, ಗುರುಲಿಂಗವೆಂಬ ಈ ನಾಲ್ಕು ಗುರುವಿನಲ್ಲಿ, ಪ್ರಸಾದಿ, ಪ್ರಾಣಲಿಂಗಿ, ಶಿವಲಿಂಗ, ಜಂಗಮಲಿಂಗವೆಂಬೀನಾಲ್ಕು ಲಿಂಗದಲ್ಲಿ, ಶರಣ, ಐಕ್ಯ, ಪ್ರಸಾದಲಿಂಗ, ಮಹಾಲಿಂಗವೆಂಬ ಈ ನಾಲ್ಕು ಜಂಗಮದಲ್ಲಿ ಅಡಕವಾಗಿಪ್ಪವೆಂದೇ ತೋರಿಸಿದ ಸದ್ಗುರುದೇವಂಗೆ ನಮೋನಮೋ ಎನ್ನುತಿರ್ದನು ||೯೩|| ನಾದ ಬಿಂದುಕಳೆಯಂ ತಿಳಿದು ಚಿನ್ನಾದ ಸ್ವರೂಪವಾದ ಗುರುದೇವನು ಚಿದ್ಬಿಂದು ಸ್ವರೂಪವಾದ ಲಿಂಗದೇವನು ಚಿತ್ಕಳಾಸ್ವರೂಪವಾದ ಜಂಗಮದೇವರೆಂದರಿದು, ಸ್ಥೂಲಶರೀರಾಭಿಮಾನಿಯಾದ ಜೀವಾತ್ಮನು, ಸೂಕ್ಷ್ಮಶರೀರಾಭಿಮಾನಿಯಾದ ಅಂತರಾತ್ಮನು, ಕಾರಣಶರೀರಾಭಿಮಾನಿಯಾದ ಪರಮಾತ್ಮನೆಂದೆನಿಸಿಕೊಂಬಾತ್ಮತ್ರಯದಲ್ಲಿ ಸತ್ಕ್ರಿಯಾಸ್ವರೂಪವಾದ ಇಷ್ಟಲಿಂಗವು, ಸುಜ್ಞಾನ ವಿಗ್ರಹಸ್ವರೂಪವಾದ ಪ್ರಾಣಲಿಂಗವು, ಪರಿಣಾಮಸ್ವರೂಪವಾದ ಭಾವಲಿಂಗವೆನಿಸಿಕೊಂಬ ಲಿಂಗತ್ರಯಂಗಳಲ್ಲಿ ಸಂಬಂಧಿಸಿ ಸ್ವಾಯತವಮಾಡಿಕೊಂಡು ಜೀವಾತ್ಮನಲ್ಲಿ ಇಷ್ಟಲಿಂಗ, ಅಂತರಾತ್ಮನಲ್ಲಿ ಪ್ರಾಣಲಿಂಗ, ಪರಮಾತ್ಮನಲ್ಲಿ ಭಾವಲಿಂಗವನು ಸಂಬಂಧಿಸಿ ಸ್ವಾಯತವಮಾಡಿಕೊಂಡು ಪೃಥ್ವೀ ಅಪ್ಪುಗಳೆಂಬೆರಡುತತ್ವಂಗಳಿಂದ ವ್ಯಕ್ತೀಕರವಾದುದೇ ಸ್ಥೂಲಶರೀರವು. ಅಗ್ನಿವಾಯುಗಳೆಂಬೆರಡುತತ್ವಂಗಳಿಂದ ವ್ಯಕ್ತೀಕರವಾದುದೇ ಸೂಕ್ಷ್ಮಾಂಗವು. ಆಕಾಶಹಮ್ಮುಗಳೆರಡುತತ್ವ

ಗಳಿಂದ ವ್ಯಕ್ತಿಕರವಾದುದೇ ಕಾರಣಶರೀರವು ಎನಿಸಿಕೊಂಬ ತನುತ್ರ ಯದಲ್ಲಿ ತನು ಮನ ಧನಂಗಳನ್ನು ಗುರುಲಿಂಗಜಂಗಮಕ್ಕೆ ವಂಚನೆಯಿ ಲ್ಲದೆ ನಿರ್ವಂಚನೆಯಿಂದ ಸಮರ್ಪಣೆಯಮಾಡುವಂತಾದ್ದೇ ತ್ಯಾಗಾಂಗ ವು. ಆ ಗುರುಲಿಂಗಜಂಗಮದ ಮುಖದಿಂದುಳುಮೆಯಾಗಿಬಂಡ ಶುದ್ಧ ಸಿದ್ಧ, ಪ್ರಸಿದ್ಧ, ಪ್ರಸಾದತ್ರಯಂಗಳ ಪಡೆದನುಭವಿಸಿ ಹೋಗುವಂತಾ ದ್ದೇ ಭೋಗಾಂಗವು. ತನುವೇ ಗುರುವಿನಲ್ಲಿ, ಮನವೇ ಲಿಂಗದಲ್ಲಿ, ಧ ನವೇ ಜಂಗಮದಲ್ಲಿ, ಏಕರಸವಮಾಡಿಕೊಂಡಿರುವಂತಾದ್ದೇ ಯೋಗಾಂ ಗವು. ಎನಿಸಿಕೊಂಬ ಮೂರು ಅಂಗಸ್ಥಲವು ಸಂಬಂಧವಾಗಿ ಸ್ವಾಯು ತವಾಗಿ ಎಂಬಲ್ಲಿ ಸ್ಥೂಲತನುವಿನಲ್ಲಿ ತ್ಯಾಗಾಂಗವು, ಸೂಕ್ಷ್ಮತನುವಿನಲ್ಲಿ ಭೋಗಾಂಗವು, ಕಾರಣತನುವಿನಲ್ಲಿ ಯೋಗಾಂಗವು, ಎಂಬ ತ್ರಿವಿಧಲಿಂ ಗಸ್ಥಲಂಗಳು ಸಂಬಂಧವಾಗಿನಿಂದ ಷಡ್ವಿಧಅಂಗವೇ ತ್ರಿವಿಧಾಂಗದಲ್ಲಿ ಷ ಡ್ವಿಧಲಿಂಗವೇ ತ್ರಿವಿಧಲಿಂಗದಲ್ಲಿ ನೆಲೆಗೊಂಡ ನಿರ್ದೇಶದ ವಿಸ್ತಾರವಾದಾ ಚರಣೆಯವಿವರಂ, ವಿಚಾರವೆಂತೆಂದೊಡೆ—ಅದು ಹ್ಯಾಂಗಿಪ್ಪದೆಲೆ ಸ್ವಾ ಮಿಯೆಂದು ಬೆಸಗೊಂಡೊಡೆ—ಆಚಾರಲಿಂಗದಲ್ಲಿ ಶ್ರದ್ಧಾಭಕ್ತಿಯನುಳ್ಳ ಭಕ್ತನು. ಗುರುಲಿಂಗದಲ್ಲಿ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನು, ಎಂದೆನಿಸಿಕೊಂಬುಭಯಸ್ಥಲವು ಎರಡಂಗಸ್ಥಲವು. ತನುಮನಧನಂಗ ಳೆಂಬ ತ್ರಿವಿಧಪದಾರ್ಥವನ್ನು ಗುರುಲಿಂಗಜಂಗಮಕ್ಕೆ ಸಮರ್ಪಣೆಯ ಮಾಡುವಾಗ ಇಂದಿಗೆ, ನಾಳಿಗೆ, ಉದಯ ಸಂಜೆಗಳಲ್ಲಿ ಆಗಬೇಕೆಂಬ ಮಾಜುವಬುದ್ಧಿಯಿಲ್ಲದೆ ಪ್ರಕಾಶಿಸುತ್ತಿಹುದಾಗಿ ನಿರ್ವಂಚನೆಯಿಂದ ಸಮ ರ್ಪಣೆಯಮಾಡಿ, ತನುವೇ ಗುರು, ಮನವೇ ಲಿಂಗ, ಧನವೇ ಜಂಗಮ ವಾಗಿ ಬೆಳಗುತಿಹುದಾದಕಾರಣ, ತ್ಯಾಗಾಂಗಸ್ಥಲದ ಬೆಳಗಿನೊಳಗಡಗಿ ತ್ತು. ತ್ಯಾಗಾಂಗಸ್ಥಲದಬೆಳಗೇ ಸತ್ಕ್ರಿಯಾಪ್ರಕಾಶದೊಳಗೆ ಆ ಸತ್ಕ್ರಿ ಯಾಪ್ರಕಾಶದಲ್ಲಿ ಅಡಗಿತ್ತು ; ಆ ಎರಡಂಗಸ್ಥಲವು ಲೀನವಾಗಿ ಹೋಗಿ ತು ; ಶಿವಲಿಂಗದಲ್ಲಿ ಸಾವಧಾನಭಕ್ತಿಯನುಳ್ಳ ಪ್ರಸಾದಿಯು ಜಂಗಮಲಿಂ ಗದಲ್ಲನುಭಾವಭಕ್ತಿಯನುಳ್ಳ ಪ್ರಾಣಲಿಂಗಿಯೆನಿಸಿಕೊಂಬುಭಯಸ್ಥಲವು ಎರಡಂಗಸ್ಥಲವು ಲಿಂಗಾಂಗವಾಗಿ, ಅಂಗವೇ ಲಿಂಗ, ಲಿಂಗವೇ ಅಂಗವಾಗಿ ಸಮಸ್ತವಾದ ಕಳೆಯೊಳಗೆ ತ್ರಿವಿಧ, ಷಡ್ವಿಧ, ಮುವ್ವತ್ತಾರು, ಇನ್ನೂ ರು ಹದಿನಾರುಲಿಂಗ, ಚಿಲ್ಲಿಂಗವೇ ವೇದಿಸಿಕೊಂಡು ತುಂಬಿಕೊಂಡು ಪ್ರಕಾ ಶಿಸುತ್ತಿಹುದಾಗಿ, ಸಕಲ ಕರಣಂಗಳೂ ಲಿಂಗದ ಕಿರಣಂಗಳಾಗಿ ಬೆಳಗು

ತ್ತಿಹುದಾದಕಾರಣ, ಭೋಗಾಂಗಸ್ಥಲದ ಬೆಳಗಿನೊಳಡಗಿತ್ತು. ಭೋಗಾಂಗಸ್ಥಲದ ಬೆಳಗೇ ಸುಜ್ಞಾನಪ್ರಕಾಶದೊಳಗೆ ಆ ಸುಜ್ಞಾನಪ್ರಕಾಶದಲ್ಲಡಗಿತ್ತು. ಆ ಎರಡಂಗಸ್ಥಲವು ಲೀನವಾಗಿಹೋಯಿತು. ಪ್ರಸಾದಲಿಂಗದಲ್ಲಿ ಆನಂದಭಕ್ತಿಯನುಳ್ಳ ಶರಣನು ಮಹಾಲಿಂಗದಲ್ಲಿ ಸಮರಸಭಕ್ತಿಯನುಳ್ಳ ಐಕ್ಯನೆನಿಸಿಕೊಂಬುಭಯಸ್ಥಲವು ಎರಡಂಗಸ್ಥಲವು ಭಿನ್ನರುಚಿಯನರಿದ, ಖಂಡಿತಜ್ಞಾನವನ್ನು ತಿಳಿಯದೆ ಪ್ರಕಾಶಿಸುತ್ತಿಹುದಾಗಿ, ಆ ಭಿನ್ನಜ್ಞಾನದಿಂದ ಬೆಳಗುತ್ತಿಹುದಾದಕಾರಣ, ಯೋಗಾಂಗಸ್ಥಲದ ಬೆಳಗಿನೊಳಗಡಗಿತ್ತು. ಯೋಗಾಂಗಸ್ಥಲದಬೆಳಗೇ ಮಹಾಜ್ಞಾನಪ್ರಕಾಶದೊಳಗೆ ಆ ಮಹಾಜ್ಞಾನಪ್ರಕಾಶವು ಮಹಾಜ್ಞಾನಪ್ರಕಾಶದೊಳಗಡಗಿತ್ತು. ಆ ಎರಡಂಗಸ್ಥಲವು ಲೀನವಾಗಿಹೋಯಿತು. ಈಪ್ರಕಾರದಿಂದ ಹೇಳಲ್ಪಟ್ಟಂತ ಇದುತಾನೇತ್ರುಯಾಂಗಸ್ಥಲದ ವಿವರವು. ಷಡ್ವಿಧಲಿಂಗವೇ ತ್ರಿವಿಧಾಂಗಸ್ಥಲದಲ್ಲಡಗಿದಂತ ವಿಚಾರವು ॥೯೪॥ ತದನಂತರದಲ್ಲಿ ತ್ರೈಲಿಂಗಸ್ಥಲದ ಭೇದವೆಂತೆಂದೊಡೆ—ಷಡ್ವಿಧಲಿಂಗವು ತ್ರಿವಿಧಲಿಂಗದಲ್ಲಿ ಅಡಗುವಂತ ಭೇದವಿಚಾರವು ಎಂತೆಂದೊಡೆ, ಅದು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ—ಭಕ್ತಂಗೆ ಹರಣ ಕಿರಣ, ಚೈತನ್ಯಪ್ರಕಾಶವೆನುಳ್ಳ ಆಚಾರಲಿಂಗವು ಮಾಹೇಶ್ವರಂಗೆ ಹರಣ ಕಿರಣ, ಚೈತನ್ಯಪ್ರಕಾಶವೆನುಳ್ಳ ಗುರುಲಿಂಗವು ಎಂಬೆರಡುಲಿಂಗಸ್ಥಲವು ಸಾಕಾರವಾಗಿ ಪೀತಕಟಗಳಿಂದ ವ್ಯಕ್ತೀಕರಿಸಿ, ಸಹಾಯವಾಗಿಷ್ಟಲಿಂಗವೆನಿಸಿಕೊಂಡು ಇಷ್ಟಬ್ರಹ್ಮವೆಂಬಭಿಧಾನವತಾಳಿಕೊಂಡು ಅನಿಷ್ಟಪಂಚಕವನು,ಜನ್ಮ, ಜರೆ, ಮರಣ, ಶೋಕ, ಮೋಹವೆಂಬನಿಷ್ಟಪಂಚಕಗಳನ್ನು ಪರಿಹರಿಸಿ ನಷ್ಟವಮಾಡಿ ತೋರಿತು ॥೯೫॥ ಇಷ್ಟಾರ್ಥದಸಿದ್ಧಿಯನೇ ಕಾಣಿಸಿಕೊಟ್ಟಿತು, ಪ್ರಸಾದಿಗೆ ಹರಣ ಕಿರಣ, ಚೈತನ್ಯಪ್ರಕಾಶವನುಳ್ಳ ಶಿವಲಿಂಗವು ಪ್ರಾಣಲಿಂಗಿಗೆ ಚಿತ್ಪ್ರಾಣವಾದ ಜಂಗಮಲಿಂಗವು ಎಂಬೆರಡುಲಿಂಗಸ್ಥಲವು ಸಕಲನಿಃಕಲವಾಗಿ ಸಾಕಾರನಿರಾಕಾರವಾಗಿ ಪ್ರಾಣಲಿಂಗವೆನಿಸಿಕೊಂಡು ಚಿಲ್ಲಿಂಗವೆಂಬ ಅಭಿಧಾನವನುತಾಳಿಕೊಂಡು, ಒಳಹೊರಗೆ ಮತ್ಸ್ಯನುಂಗಿದ ಮಾಣಿಕ್ಯದಂತೆಯೂ, ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿಯಹಾಂಗೆಯೂ, ಹೊಸಲಲ್ಲಿ ಮಡಿಸಿದದೀಪಹಾಂಗೆಯೂ, ಬಾಹ್ಯಾಭ್ಯಂತರದಲ್ಲಿ ಬೆಳಗಿಪ್ರಕಾಶಿಸಿ ತೋರಿತು. ಪ್ರಾಣಲಿಂಗತ್ವ-ಲಿಂಗಪ್ರಾಣತ್ವ; ಪ್ರಸಾದಮುಕ್ತತ್ವವನೆ ಕಾಣಿಸಿತು. ವೃತ್ತಗೋಮುಖಂಗಳಿಂದ ವ್ಯ

ಕ್ತೀಕರಿಸಿ ಪ್ರಾಣಲಿಂಗವೆನಿಸಿಕೊಂಡು ತೋರಿತು. ಶರಣಂಗೆ ಚಿತ್ತಪ್ರಾಣವಾದ ಪ್ರಸಾದಲಿಂಗವು, ಐಕ್ಯಂಗೆ ಚಿತ್ತಪ್ರಾಣವಾದ ಮಹಾಲಿಂಗವೆಂಬೆರಡು ಲಿಂಗಸ್ಥಲವು ಕೇವಲನಿರವಯವಾಕಾರವಾಗಿ ನಾಳಗೋಳಕಸ್ವರೂಪವಾಗಿಭಾವಲಿಂಗವೆನಿಸಿಕೊಂಡು, ತೃಪ್ತಿಲಿಂಗವೆಂಬ ಅಭಿಧಾನವನುತಾಳಿಕೊಂಡು, ಸರ್ವಾಚಾರಸಂಪತ್ತಿನಾಚರಣೆಯನ್ನು ನಿರ್ವಹನಮಾಡಿಕೊಂಡು,ನಿಃಪತಿಯಮಾಡಿ ತೋರಿತು. ಪರಾತ್ಪರವಾದ ಲಿಂಗೈಕ್ಯದನುವನೇ ತೋರಿಸಿಕೊಟ್ಟಿತು. ಈಪ್ರಕಾರದಿಂದ ಹೇಳಲ್ಪಟ್ಟ ಈ ತ್ರಿವಿಧಸ್ಥಳಂಗಳಾದ ಇಷ್ಟಪ್ರಾಣಭಾವಲಿಂಗಗಳನ್ನು ತ್ಯಾಗಭೋಗಯೋಗಾಂಗದ ಸಂಬಂಧವಾದ ನಿರ್ಣಯವ ಕ್ರಿಯಾಭಕ್ತಿ, ಜ್ಞಾನಭಕ್ತಿ, ಮಹಾಜ್ಞಾನಭಕ್ತಿಗಳ ನಿರಿಗೆಯೊಡನೆಕೂಡಿದಾತನಾಗಿ,-ತನುಹಸ್ತ, ಮನೋಹಸ್ತ,ಭಾವಹಸ್ತಂಗಳಿಂದ ಹಿಡಿದು ನೋಡುತ್ತ ಸಗುಣ ನಿರ್ಗುಣ, ಮನೋಲಯ ನಿರಂಜನ ಪೂಜಾಕ್ರಿಯಂಗಳಮಾಡಿ ಕ್ರಿಯಾದೃಷ್ಟಿ, ಜ್ಞಾನದೃಷ್ಟಿ, ಮಹಾಜ್ಞಾನದೃಷ್ಟಿಯಿಂದೇನಿರೀಕ್ಷಿಸುತ್ತ ಈ ಮೂರುಸ್ಥಲದ ಈ ತ್ಯಾಗಭೋಗಯೋಗಾಂಗವೆಂಬ ತ್ರಿವಿಧಸ್ಥಲದ ಬೆಳಗನು ಪ್ರಕಾಶರೂಪಮಾದ ಈತ್ರಿವಿಧಲಿಂಗದಾಚರಣೆಯನು ಭಕ್ತಜಂಗಮವೆಂಬ ದೇವಭಕ್ತರೆಂದು ಹೇಳುವ ಎರಡುಸ್ಥಲಂಗಳೊಳಗೆ ಕಾಣಿಸಿ, ಈ ತ್ರಿವಿಧಾಂಗಸ್ವರೂಪವಾದಾತನೇ ಒಬ್ಬಭಕ್ತನು. ಈ ತ್ರಿವಿಧಲಿಂಗಸ್ವರೂಪವಾದಾತನೊಬ್ಬ ದೇವನೆಂದು ತೋರಿಸಿ,ಶಿವಭಕ್ತಿಯಲ್ಲಿ ತಿಳಿದು ಶಿವಸ್ವರೂಪವಾದಾತನೇ ದೇವನು. ಭಕ್ತಿಸ್ವರೂಪವಾದಾತನೇ ಭಕ್ತನೆಂದರಿದು, ಕಾಯಾರ್ಪಣದಲ್ಲಿ ದೇಹಪ್ರಾಣಂಗಳೊಳಗೆ ಸಂಬಂಧಿಸಿ, ಸ್ವಾಯತವಮಾಡಿಕೊಂಬಲ್ಲಿ ಶಿವಸ್ವರೂಪವಾದದೇವಂಗೆ ಪ್ರಾಣದೊಳಗೆ ಭಕ್ತಿಸ್ವರೂಪವಾದ ಭಕ್ತಂಗೆ ಅಂಗದೊಳಗೆಸಂಬಂಧಿಸಿ ಸ್ವಾಯತವಮಾಡಿಯೆಂಬಲ್ಲಿ ಆಚಾರಲಿಂಗದಲ್ಲಿ ಶ್ರದ್ಧಾಭಕ್ತಿಯನುಳ್ಳ ಭಕ್ತನು, ಗುರುಲಿಂಗದಲ್ಲಿ ನೈಷ್ಠಿಕಾಭಕ್ತಿಯನುಳ್ಳ ಮಾಹೇಶ್ವರನು, ಶಿವಲಿಂಗದಲ್ಲಿ ಸಾವಧಾನಭಕ್ತಿಯನುಳ್ಳ ಪ್ರಸಾದಿಯು, ಈ ಮೂರಂಗಸ್ಥಲವು ಭಕ್ತನಲ್ಲಿಯೇ ಸುಳಿದು, ಭಕ್ತಿಸ್ಥಲದಾಚರಣೆಯೆಂಬುದು ತಾನು ಹ್ಯಾಂಗೆ ಗುರುಭಕ್ತಿ, ಲಿಂಗಪೂಜೆ, ಜಂಗಮದಾಸೋಹ, ಪಾದೋದಕ,ಪ್ರಸಾದಸೇವನೆ ಮುಂತಾದ ಸತ್ಕ್ರಿಯಾಚಾರವಿಡಿದು ಆಚರಿಸಿ ಜಂಗಮದಲ್ಲಿ ಅನುಭಾವಭಕ್ತಿಯನುಳ್ಳ ಪ್ರಾಣಲಿಂಗಿಯು ಪ್ರಸಾದಲಿಂಗದಲ್ಲಿ ಆನಂದಭಕ್ತಿಯನುಳ್ಳ ಶರಣನು, ಮಹಾಲಿಂಗದಲ್ಲಿ ಸಮರಸಭಕ್ತಿಯನುಳ್ಳ

ಐಕ್ಯನು ಎನಿಸಿಕೊಂಬ ಮೂರಂಗಸ್ಥಲವು ಜಂಗಮಲಿಂಗದಲ್ಲಿಯೇ ಸು
ಳಿದು, ಜಂಗಮಸ್ಥಲದಾಚರಣೆ ಹ್ಯಾಗೆಂದೊಡೆ—ಮಲತ್ರಯವಿದೂರನಾ
ಗಿ ಭಕ್ತಿಜ್ಞಾನವೈರಾಗ್ಯಸಂಪನ್ನನಾಗಿ ದೇಶಗ್ರಾಮ ನಿಲಯಬಂಧನಂಗಳಿ
ಲ್ಲದೆ ಎಲ್ಲಾ ದೇಶೆಲ್ಲಾಗ್ರಾಮ ಎಲ್ಲಾಭಕ್ತರನ್ನು ಒಂದೇ ಸಮಾನಂಗಂ
ಡು ತನ್ನ ತಟ್ಟಿದವರ, ಮುಟ್ಟಿದವರ, ಕಂಡವರ, ಕೇಳಿದವರ, ಅರಿದು ನೆ
ನೆನೆನೆದು ಭಕ್ತಿಯ ಮಾಡಿದವರನೆಲ್ಲಾ ಕೃತಾರ್ಥರಂಮಾಡುತ್ತ, ಜಗತ್ಪಾ
ವನಮೂರ್ತಿಯಾಗಿ ಆಚರಿಸುತ್ತಿಹನು ॥೯೬॥ ಸಾಕಾರವಾದ ಮೂರುಸ್ಥ
ಲವೂ ಭಕ್ತ, ಮಹೇಶ್ವರ, ಪ್ರಸಾದಿಯೆಂಬ ತ್ರಯಾಂಗಸ್ಥಲವು ಕ್ರಿಯಾ
ಚರಣೆಯಲ್ಲಿಯೇ ಸವೆದು, ಮಾರ್ಗಕ್ರಿಯಾಚರಣೆಯಿಂದಲೇ ತಮ್ಮಿಷ್ಟ
ಲಿಂಗದೊಳಗೆ ನಿಃಪತಿಯಾಗಿ, ನಿರಾಕಾರನಿರವಯವಾದ ಮೂರುಸ್ಥಲವು
ಪ್ರಾಣಲಿಂಗಿ ಶರಣೈಕ್ಯರೆಂಬ ತ್ರಿಯಾಂಗಸ್ಥಲವು ಜ್ಞಾನಾಚರಣೆಯಲ್ಲಿ
ಯೇ ಸವೆದು, ಮಿಾರಿದಕ್ರಿಯಾಚರಣೆಯಿಂದಲೇ ತಾವು ಲಿಂಗದೊಳಗೆ ನಿಃ
ಪತಿಯಾಗಿ ಮಾರ್ಗಕ್ರಿಯೆ ಮಿಾರಿದಕ್ರಿಯೆ ಯೆಂದೆನಿಸಿ, ಮಾರ್ಗಕ್ರಿಯೆ
ಯೆಂದರೆ ಭಕ್ತಮಹೇಶ್ವರ ಪ್ರಸಾದಿಯೆಂಬ ತ್ರಿಯಾಂಗಸ್ಥಲವೇ ಮಾ
ರ್ಗಕ್ರಿಯಾಸ್ವರೂಪವು. ಮಿಾರಿದಕ್ರಿಯೆ ಯೆಂದೆನಿಸಿ ಪ್ರಾಣಲಿಂಗಿ ಶರ
ಣೈಕ್ಯರೆಂಬ ತ್ರಯಾಂಗಸ್ಥಲವೇ ಮಿಾರಿದಕ್ರಿಯಾಸ್ವರೂಪವೆಂದು ಹೇಳಿ
ಸಿಕೊಂಡು, ಕುರುಹಿನಸ್ಥಲವ ಮಾರ್ಗಕ್ರಿಯಾಸ್ವರೂಪವಾದ ತ್ರಿವಿಧಸ್ಥ
ಲವನು ರೂಪುಮಾಡಿ, ಒಂದಂಗವಸ್ವರೂಪವಮಾಡಿ ಅರುಹಿನಸ್ಥಲವ
ಮಿಾರಿದ ಕ್ರಿಯಾಸ್ವರೂಪವಾದ ತ್ರಿವಿಧಸ್ಥಲವನ್ನು ನಿರೂಪುಮಾಡಿಕೊಂ
ಡು, ಒಂದು ಲಿಂಗಸ್ವರೂಪವಮಾಡಿ, ರೂಪುರುಚಿಯಂತೆ ಬೆಲ್ಲಕ್ಕೂ ಬೆಲ್ಲ
ದೊಳಗಣ ಮಧುರಕ್ಕೂ ಭಿನ್ನವಿಲ್ಲದಹಾಂಗೆ ಉಭಯಸ್ಥಲದಲ್ಲಿ ಅಂಗ
ಲಿಂಗವೆಂಬೆರಡುಸ್ಥಲದೊಳಗೆನಿಂದು ನೆಲೆಗೊಂಡುಭಯಸ್ಥಲದ ಅಂಗಲಿಂಗ
ವೆಂಬೆರಡುಸ್ಥಲವನ್ನು ನೆಲೆಮಾಡಿ, ಭಕ್ತಿಮುಕ್ತಿನಿತ್ಯತ್ವಕ್ಕೆ ಇವೇ ಕಾ
ರಣವೆಂದು ಸ್ಥಿರಕರವಮಾಡಿತ್ತು. ತಮ್ಮ ಚಿದಂಶಕರಾದ ಸದ್ಭಕ್ತ
ಶರಣಜನಂಗಳಿಗೆ ಕೈದೋರಿಕೆಯಾಗಿ ಕಾಣಿಸುತ್ತುಭಯಸ್ಥಲವರಿದು
ಅಂಗಲಿಂಗವೆಂಬೆರಡುಸ್ಥಲದೊಳಗೆ ಅಳಿದೊಂದೊಂದಂಗಸ್ಥಲವು ಒಂದೊಂ
ದು ಲಿಂಗಸ್ಥಲದಲ್ಲಿ ನಿಃಪತಿಯಾಗುಳಿದು, ಲಿಂಗಸ್ಥಲವುತಾನೊಂದೇ ಅವ
ಶೇಷಿತವಾಗಿ (ಏಕಮೇವಾದ್ವಿತೀಯ) ಸ್ವರೂಪವಾದ ಪರಬ್ರಹ್ಮವೆಂಬಲ್ಲಿ
ಸಕಲತತ್ವಂಗಳಿಗುಪರಿಯಾಗಿ ತೋರುವ ಪರವಸ್ತುತಾನೊಂದೊಪ್ಪುತಿ

ಹುದು ಎಂದು. ಹೇಳುವದರೊಳಗಾಗಿ, ತನ್ನ ಪಶ್ಚಿಮಪದದ ತನ್ನಂತ ರಂಗಸಂಬಂಧವಾದ ಸ್ವಕೀಯವಾದ ಮೂಲಜ್ಞಾನದ ಪ್ರಭೆಯಲ್ಲಿ ಪ್ರಕಾಶದೊಳಗೊಂದು (ಶ್ಲೋ॥ ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂತದ್ವಿವಿಧಂಭವೇತ್ । ಏಕಂಲಿಂಗಸ್ಥಲಂಪ್ರೋಕ್ತ ಮನ್ಯದಂಗಸ್ಥಲಂಸ್ಮೃತಂ ॥) ಎಂದು ಹೇಳುತಿಹುದಾದ ಕಾರಣ, ಒಂದು ಅದ್ವಿತೀಯಸ್ವರೂಪವಾದ ಪರಬ್ರಹ್ಮವು ತಾನೊಂದೆರಡಾದುದಂ ಕಂಡು, ತನ್ನ ಚಿಚ್ಛಕ್ತಿಯ ನೆನಹುಮಾತ್ರದಿಂದ ವಿಭಜಿಸಿ ಅಂಗಲಿಂಗವೆಂಬುಭಯಸ್ವರೂಪವನು ತಾಳಿದಂತ ಭೇದವನ್ನು ಕಂಡು, ಶರಣನು ತನ್ನ ಮೂಲಜ್ಞಾನದೃಷ್ಟಿಯಿಂದಲೇ ತಿಳಿದು ಆ ಉಭಯಾಂಗಲಿಂಗದಾಚರಣೆಯು ಮೂರಾದುದ ಕಂಡು ತ್ರಿವಿಧಾಂಗಲಿಂಗಸ್ವರೂಪವನು ತಾಳಿದಂತ ಭೇದವನು ಕಂಡು, ಆ ಮೂರು ತ್ರಿವಿಧಾಂಗಲಿಂಗದಾಚರಣೆಯೇ ಆರಾದುದಂ ಕಂಡು, ಷಡಂಗಲಿಂಗಸ್ವರೂಪವನು ತಾಳಿದಂತ ಭೇದವನು ಕಂಡು ಆ ಷಡಂಗದಲಿಂಗದಾಚರಣೆಯು ಮುವ್ವತ್ತಾರಾದುದಂ ಕಂಡು ಛತ್ತೀಶ ಅಂಗಲಿಂಗಸ್ವರೂಪವ ತಾಳಿದಂತ ಭೇದವನು ಕಂಡು ಆ ಮುವ್ವತ್ತಾರು ಅಂಗಲಿಂಗದಾಚರಣೆಯು ಇನ್ನೂರಹದಿನಾರಾದುದಂ ಕಂಡು ಆ ಇನ್ನೂರಹದಿನಾರು ಅಂಗಲಿಂಗವನು ತಾಳಿದಂತ ಭೇದವನು ಕಂಡು, ಆ ಇನ್ನೂರಹದಿನಾರಂಗಲಿಂಗದಾಚರಣೆಯು ಮಿಶ್ರವಿಭಜನೆಯೆಂಬುದು ತಾನು ಪಿಂಡಬ್ರಹ್ಮಾಂಡವೆಂಬೆರಡರೊಳಗೆ ಪರಿಪೂರ್ಣವಾಗಿ ಪರಿಪೂರ್ಣಾಂಗ ಪರಿಪೂರ್ಣಲಿಂಗಸ್ವರೂಪವಾಗಿ ಪ್ರಕಾಶಿಸಿ ಕಾಣಿಸಿತೆಂಬ ಭೇದವನು ಕಂಡು ಶರಣನು ತನ್ನ ಮೂಲಜ್ಞಾನದೃಷ್ಟಿಯಿಂದಲೇ ತಿಳಿದು ಕಡೆಸೂಸಿ ಆ ಪರಿಪೂರ್ಣಾಂಗ ಆ ಪರಿಪೂರ್ಣಲಿಂಗದಾಚರಣೆಯು ಪಿಂಡಬ್ರಹ್ಮಾಂಡವೆಂಬೆರಡನೊಳಗೊಂಡು ಮೆರಸೂಸಿ ಹರಿವರಳ್ದು ಹೀಗೆಂದು ತಿಳಿವಂತ ಮೂಲಜ್ಞಾನಚಕ್ಷುವು ನಿಜವಿಕಸನವಾಗಿ ಬೆಳಗುನಿಬ್ಬೆರಗಾಗಿ ಶರಣನ ಪರವಶವೇ ಲಿಂಗದಪರವಶವು. ಲಿಂಗದಪರವಶವೇ ಶರಣನಪರವಶವಾಗಿ ಈಪ್ರಕಾರದಿಂದೆ ಪಿಂಡಬ್ರಹ್ಮಾಂಡವೆಂಬೆರಡರೊಳಗೆ ಪ್ರಕಾಶಿಸಿ ಕಾಣಿಸುವ ಪರಿಪೂರ್ಣಪ್ರಭೆಯನು ಪರಿಪೂರ್ಣಾಂಗ ಪರಿಪೂರ್ಣಲಿಂಗದಾಚರಣೆಯು, ಆ ಇನ್ನೂರಹದಿನಾರಂಗಲಿಂಗದೊಳಗಡಗಿತೆಂದು ತಿಳಿದು ಆ ಇನ್ನೂರಹದಿನಾರಂಗದ ಪ್ರಭೆಯನು ಪ್ರಕಾಶರೂಪವಾದಿನ್ನೂರು ಹದಿನಾರುಲಿಂಗದಾಚರಣೆಯನು, ಛತ್ತೀಶ-ಅಂಗಲಿಂಗದೊಳಗಡಗಿತೆಂದು ತಿಳಿದು, ಆ ಛತ್ತೀಶಾಂಗಗ

ಳಬೆಳಗನ್ನು ಪ್ರಕಾಶರೂಪವಾದ ಭಕ್ತೀಶಲಿಂಗದಾಚರಣೆಯನು ಆರು ಸ್ಥಲದಲ್ಲಿಯೇ ಅರಿದು,ಷಡಂಗಲಿಂಗದೊಳಗಡಗಿತೆಂದು ತಿಳಿದು ಷಡಂಗಂ ಗಳನ್ವಯವನು ಅರ್ಥರೂಪವಾದ ಷಡ್ವಿಧಲಿಂಗದಾಚರಣೆಯನು ಮೂ ರುಸ್ಥಲದಲ್ಲಿಯೇ ಅರಿದು, ತ್ರಿವಿಧಾಂಗಲಿಂಗದೊಳಡಗಿತೆಂದು ತಿಳಿದು ಆ ತ್ರಿವಿಧಾಂಗಲಿಂಗಂಗಳ ಮೂಲವನು ಮುಖ್ಯಸ್ವರೂಪವಾದ ತ್ರಿವಿಧಾಂ ಗಲಿಂಗಂಗಳ ಮೂಲವನು ಮುಖ್ಯಸ್ವರೂಪವಾದ ತ್ರಿವಿಧಾಂಗಲಿಂಗದಾ ಚರಣೆಯನು - ಉಭಯಸ್ಥಲ್ಲಿವಯೆ ಅರಿದು- ಅಂಗಲಿಂಗವೆಂಬೆರಡುಸ್ಥಲ ದೊಳಗೆ ಅಡಗಿತೆಂದು ತಿಳಿದು- ಆ ಉಭಯಸ್ಥಲದ ಆ ಅಂಗಲಿಂಗವೆಂಬೆ ರಡುಸ್ಥಲದೊಳಗಣುಪಮೆಯನು- ಒಂದುವಾಚ್ಯರೂಪವಾದ ಅಂಗವ ನುಪಮಾತೀತದಲ್ಲಿಯೆ ಅರಿದು- ವಾಚ್ಯಾತೀತವಾದ ಲಿಂಗದೊಳಗಡಗಿತೆಂ ದು ತಿಳಿದು-ಆ ಉಪಮೆ-ಅನುಪಮೆ ಯೆಂಬ-ವಾಚ್ಯ- ಅನಿರ್ವಾಚ್ಯವೆಂ ದು ಹೇಳುವ ಆ ಜ್ಞಾನವು- ಅರಿತು- ನಿಃ ಪತಿಯಾಗಿ - ಮರೆವು ನಷ್ಟ ವಾಗಿ-ಅಂತರಂಗದ ಜ್ಞಾನವು ನಿಃಪತಿಯಾದಕೂಡ್ಲೆ-ಬಹಿರಂಗದ ಕ್ರಿಯೆ ಯು ನಿಃಪತಿಯಾಗೆಂಬುದರ್ಥ - ಗುರುವಾಕ್ಯಕ್ಕೆ ಸದೃಶವಾದ ಹರ ವಾಕ್ಯವನು ನಿರೂಪಿಸುತಿಹರು- ಅದು ಹ್ಯಾಗೆಂದೊಡೆ—ವಾಚ್ಯವಾಕ್ಯ ದೆಸ್ತುತಿಯನ್ನು, ಅತೀತ, ಮೀರಿದಂತಾದ್ದು, ಮನ, ಮನದೆನೆನವನು, ಅತೀತ-ಮೀರಿದಂತಾದ್ದು, ಭಾವ-ಭಾವಿಸುವ ಬಗೆಯನು, ಅತೀತ-ಮೀ ರಿದಂತಾದ್ದು, ಅಗೋಚರಂ-ಚಕ್ಷುರಾದೀಂದ್ರಿಯಂಗಳಿಗೆ-ವಿಷಯವಲ್ಲ ದಂತಾದ್ದು- ಸರ್ವಂ-ಸಮಸ್ತವು, ತೋರುವ- ತೋರಿಕೆಯನು, ಶೂ ನ್ಯಂ-ಇಲ್ಲದೆ-ನಿರಾಕಾರಂ - ಸಾಕಾರರಹಿತವಾದಂತಾದ್ದು, ನಿತ್ಯತ್ವಂ- ಶಾಶ್ವಿತವಾದಂತ ಪರಮಂ-ಉತ್ಕೃಷ್ಟವಾದಂತ-ಪರಂ-ಪರಬ್ರಹ್ಮವು- ಎಂದುದಾಗಿ-ಹೀಗೆಂದು ಶೃತಿವಾಕ್ಯ ಹೇಳುತಿಹುದಾದಕಾರಣ, ಆದಿ-ಪಾ ದಾವರಣವು- ಶೂನ್ಯಂ- ಇಲ್ಲದಂತ- ಮಧ್ಯಂ- ಮಧ್ಯಶರೀರಾವರಣವು- ಶೂನ್ಯಂ-ಮಸ್ತಕಾವರಣವು ಶೂನ್ಯಂ ಇಲ್ಲದಂತ- ನಿರಾಮಯಂ- ಸಂಸಾ ರಾದಿ ರೋಗರಹಿತವಾದಂತ - ಸರ್ವಂ- ಸಮಸ್ತ ತೋರುವ ತೋರಿಕೆಯ ನು-ಶೂನ್ಯಂ - ಇಲ್ಲದೆ- ನಿರವಯವಲೀಲೆಯನೆ- ಅವಲಂಬಂ-ವಹಿಸಿಕೊಂ ಡಿರುವಂತ-ನಿಶ್ಶಬ್ದಂ- ಅನಿರ್ವಾಚ್ಯಮಹಾಶೂನ್ಯಸ್ಥಲವನೊಳಕೊಂಡೊ ಪ್ಪುತಿಹುದು- ಬ್ರಹ್ಮ - ಪರಬ್ರಹ್ಮವೆಂದು - ಉಚ್ಯತೆ- ಹೇಳಲಪಟ್ಟಿತು.

ಅಂತಪ್ಪ ಪರಬ್ರಹ್ಮವೆ - ನಾನೆಂದು ಹೇಳುವೆನುಡಿಗೆ - ವಾಗದ್ವೈತ ಪ್ರಸಂಗಕ್ಕೆ - ಎಡೆಗೊಡದೆ - ತೆರವುಗೊಡದೆ - ನಿರವಯುವಸ್ಥಲದಲ್ಲಿ -ಸ್ವಲೀಲಾನಂದ ಭಕ್ತಿಯಸ್ಥಲದೊಳಗೆ - ನಿಜವಂ-ತಾನೆಂಬ ಭಾವವನ್ನು- ಐದಿಪ್ಪಾತನೀಗ- ಏಕರಸವವಮಾಡಿ ಕೂಡಿಪ್ಪಾತನು ತಾನೆ-ಅಭೇದ್ಯಭೇದಕ-ಆರುಭೇದಿಸಬಾರದ ಪ್ರಾಣಲಿಂಗವನು - ಭೇದಕತನ್ನದೊಂದು- ಅಭಿನ್ನಜ್ಞಾನದಿಂದಲೆ ಭೇದಿಸಿ - ಕಂಡಾತನು ಅಸಾಧ್ಯ- ಆರುಸಾಧಿಸಬಾರದಿಷ್ಟಲಿಂಗವನು- ಸಾಧಕತನ್ನದೊಂದಭಿನ್ನಕ್ರಿಯೆಯಿಂದಲೆ - ಸಾಧ್ಯವಮಾಡಿಕೊಂಡಾತನು - ಚಿನ್ಮಯದಿಗ್ದೆಸೆಗಳನೊಳಕೊಂಡು- ಪರಿಪೂರ್ಣವಾಗಿ ಬೆಳಗಲ್ಪಟ್ಟಾತನು - ಚಿದ್ರೂಪಮಹಾಜ್ಞಾನಸ್ವರೂಪವನು- ಚಿದಾನಂದಜ್ಞಾನಾನಂದವನುಳ್ಳಾತನು- ಇಂತಪ್ಪ -ಈಪ್ರಕಾರವಾದ-ದಿವ್ಯ,ಮನೋಹರವಾದ-ಶಿವಯೋಗಿಯು-ಶಿವಜ್ಞಾನ-ಶಿವಧ್ಯಾನ-ಶಿವಪೂಜೆ-ಶಿವವ್ರತ- ಶಿವಲಿಂಗಧಾರಣವೆಂಬ, ಶಿವಯೋಗ ಪಂಚಕವನುಳ್ಳ- ಪರಶಿವರಾಜಯೋಗೀಶ್ವರನಾದ ಮಹಾ ದೊಡ್ಡಿತಾದ- ಶರಣ-ಶಿವಶರಣನೆಂಬಲ್ಲಿ - ಶಿವನ ಎಂಭತ್ತುಮೂರು ಮೂರ್ತಿಗಳ ನೊಳಕೊಂಡು ತೋರುವ- ಅನಾದಿಯ ಶರಣನಾದಂತ ಪ್ರಭುದೇವರ ಸ್ವತಂತ್ರ ಕರ್ತೃವಾದಂತ - ಅಲ್ಲಮಪ್ರಭುಸ್ವಾಮಿಗಳೆಂಬ ನಿರಂಜನ ಗಣಾಧೀಶನ ಬಸವಂಣನ-ಬಸವೇಶ್ವರಸ್ವಾಮಿಗಳೆಂಬ ಮಹಾಜ್ಞಾನ ಸ್ವರೂಪವಾದ ಗುರುಮೂರ್ತಿಯ ಕರುಣದಿಂದೊದಗಿದ ಭಕ್ತಿಪ್ರಸಾದವನೆ-ಬಹಿರಂಗದಲ್ಲಿ ಪ್ರಭುಸ್ವಾಮಿಗಳ ಕರುಣದಿಂದೊದಗಿದ ವೈರಾಗ್ಯಪ್ರಸಾದವನೆ ಕರಣಂಗಳಲ್ಲಿಳವಡಿಸಿಕೊಂಡು - ಭಕ್ತಿಜ್ಞಾನವೈರಾಗ್ಯವಿಡಿದಾಚರಿಸಿ - ಆನು - ಚನ್ನಬಸವೇಶ್ವರ ಸ್ವಾಮಿಯು ನಾನು - ಬದುಕಿದೆನು - ಜನನಮರಣಂಗಳೆಂಬ - ಅನಿತ್ಯತ್ವವಳಿದು ನಿತ್ಯಸ್ವರೂಪನಾಗಿ ಬೆಳೆದೆನು. ಅಯ್ಯಾ ಎಲೆ ಸ್ವಾಮಿ ! ಭಕ್ತರ ದೇಹದೊಳಗೆ ಕೂಡಿದ ಕೂಟದಲ್ಲಿ - ವಿಯೋಗವಿಲ್ಲದೆ ಸದಾಸನ್ನಿಹಿತನಾಗೊಪ್ಪುವ - ಚನ್ನಕಾಯಕಾಂತಿಲಾವಣ್ಯವನುಳ್ಳಂತ - ಸಂಗಮಭಕ್ತರಂಗಮನಪ್ರಾಣಂಗಳಲ್ಲಿ - ಎರೆ ಇಂಗದಿದ್ದಂತ- ದೇವ ಸ್ವಯಂಪ್ರಕಾಶ ಸ್ವರೂಪನಾದಂತ - ಸ್ವಾಮಿಯೆ ಎಂಬುದರ್ಥ - ಚನ್ನಬಸವೇಶ್ವರಸ್ವಾಮಿಗಳು-ಷಟ್ಸ್ಥಲಜ್ಞಾನ ಚಕ್ರವರ್ತಿಯಪ್ಪ ಚನ್ನಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನಗುರುಮೂರ್ತಿಯು - ನಿರೂಪಿಸಿದ-ಉಪದೇಶಿಸಿದ ಮಿ

ಶ್ರಾರ್ಪಣ-ಮಿಶ್ರವೆಂದೊಡೆಪದಾರ್ಥ, ಆರ್ಪಣವೆಂದೊಡೆ-ಲಿಂಗಾರ್ಪಣವು ಆಲಿಂಗಾರ್ಪಣದ ಸಕೀಲವನು ಹೇಳುವೆಂತುತ್ತರ ಪ್ರಕರಣವು - ಸಮಾಪ್ತಂ—ಎಲ್ಲಾ ಶಿವಶರಣ ಜನಂಗಳ ಶ್ರೋತ್ರಮುಖದಲ್ಲಿಯೇ ಮುಕ್ತಾಯವಾಯ್ತು.

ಶ್ರೀಚನ್ನಬಸವೇಶ್ವರ ಸ್ವಾಮಿಗಳು ನಿರೂಪಿಸಿದ
ಮಿಶ್ರಾರ್ಪಣವು ಸಮಾಪ್ತವು.

---

## ಅಕ್ಕಗಳ ವಚನವು.

ಉಡುತಡಿಯೆಂಬ ಪಟ್ಟಣದಲ್ಲಿ- ನಿರ್ಮಲಸುಮತಿಯರೆಂಬ ಶಿವಭಕ್ತರ ಗರ್ಭದಲ್ಲಿ ಪುಟ್ಟಿ-ತನಗೆ ಮನವಿಟ್ಟ-ಭವಿಯಾದ ಕೌಶಿಕರಾಯನಂತ್ಯಜಿಸಿ—ವೈರಾಗ್ಯದಿಂದ ನಿರ್ವಾಣಗುಣಶೀಲೆಯರಾಗಿ - ಕಲ್ಯಾಣಪಟ್ಟಣಕ್ಕೆಬಂದು-ಅಲ್ಲಿ ಬಸವಾದಿಪ್ರಮಥಗಣಂಗಳ ದರ್ಶನವಂಮಾಡಿ- ಅಲ್ಲಿಂದ ಶ್ರೀಶೈಲಕ್ಕೆಪೋಗಿ- ಚನ್ನಮಲ್ಲಿಕಾರ್ಜುನಲಿಂಗದ ಕರುಣವಂಪಡೆದು-ಅಲ್ಲಿಂದಲ್ಲಮಪ್ರಭುಸ್ವಾಮಿಗಳೆಂಬ ಕದಳಿಯಲ್ಲಿ-ನಿರ್ವಯಲಾಗಿ-ಕೈಲಾಸಕ್ಕೆಪೋದ ಮಹಾದೇವಿಯಕ್ಕಗಳೆಂಬ ಚಿಚ್ಛಕ್ತಿಯರು- ಷಟ್ಸ್ಥಲ ಪರಿಕ್ರಮ ವಿಡಿದುಪದೇಶಿಸಿದೂರ್ಧ್ವಸೃಷ್ಟ್ಯಧೋಸೃಷ್ಟಿಗಳ ಕ್ರಮವನ್ನು- ಹೇಳುವ ವಚನವು-ಮತ್ತಂತುಮಲ್ಲದೆ- ಅಂಗಲಿಂಗೋದ್ಭವಂಗಳ ಸ್ವರೂಪವನ್ನು ಹೇಳುವ ವಾಕ್ಯಾನುಭಾವವು-ಆದಿಯೆಂದರೆ ಶಕ್ತಿತತ್ವ-ಅನಾದಿಯೆಂದರೆ ಶಿವತತ್ವ - ಆವಂಶಿಕನಾದಾತ್ಮನೆ ಶಾಶ್ವಿತನಾದಾತ್ಮನು-ಆಶಕ್ತ್ಯಂಶವಾದ ದೇಹವೆ ಅಶಾಶ್ವಿತವಾದುದು. ಎಂಬ ನಿಲುಕಡೆಯನ್ನು ತಿಳಿಯಲರಿಯದೆ- ಪರಬ್ರಹ್ಮವೆಂದು ನುಡಿವಾತ್ಮಂಗೆ-ತನುವಿಲ್ಲ- ಕರಣವಿಲ್ಲ-ಇಂದ್ರಿಯ ವಿಷಯಂಗಳ ವ್ಯಾಪಾರಂಗಳಿಲ್ಲ- ಆತ್ಮನೆಸಾಕ್ಷಾತ್ಪರಬ್ರಹ್ಮವೆಂದು - ಗಳಪುವ ವಾಯುಪ್ರಾಣಿಗಳವರು - ತಮಗಿಲ್ಲವೆಂದು ತನುಕರಣೇಂದ್ರಿಯ ವಿಷಯ ಪ್ರಪಂಚಿನಲ್ಲಿ- ನುಸುಳಿಚರಿಸುವ ಮಿಥ್ಯಾಜೀವರುಗಳು ತಾವು - ಆಪ್ರಸಿದ್ಧವಾದ ಪರಬ್ರಹ್ಮದ ಸಕಲತತ್ವಂಗಳಿಗುಪರಿಯಾಗಿ ತೋರುವ ಪರವಸ್ತುವಿನ - ನಿಜವನಿಲವ ಸ್ವಸ್ವರೂಪವನ್ನೆತ್ತಬಲ್ಲರೊ - ಆಪರಬ್ರಹ್ಮವು ಹೋದ ಬಲಬು ಬಂದಬಟ್ಟೆ- ಬಂದ ನಿಲುಕಡೆಯನು ಏನೆಂದೂ ತಿಳಿಯರು- ಆವರುತಿಳಿಪುದಿರುವ ವಿಚಾರ

ವು ಹ್ಯಾಗಿಪ್ಪದೆಲೆ ಸ್ವಾಮಿಯೆಂದು ಬೆಸಗೊಂಡೊಡೆ - ಆದಿಯೆಂದೊಡೆ ದೇಹ - ಅನಾದಿಯೆಂದೊಡೆ ನಿರ್ದೇಹವಾದಾತ್ಮನು - ಅನಾದಿಯೆ ಸಕಲ ಸಾಕಾರವಾದುದು - ಅನಾದಿಯೆ ಆತ್ಮನನಿಃಕಲನಿರಾಕಾರವಾದಾತ್ಮನು- ಆದಿಯೆ-ಅಚೇತನವಾದುದು - ಆತ್ಮನೆ ಜಡರಹಿತವಾದಾತನು - ದೇಹವೆ ಜೀವಂಗೊಡಲಾಗಿಹುದು - ಆತ್ಮನೆಪ್ರಾಣ-ತದ್ದೇಹಕ್ಕೆ ಚೈತನ್ಯಸ್ವರೂಪನಾಗಿರುವನು - ಈದೇಹಾತ್ಮರುಗಳೆಂಬೆರಡರ ಕೂಟವನ್ನು ಭೇದಿಸಿ- ತನ್ನ ಶೃತಿಮತಿ ಜ್ಞಾನದಿಂದ ವಿಚಾರಿಸಿ - ತಾನೆ ವೇದಾಂತಿ-ತಾನೆ ತಿಳಿದು ನೋಡಲು- ಆದಿ-ದೇಹದಲ್ಲಿ ಸಂಬಂಧವಪ್ಪ ಭೂತಂಗಳು-ಪೃಥ್ವೀಅಪ್ಪು ತೇಜಃ ವಾಯು ಆಕಾಶವೆಂಬೈದುತತ್ವಂಗಳು ನಾನಲ್ಲ ನಿಜಾತ್ಮಸ್ವರೂಪು ಅಲ್ಲ-ದಶವಿಧೇಂದ್ರಿಯಂಗಳು-ದಶವಾಯುಗಳು - ಅಂತರಂಗದಷ್ಟಮದಂಗಳು - ಬಹಿರಂಗದಷ್ಟಮದಂಗಳು ಅಷ್ಟಮೂರ್ತಿಮದಂಗಳು- ಅರಿಷಡ್ವರ್ಗಂಗಳು- ಷಡೂರ್ಮಿಗಳು- ಷಡ್ಭ್ರಮೆಗಳು- ಷಡ್ಭಾವವಿಕಾರಗಳು - ಅಸಿಮಸಿಕೃಷಿವಾಣಿಜ್ಯಯಾಚನಗೋಪಾಲತ್ವವೆಂಬಾರು ಕರ್ಮಗಳು-ಮತ್ತಂತುಮಲ್ಲದೆ- ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹವೆಂಬಾರು ಉದ್ಯೋಗಂಗಳು - ರಸರುಧಿರಮಾಂಸಮೇದಸ್ಸು ಅಸ್ಥಿಮಜ್ಜೆಯೆಂಬಾರು ಪ್ರಕಾರವಾದ ಧಾತುಗಳು- ಸಪ್ತವ್ಯಸನಗಳು - ತನುತ್ರಯಂಗಳು - ಜೀವತ್ರಯಂಗಳು - ಜೀವಾತ್ಮ-ಅಂತರಾತ್ಮ - ಪರಮಾತ್ಮರೆಂಬಾತ್ಮತ್ರಯಂಗಳು - ಮನ-ಮನನ- ಮನನೀಯವೆಂಬ ಮನತ್ರಯಂಗಳು- ಆಣವ-ಮಾಯಾ- ಕಾರ್ಮಿಕವೆಂಬ ಮಲತ್ರಯಂಗಳು- ಗುಣತ್ರಯಂಗಳು-ಸದ್ಭಾವತ್ರಯಂಗಳು - ದುರ್ಭಾವತ್ರಯಂಗಳು- ಅವಸ್ಥಾತ್ರಯಂಗಳು- ಇಹಲೋಕದ ತಾಪತ್ರಯಂಗಳು- ಪರಲೋಕದ ತಾಪತ್ರಯಂಗಳು ಮನ-ಬುದ್ಧಿ-ಚಿತ್ತ-ಅಹಂಕಾರಗಳೆಂಬ ಚತುಃಕರಣಂಗಳು- ಈಪ್ರಕಾರದಿಂದ ಹೇಳಲ್ಪಟ್ಟವು - ಇಪ್ಪತ್ತೈದೆಪ್ಪತ್ತೈದು ತತ್ವಂಗಳಾದಿಯಾಗಿ - ತೋರುವ ತೋರಿಕೆಯೇನೊ- ಈಸಕಲತತ್ವಂಗಳ ಸಾಕಾರಂಗಳೊಂದು ನಾನಲ್ಲ- ನಿಜಾತ್ಮಸ್ವರೂಪವು ಅಲ್ಲ- ನನ್ನವು-ಆತ್ಮಸಂಬಂಧವಾದ ತತ್ವಂಗಳಲ್ಲ - ಈಸಕಲ ತತ್ವಂಗಳು- ನನ್ನಾತ್ಮನ ಅಧೀನವಾಗಿಪ್ಪವು - ಚೈತನ್ಯವಿಡಿದು ಚೇಷ್ಟಿಸುತಿಹವು- ನಾನು ಆತ್ಮನು- ಈ ಸಕಲ ತತ್ವಂಗಳ, ಅಧೀನವಿಡಿದು ಚೇಷ್ಟಿ

ಸುಖಾತನಲ್ಲ - ಆತ್ಮನುಮತ್ತೆಂಥಾವನೈಯ್ಯ ಎಂದೊಡೆ-ತೂರ್ಯಾತೂರ್ಯಾ
ತೀತನಪ್ಪ- ತೂರ್ಯವೆಂದರೆ-ಅರಿವು-ಅತೂರ್ಯವೆಂದೊಡೆ- ಮರವೆ-ಅತೀತವ
ಪ್ಪ-ಅರಿವುಮರವೆಗಳೆರಡನುಮಿಾರಿತೋರುವ- ಸತ್ತು-ಉಂಟಾದ-ಚಿತ್ತು-
ಜ್ಞಾನಮಯವಾದ- ಆನಂದ-ಸುಖಸ್ವರೂಪವಾದ - ನಿತ್ಯ-ಶಾಶ್ವಿತವಾದ-ಪ
ರಿಪೂರ್ಣ - ಜಗದ್ವ್ಯಾಪಕತ್ವವನುಳ್ಳ ಪರಬ್ರಹ್ಮವೆ- ತನ್ನ ಆತ್ಮನ ಇರ
ವೆಂದು ತಿಳಿಯಲು-ಆತಿಳಿದ ಮಾತ್ರದಿಂದಲೆ ದೇಹದ ಬೆಸುಗೆಯೆಂವಿಸರ್ಜಿ
ಸಿ-ಅಡಿಮುಡಿ ಒಡಲಘಾತವಕಾಣಿಸಿಕೊಳ್ಳದ ಪರಬ್ರಹ್ಮದೊಳಗೆ-ತಾನೆಂಬ
ಭಾವವನು ಎಕರಸವಮಾಡಿ ಕೂಡಲರಿಯದೆ-ಮತ್ತೆಯು-ಹೀಗೆಂದು ತಿಳಿ
ದಬಳಿಕಲೂ- ತನಗೆ ಗುರುಕಾರುಣ್ಯಲಿಂಗಾಂಗ ಸಂಬಂಧವು-ದೊರಕೊಳ್ಳ
ದಕಾರಣ-ಪುನಃ ಪಂಚಭೂತಯುಕ್ತವಾದ ದೇಹದಲ್ಲಿ ಸಂಬಂಧಿಯಾಗಿ-
ಕೂಡಿರುತಿರಲು-ದೇಹದಲ್ಲಿ ದೇಹಿಕನಾಗೊಪ್ಪತಿರಲು-ಅದುಕಾರಣವಾಗಿ-
ಅವರುಗಳಿಗಾಪರಬ್ರಹ್ಮವು, ಹೋದ ಬಲಬುಬಂದ ಬಟ್ಟೆ- ನಿಂದ ನಿಲು
ಕಡೆ ಯೇನೆಂದು ತಿಳಿಯಬಾರದು - ಇಂತೀ ಆತ್ಮಾನಾತ್ಮ ತತ್ವಂಗಳಿಗೆ
ಮೂಲಕಾರಣವಾದ ಪರಬ್ರಹ್ಮವು - ತಾನುಸ್ವಾಗಿಪ್ಪುದಲೆ ಸ್ವಾಮಿಯೆಂ
ದು ಬೆಸಗೊಂಡೊಡೆ ಆ ಸಕಲ ತತ್ವಂಗಳಿಗುಪರಿಯಾಗಿ ತೋರುವ ಪರ
ವಸ್ತುವಪ್ಪ- ಶಾಶ್ವಿತವಾದ ನಿರಾಳ ಅಡಿಮುಡಿ ಒಡಲಘಾತವಕಾಣಿಸಿಕೊ
ಳ್ಳದ- ತನುಮನಕರಣ ಶೂನ್ಯವಾದಲಿಂಗವೇ ನಿಃಕಲಬ್ರಹ್ಮವು - ಇಲ್ಲಿಗೆ
ನಿಃಕಲ ಲಿಂಗಸ್ಥಲ - ತನ್ನ ಸಗುಣಾನಂದ ಲೀಲೆಗೊದಗಿದಂತಾದ್ದ ಚಿ
ತ್ತು- ಆಚಿತ್ತಿನ ವಿಳಾಸದಿಂದ ತಾನೆ ಆನಿಃಕ್ಕಲಲಿಂಗವು - ಆಚಿತ್ತಿನ ಚಿ
ನ್ನಾದವೆಸುನಾದ-ಆಚಿತ್ತುವಿನಚಿದ್ಬಿಂದುವೆ ಬಿಂದುಪ್ರಕಾಶ-ಆಚಿತ್ತುವಿನ
ಚಿತ್ಕಳೆಯೆ ಪ್ರಕಾಶ-ತೇಜೋಮೂರ್ತಿಯಾಗಿ ಈ ಚಿನ್ನಾದಚಿದ್ಬಿಂದು
ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು-ಘಟ್ಟಗೊಂಡು ಅಖಂಡಗೋಳ
ಕಾಕಾರ ತೇಜೋಮೂರ್ತಿಯಾಗಿನಿಂದು ಮಹಾಲಿಂಗವೆನಿಸಿತ್ತು. ಇಲ್ಲಿಗೆ
ಮಹಾಲಿಂಗಸ್ಥಲ-ಆ ಪರಿಪೂರ್ಣಪರಂಜ್ಯೋತಿ ಸ್ತಂಭಾಕಾರವಾದ ಮಹಾ
ಲಿಂಗವು ತಾನೊಂದೆ-ಕರ್ಮಸಾದಾಖ್ಯ- ಕರ್ತುಸಾಖ್ಯ-ಮೂರ್ತಿಸಾದಾಖ್ಯ
ಅಮೂರ್ತಿಸಾದಾಖ್ಯ- ಶಿವಸಾದಾಖ್ಯವೆಂಬೈದು ಸಾದಾಖ್ಯಲಿಂಗ ಸ್ವರೂ
ಪವತಳೆಯಿತು ಎಂಬಲ್ಲಿ ಕರ್ಮಸಾದಾಖ್ಯವೆ ಆಚಾರಲಿಂಗದೆಪ್ರಕಾಶ- ಕ
ರ್ತುಸಾದಾಖ್ಯವೆ ಗುರುಲಿಂಗಪ್ರಕಾಶ ಮೂರ್ತಿಸಾದಾಖ್ಯವೆ ಶಿವಲಿಂಗ

ಪ್ರಕಾಶ- ಅಮೂರ್ತಿಸಾದಾಖ್ಯವೆ ಜಂಗಮಲಿಂಗ ಪ್ರಕಾಶ - ಶಿವಸಾದಾಖ್ಯವೆ ಪ್ರಸಾದ ಲಿಂಗಪ್ರಕಾಶ ಸ್ವರೂಪವ ತಳೆಯಿತು. ಆ ಐದುಲಿಂಗದ ಬೆಳಗೆ ಪಂಚಮುಖವೆಂದೆನಿಸಿತು. ಎಂಬಲ್ಲಿ ಆಚಾರಲಿಂಗ ಪ್ರಕಾಶವೆ ಸದ್ಯೋಜಾತಮುಖ- ಗುರುಲಿಂಗ ಪ್ರಕಾಶವೆ ವಾಮದೇವಮುಖ- ಶಿವಲಿಂಗಪ್ರಕಾಶವೆ ಅಘೋರಮುಖ - ಜಂಗಮಲಿಂಗಪ್ರಕಾಶವೆ ತತ್ಪುರುಷಮುಖ - ಪ್ರಸಾದಲಿಂಗಪ್ರಕಾಶವೆ ಈಶಾನ್ಯಮುಖ - ಇವುಗಳ ಸ್ವರೂಪವನ್ನು ತಳೆಯಿತು. ಆ ಪಂಚಮುಖದಿಂದಲೆ ಪಂಚಾಕ್ಷರಂಗಳುತ್ಪತ್ತಿಯೆಂಬಲ್ಲಿ ಸದ್ಯೋಜಾತ ಮುಖದಿಂದ ನಕಾರ ಪ್ರಣಮವು - ವಾಮದೇವಮುಖದಿಂದ ಮಕಾರ ಪ್ರಣಮವು - ಅಘೋರಮುಖದಿಂದ ಶಿಕಾರ ಪ್ರಣಮವು - ತತ್ಪುರುಷಮುಖದಿಂದ ವಕಾರ ಪ್ರಣಮವು - ಈಶಾನ್ಯಮುಖದಿಂದ ಯಕಾರ ಪ್ರಣಮವು ಹುಟ್ಟಿದವು. ಆ ಪಂಚಾಕ್ಷರಂಗಳಿಂದಲೆ - ಪಂಚಕಲೆಗಳುತ್ಪತ್ತಿಯು ಎಂಬಲ್ಲಿ- ನಕಾರ ಪ್ರಣಮದಿಂದ ನಿವೃತಿಕಲೆ - ಮಕಾರಪ್ರಣಮದಿಂದ ಪ್ರತಿಷ್ಠಾಕಲೆ - ಶಿಕಾರ ಪ್ರಣಮದಿಂದ ವಿದ್ಯಾಕಳೆ - ವಕಾರಪ್ರಣಮದಿಂದ ಶಾಂತಿಕಲೆ - ಯಕಾರ ಪ್ರಣಮದಿಂದ ಶಾಂತಾತೀತಕಲೆಹುಟ್ಟಿದವು. ಆ ಪಂಚಕಲೆಗಳಿಂದಲೆ ಪಂಚಶಕ್ತಿಗಳುತ್ಪತ್ತಿ - ಅದುಹ್ಯಾಗೆ ನಿವೃತಿಕಲೆಯಿಂದ ಕ್ರಿಯಾಶಕ್ತಿ - ಪ್ರತಿಷ್ಠಾಕಲೆಯಿಂದ ಜ್ಞಾನಶಕ್ತಿ - ವಿದ್ಯಾಕಲೆಯಿಂದಿಚ್ಛಾಶಕ್ತಿ - ಶಾಂತಿಕಲೆಯಿಂದಾದಿಶಕ್ತಿ - ಶಾಂತಾತೀತಕಲೆಯಿಂದ ಪರಶಕ್ತಿಯು ಹುಟ್ಟಿದವು - ಆ ಪಂಚಶಕ್ತಿಗಳಿಂದಲೆ ಪಂಚಕರಣಂಗಳುತ್ಪತ್ತಿಯು ಎಂಬಲ್ಲಿ ಕ್ರಿಯಾಶಕ್ತಿಯಿಂದಚಿತ್ತ-ಜ್ಞಾನಶಕ್ತಿಯಿಂದಬುದ್ಧಿ-ಇಚ್ಛಾಶಕ್ತಿಯಿಂದ ಅಹಂಕಾರ-ಆದಿಶಕ್ತಿಯಿಂದಮನ- ಪರಶಕ್ತಿಯಿಂದಜ್ಞಾನವೆಂಬ ಕರಣಗಳು ಹುಟ್ಟಿದವು - ಪಂಚಕರಣಗಳಿಂದಲೆ ಪಂಚ ತನ್ಮಾತ್ರೆಗಳುತ್ಪತ್ತಿಯಾಯ್ತು - ಎಂಬಲ್ಲಿ ಚಿತ್ತವೆಂಬಕರಣದಿಂದ ಗಂಧವಿಷಯವು-ಬುದ್ಧಿಯೆಂಬ ಕರಣದಿಂದ ರಸವಿಷಯವು - ಅಹಂಕಾರವೆಂಬ ಕರಣದಿಂದ ರೂಪುವಿಷಯವು - ಮನವೆಂಬ ಕರಣದಿಂದ ಸ್ಪರ್ಶನ ವಿಷಯವು-ಜ್ಞಾನವೆಂಬ ಕರಣದಿಂದ ಶಬ್ದವಿಷಯವು ಪುಟ್ಟಿದವು - ಆಪಂಚತನ್ಮಾತ್ರೆಗಳಿಂದಲೆ ಪಂಚಭೂತಂಗಳುತ್ಪತ್ತಿಯು - ಗಂಧ ವಿಷಯದಿಂದ ಪೃಥ್ವೀ - ರಸವಿಷಯದಿಂದಅಪ್ಪು - ರೂಪುವಿಷಯದಿಂದಅಗ್ನಿ - ಸ್ಪರ್ಶ

ನ ವಿಷಯದಿಂದವಾಯು - ಶಬ್ದವಿಷಯದಿಂದ ಆಕಾಶವೆಂಬೈದು ತತ್ವಂಗಳು ಹುಟ್ಟಿದವು - ಇಲ್ಲಿಗೆ ಪಂಚಸಾದಾಖ್ಯಮೂರ್ತಿಲಿಂಗಸ್ಥಲ- ಆ ಪಂಚಭೂತಂಗಳೆ ಪಂಚೀಕರಣವನ್ನೈದಿ - ಒಂದೊಂದು ತತ್ವಂಗಳು - ಐದು ತತ್ವಗಳಲ್ಲಿಕೂಡಿ ಇಪ್ಪತ್ತೈದು ತತ್ವಗಳಾಗಿ ಆ ಇಪ್ಪತ್ತೈದು ತತ್ವಯುಕ್ತವಾದ ಶರೀರವು - ಶಿವಾಂಶಿಕನಾದ ಮೂಲಾತ್ಮನಿಗೆ ಅಂಗವಾಯ್ತು - ಇಲ್ಲಿಗೆ ಶರೀರ ಸಂಬಂಧಿಸ್ಥಲ- ಆದೇಹಕ್ಕೆ ಅರಿವು ರೂಪವಾದಿಂದ್ರಿಯಂಗಳು ಕ್ರಿಯಾರೂಪವಾದಿಂದ್ರಿಯಂಗಳು ಪ್ರತ್ಯಂಗವೆನಿಸಿತು. ದೇಹವಿದ್ದರೂ ಬೇರಾಗಿ ತೋರುತಿಹುದಾದಕಾರಣ ಪೃಥಕ್ಶರೀರವೆಂದೆ ಹೇಳಿಸಿಕೊಂಡಿತು. ಇಲ್ಲಿಗೆ ಸಂಸಾರ ಸಂಬಂಧಿಸ್ಥಲ. ಈ ಪ್ರಕಾರದಿಂದ ಹೇಳಲ್ಪಟ್ಟೀ ಶರೀರ ಸಂಬಂಧವನ್ನು ನಿಃಕಲ ಪರಶಿವನು ತನ್ನಯ - ಚಿದಂಶೀಭೂತನಾದ ಮೂಲಾತ್ಮಂಗೆ ಸಂಬಂಧಿಸಿ ಕೊಟ್ಟವನಾದಕಾರಣ ಇಲ್ಲಿಗೆ ಪಿಂಡಸ್ಥಲ - ಆಸ್ವಾಯತವಮಾಡಿಕೊಟ್ಟ ದೇಹಸಂಬಂಧವಾದ ಪೂರ್ವಾಶ್ರಯವು- ಇಪ್ಪತ್ತೈದುತತ್ವಂಗಳು ಯಾವಕಡೆಯಿಂದುಂಟಾಯ್ತು- ಎತ್ತಣಿಂದ ಬಂದು ದೊರಕೊಂಡಿತು ಎಂಬಲ್ಲಿ ಮೊದಲು ನಿರಾಕಾರವಾದ ನಿಃಕಲ ಬ್ರಹ್ಮವು-ಆನಿಃಕಲ ಬ್ರಹ್ಮನಿಂದ ಚಿತ್ತು ಆಚಿತ್ತಿನಿಂದ- ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಪುಟ್ಟದವು-ಅಚಿನ್ನಾದ ಚಿದ್ಬಿಂದುಚಿತ್ಕಳೆಮೂಲಚಿತ್ತೆಂಬ ಚತುರ್ವಿಧವು ಘಟ್ಟಿಕೊಂಡು ಆಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯ್ತು, ಆ ಮಹಾಲಿಂಗವೆ ಪಂಚಸಾದಾಖ್ಯಮೂರ್ತಿಯೆಂದನಿಸಿತು, ಆ ಪಂಚಸಾದಾಖ್ಯವೆ ಪಂಚಲಿಂಗಪ್ರಕಾಶವೆಂದನಿಸಿತು, ಆ ಪಂಚಲಿಂಗಪ್ರಕಾಶವೆ ಪಂಚಮುಖವೆನಿಸಿತು, ಆಪಂಚಮುಖದಿಂದಲೆ, ಪಂಚಾಕ್ಷರಂಗಳುತ್ಪತ್ತಿ, ಆಪಂಚಾಕ್ಷರಂಗಳಿಂದಲೆ, ಪಂಚಕಲೆಗಳುತ್ಪತ್ತಿ, ಆಪಂಚಕಲೆಗಳಿಂದಲೆ, ಪಂಚಶಕ್ತಿಗಳುತ್ಪತ್ತಿ, ಆಪಂಚಶಕ್ತಿಗಳಿಂದಲೆ ಪಂಚಕರಣಂಗಳುತ್ಪತ್ತಿ, ಆಪಂಚಕರಣಂಗಳಿಂದಲೆ, ಪಂಚತನ್ಮಾತ್ರೆಗಳುತ್ಪತ್ತಿ, ಆ ಪಂಚತನ್ಮಾತ್ರೆಗಳಿಂದಲೆ, ಪಂಚಭೂತಂಗಳುತ್ಪತ್ತಿ, ಆಪಂಚಭೂತಂಗಳೆಪಂಚಕರಣತ್ವವನ್ನೈದಿ ಒಂದೊಂದು ತತ್ವಂಗಳು ಐದು ಐದು ತತ್ವಂಗಳಸ್ವರೂಪವನ್ನುತಾಳಿ, ಇಪ್ಪತ್ತೈದು ತತ್ವಂಗಳಾಗಿ ಆಇಪ್ಪತ್ತೈದು ತತ್ವಾತ್ಮಕವಾದ, ಶರೀರವು ತನಗೆ ಬಂದು ದೊರಕೊಂಡಿತಲಾ ಎಂ

ದು ವಿವೇಕಿಸುವುದೇ ಪಿಂಡ ಜ್ಞಾನಸ್ಥಲಾ, ಅಲ್ಲಿಯೆ ಅಡಗಿಸಿ ಯಿದ್ದ ಮಿಷ್ಟಂ ತನ್ನಿಷ್ಟಂಎಂದು ಹೇಳುತಿಹುದಾದಕಾರಣ ಯಾವಲ್ಲಿ । ಹುಟ್ಟಿದನಸ್ತುವೆಂಬುದು ತಾನು ಅದರೊಳಗೆ ಅಡಗುತಿಹುದು, ಅದು ಹ್ಯಾಗೆಂದೊಡೆ, ಆ ದೇಹಸಂಬಂಧವಾದ ಇಪ್ಪತ್ತೈದು ತತ್ವಂಗಳನ್ನೆ, ಪಂಚಭೂತಂಗಳಲ್ಲಿ, ಪಂಚವಿಷಯಂಗಳನ್ನೆ, ಪಂಚಕರಣಂಗಳಲ್ಲಿ, ಆಪಂಚಕರಣಂಗಳನ್ನೆ, ಪಂಚಶಕ್ತಿಯರಲ್ಲಿ, ಆಪಂಚಶಕ್ತಿಗಳನ್ನೆ, ಪಂಚಕಲೆಗಳಲ್ಲಿ, ಆಪಂಚಕಲೆಗಳನ್ನೆ, ಪಂಚಾಕ್ಷರಂಗಳಲ್ಲಿ, ಆಪಂಚಾಕ್ಷರಂಗಳನ್ನೆ, ಪಂಚಮುಖಂಗಳಲ್ಲಿ, ಆಪಂಚಮುಖಂಗಳನ್ನೆ, ಪಂಚಲಿಂಗಪ್ರಕಾಶಂಗಳಲ್ಲಿ, ಆಪಂಚಲಿಂಗಪ್ರಕಾಶಂಗಳನ್ನೆ, ಪಂಚಸಾದಾಖ್ಯಂಗಳಲ್ಲಿ, ಆಪಂಚಸಾದಾಖ್ಯಂಗಳನ್ನೆ, ಮೇಲಣ ಮಹಾಸಾದಾಖ್ಯಸ್ವರೂಪವಾದ ಮಹಾಲಿಂಗದಲ್ಲಿ ಅಡಗಿಸಿ, ಮಹಾಲಿಂಗಸ್ವರೂಪವೆ ತಾನು ಎಂದು ತಿಳಿಯುವುದೆ ಸಂಸಾರ ಹೇಯಸ್ಥಲಾ, ಆಸಕಲ ಸಂಸಾರಪ್ರಪಂಚವನ್ನು ತಿರಸ್ಕರಿಸಿ ಗುರೂಪಾವಸ್ಥೆಯಂಮಾಡಲು, ಆವುಪಾವಸ್ಥೆಗೋಸ್ಕರ ನಿಃಕ್ಕಲ ಪರಶಿವನು ತಾನೆಗುರುವಾಗಿಬಂದು, ಕ್ರಿಯಾಘನ ಗುರುಮೂರ್ತಿಯಾಗಿ ಬಿಜಯಂಗೈದು, ಇಲ್ಲಿಗೆ ಗುರುಕಾರುಣ್ಯಸ್ಥಲಾ, ಆದೇಹಸಂಬಂಧವಾದ ಪೂರ್ವಾಶ್ರಯವಂ, ಇಪ್ಪತ್ತೈದು ತತ್ವಂಗಳವರ್ತನೆಯನ್ನು ನಷ್ಟವಮಾಡಿ ಇಪ್ಪತ್ತೈದುಮಂತ್ರ ತತ್ವಂಗಳಾಗಳವಡಿಸಿ । ಆಮಂತ್ರಾಂಗಕ್ಕೆ, ಮಹಾಘನಲಿಂಗವನ್ನು ವೇದಿಸಿ ಭಾವಾದಿನಯನಂಗಳಿಂದ ಬಹಿಷ್ಕರಿಸಿ ತನುವಿನ ವಾಮಭಾಗದ, ಕರಸ್ಥಳದಲ್ಲಿಪ್ಪ ಇಷ್ಟಲಿಂಗ ಲಕ್ಷಣವೆಂಬ ಕುಮಾರ ಮೂರ್ತಿಯಲ್ಲಿ; ವುದುಗೊಳಿಸಿ, ಆಚಿತ್ಕಲಾಲಿಂಗವನ್ನು ಕೊಟ್ಟು, ಸಂಬಂಧವಮಾಡಿಯಿತ್ತು, ಇಲ್ಲಿಗೆ ಲಿಂಗಧಾರಣಸ್ಥಲಾ, ಆಚಿತ್ಕಲಾಲಿಂಗವನ್ನು ಕೊಟ್ಟು, ಅಂಗಕ್ಕೆ ಸಂಬಂಧವಮಾಡಿ ಇತ್ತ ಸದ್ಗುರುದೇವನು, ಶಿಷ್ಯಗೆ, ಇಂದ್ರಿಯಂಗಳಲ್ಲಿ ಲಿಂಗಸಂಬಂಧವಮಾಡಿಕೊಂಡು ಆಚರಿಸುವಂತ ಷಟ್ಸ್ಥಲ ಜ್ಞಾನೋಪ ದೇಶವನ್ನು ಕರುಣಿಸಿಕೊಟ್ಟ ಪರಿಕ್ರಮವಂ, ತರುವಾಯದನಿಲುಕಡೆಯು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ ॥ ಮೂಲಾತ್ಮಸಹವಾಗಿ ಪಂಚಭೂತಂಗಳನ್ನೆ ಷಡಂಗವೆನಿಸಿ, ಅವರವರಮುದೆಗುಣ, ಅಂಶಗುಣಂಗಳಳಿದು, ಆರುಪ್ರಕಾರವಾದ ಅಂಗಂಗಳಾಗಿರ್ಪುವೆಂದು ತಿಳುಹಿ ಕೊಟ್ಟು, ಎಂಬಲ್ಲಿ ಪೃಥ್ವಿಯು

ಳಿದು, ಚಿತ್ಪೃಥ್ವಿಸ್ವರೂಪಿನಿಂದ ಭಕ್ತಂಗೆ, ಇದೇ ರೀತಿಯಲ್ಲಿ ಆತ್ಮನ ಳಿದು, ಚಿದಾತ್ಮ ಸ್ವರೂಪಿನಿಂದೈಕ್ಯಂಗೊಡಲಾಗಿಪ್ಪುದೆಂದು, ತಿಳಿಹಿಸಿ ಕೊಟ್ಟು,ಆಭಕ್ತಾದ್ಯೈಕ್ಯಾಂತವಾದ ಆರಂಗಕ್ಕೆ ನಿವೃತ್ತ್ಯಾದಿ ಶಾಂತಾತೀ ತೋತ್ತರಾಂತ್ಯವಾದ ಆರುಕಲೆಗಳನ್ನೆ, ಆರುಪ್ರಕಾರವಾದ ಶಕ್ತಿಗಳಾ ಗಿರ್ಪುವೆಂದು ತಿಳಿಹಿಸಿಕೊಟ್ಟು, ಎಂಬಲ್ಲಿ ನಿವೃತ್ತಿ ಕಲಾಪರಿಯಾಯನಾ ಮವನುಳ್ಳ ಕ್ರಿಯಾಶಕ್ತಿಯೆ ಭಕ್ತಂಗೆ ಇದೇರೀತಿಯಲ್ಲಿ, ಶಾಂತಾತೀ ತೋತ್ತರ ಕಲಾಪರಿಯಾಯನಾಮವನುಳ್ಳ ಚಿಚ್ಛಕ್ತಿಯೈಕ್ಯಂಗೆ ಶಕ್ತಿ ಯಾಗಿರ್ಪಳೆಂದು ತಿಳುಹಿಕೊಟ್ಟು, ಆಕ್ರಿಯಾದಿಚಿದಂತ್ಯವಾದ ಆರುಶ ಕ್ತಿಗಳಿಗೆ ಷಡ್ವಿಧಭಕ್ತಿಯಿಂದಳವಡಿಸಿ, ಅಂಗವಮಾಡಿಕೊಟ್ಟು ಎಂಬಲ್ಲಿ ಕ್ರಿಯಾಶಕ್ತಿಗೆ ಶ್ರದ್ಧಾಭಕ್ತಿ ಇದೇರೀತಿಯಲ್ಲಿ ಚಿಚ್ಛಕ್ತಿಗೆ ಸಮರಸಭ ಕ್ತಿಯನ್ನು, ಅಳವಡಿಸಿ ಅಂಗವನಾಡಿಕೊಟ್ಟು ಆಶ್ರದ್ಧಾದಿಸಮರಸಾಂ ತವಾದ ಆರುಭಕ್ತಿಗಳಿಗೆ, ಭಾವಜ್ಞಾನಮನ ಬುದ್ಧಿ ಚಿತ್ತ ಅಹಂಕಾರಂ ಗಳೆಂಬ ಷಟ್ಕರಣಂಗಳು ಷಡ್ವಿಧಹಸ್ತಂಗಳೆಂದೆನಿಸಿ ಅವರವರ ಪೂರ್ವ ಪ್ರವರ್ತನೆಯುಳ್ಳ ಆರುಪ್ರಕಾರವಾದ ಕರಣಂಗಳಾಗಿರ್ಪವೆಂದು ತಿಳಿ ಹಿಕೊಟ್ಟು ಎಂಬಲ್ಲಿ, ಕುಚಿತ್ತವಳಿದು ಸುಚಿತ್ತವೆ ಶ್ರದ್ಧಾಭಕ್ತಿಗೆ ಇದೇ ರೀತಿಯಲ್ಲಿ ದುರ್ಭಾವವಳಿದು ಸದ್ಭಾವವೆ ಸಮರಸಭಕ್ತಿಗೆ ಹಸ್ತವಾ ಗಿರ್ಪುದೆಂದು ತಿಳಿಹಿಕೊಟ್ಟು, ಆಸುಚಿತ್ತಾದಿ ಸದ್ಭಾವಾಂತ್ಯವಾದ ಆರು ಕರಕಮಲಂಗಳಿಗೆ, ಆಮಹಾಲಿಂಗವೆಮೊದಲಾದ ಪಂಚಲಿಂಗಗಳನೆ- ಐದು ತತ್ವಲಿಂಗಂಗಳನೆ-ಆರುಪ್ರಕಾರವಾದ ಲಿಂಗಂಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ ಸುಚಿತ್ತ ಹಸ್ತಕ್ಕೆ, ಆಚಾರಲಿಂಗವಿದೇರೀತಿಯ ಲ್ಲಿ ಸದ್ಭಾವಹಸ್ತಕ್ಕೆ ಮಹಾಲಿಂಗವೆ ಲಿಂಗವಾಗಿರ್ಪುದೆಂದು ತಿಳಿಹಿಕೊ ಟ್ಟು ಆಚಾರಾದಿ ಮಹಾಲಿಂಗಾಂತ್ಯವಾದ, ಆರುಲಿಂಗಂಗಳಿಗೆ, ಷಟ್ಪ್ರಣ ಮಂಗಳನ್ನೆ ಷಡ್ವಿಧಮಂತ್ರಂಗಳೆಂದೆನಿಸಿ ಆರುಪ್ರಕಾರವಾದ ಮಂತ್ರಂ ಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ, ಆಚಾರಲಿಂಗವನೆನಹುದಕ್ಕೆ ನಕಾರಪ್ರಣವವೆ ಮಂತ್ರ, ಇದೇ ರೀತಿಯಲ್ಲಿ ಮಹಾಲಿಂಗವನೆನಹುದ ಕ್ಕೆ ಓಂಕಾರಪ್ರಣವವೆ, ಮಂತ್ರವಾಗಿರ್ಪುದೆಂದು ತಿಳಿಹಿಕೊಟ್ಟು ಆಷ ಡಕ್ಷರ ಮಂತ್ರಸ್ವರೂಪವಾದ ಷಡ್ವಿಧಲಿಂಗಂಗಳಿಗೆ, ಹೃದಯೇಂದ್ರಿಯ ಸಹವಾಗಿ ಪಂಚೇಂದ್ರಿಯಂಗಳನ್ನೆ, ಆರುಪ್ರಕಾರವಾದ ವದನಂಗಳಾ

ಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ ನಕಾರಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಘ್ರಾಣೇಂದ್ರಿಯವೇಮುಖ ಇದೇ ರೀತಿಯಲ್ಲಿ, ಓಂಕಾರ ಮಂತ್ರ ಮೂರ್ತಿಯಾದ ಮಹಾಲಿಂಗಕ್ಕೆಹೃದಯೇಂದ್ರಿಯವೆ ವದನವಾಗಿ ರ್ಪುದೆಂದು ತಿಳಿಹಿಕೊಟ್ಟು,ಆಷಡ್ವಿಧವದನಂಗಳಿಗೆ, ಷಡ್ವಿಧವಿಷಯಂಗ ಳನ್ನೆ, ದ್ರವ್ಯಪದಾರ್ಥಂಗಳೆಂದೆನಿಸಿ, ನೈವೇದ್ಯದ್ರವ್ಯಂಗಳಾಗಿರ್ಪುದೆಂದು ತಿಳಿಹಿಕೊಟ್ಟು ಎಂಬಲ್ಲಿ ಘ್ರಾಣೇಂದ್ರಿಯ ಮುಖಕ್ಕೆ ಗಂಧವಿಷಯವೆ ಪ ದಾರ್ಥ, ಇದೇ ರೀತಿಯಲ್ಲಿ ಹೃದಯೇಂದ್ರಿಯ ಮುಖಕ್ಕೆ ತೃಪ್ತಿವಿಷಯ ವೆ ಪದಾರ್ಥವಾಗಿರ್ಪುದೆಂದು ತಿಳಿಹಿಕೊಟ್ಟು, ಆದ್ರವ್ಯ ಪದಾರ್ಥಂಗಳೆ, ಆನೈವೇದ್ಯ ದ್ರವ್ಯಂಗಳೆ ಆಯಾಯ ಮುಖದಲಿಂಗಂಗಳಲ್ಲಿ, ಆಷಡಿಂದ್ರಿ ಯಂಗಳನ್ನೆ, ವದನವಮಾಡಿಕೊಂಡಿರುವ ಷಡ್ವಿಧಲಿಂಗಂಗಳೊಳಗೆ ನಿ ರಂತರ,ಸಾವಧಾನದಿಂದ,ಅಷ್ಟವಿಧ ಸಕೀಲಂಗಳಿಂದರ್ಪಿತವಾಗಿ, ಸಮ ರ್ಪಣೆಯಾಗಿ ಎಂಬಲ್ಲಿ, ಪೃಥ್ವಿಯಳಿದು, ಚಿತ್ಪೃಥ್ವಿಯೆ ಒಡಲಾದ, ಭಕ್ತನು,ಸುಚಿತ್ತ ಹಸ್ತದಿಂದ ಸುಗಂಧ ಪದಾರ್ಥವಪಿಡಿದು, ತನ್ನ ಪ್ರಾ ಣಸ್ವರೂಪವಾದ ಆಚಾರಲಿಂಗಕ್ಕೆ ಕ್ರಿಯಾಶಕ್ತಿಯುಕ್ತವಾಗಿ ಶ್ರದ್ಧಾಭ ಕ್ತಿಯಿಂದ, ಘ್ರಾಣೇಂದ್ರಿಯ ಮುಖದಲ್ಲಿ, ನಕಾರಮಂತ್ರಸ್ಮರಣೆಯಿಂದ, ಇದೇರೀತಿಯಲ್ಲಿ, ಆತ್ಮನಳಿದು, ಚಿದಾತ್ಮನೆ ಒಡಲಾದೈಕ್ಯನೂ, ಸದ್ಭಾ ವಹಸ್ತದಿಂದ, ಸುತೃಪ್ತಿ ಪದಾರ್ಥಪಿಡಿದು, ತನ್ನ ಪ್ರಾಣಸ್ವರೂಪವಾದ ಮಹಾಲಿಂಗಕ್ಕೆ ಚಿಚ್ಛಕ್ತಿ ಯುಕ್ತವಾಗಿ ಸಮರಸಭಕ್ತಿಯಿಂದ,ಹೃದ ಯೇಂದ್ರಿಯಮುಖದಲ್ಲಿ, ಓಂಕಾರಮಂತ್ರಸ್ಮರಣೆಯಿಂದ, ಸಮರ್ಪಣೆ ಯಾಗಿ, ಬೇಗಲೊಡನೆ ಅಂಗಲಿಂಗದಾಚರಣೆ ನಿಃಪತಿಯಾದ ಕೂಡಲೆ, ಅಂಗಸ್ಥಲಂಗಳಡಗಿ, ಷಡ್ವಿಧಲಿಂಗಂಗಳಾಚರಣೆಯೆ ತ್ರಿವಿಧಾಂಗಲಿಂಗಂ ಗಳಲ್ಲಿ, ಲೀನವಾಗಿ, ತ್ರಿವಿಧಲಿಂಗಾಂಗಸ್ಥಲಂಗಳಳಿದು ತ್ರಿವಿಧಾಂಗಲಿಂಗಂ ಗಳಾಚರಣೆಯುಳಿದು ಅವಶೇಷವಾಗಿ ಕಾಯಗುರು ಆಚಾರಗುರು ಸಂ ಬಂಧವೆಂದು ಹೇಳುತ್ತಿಹುದಾದಕಾರಣ ಅಂಗಾಪ್ತಸ್ಥಾನ ಸದ್ಭಾವವೆಂಬ ಚತುರ್ವಿಧ ಭಕ್ತಿಯ ಮಾಡುವ ಸೇವೆದಿಂದ ಅಂಗವೆಂಬ ಪದಾರ್ಥವನ್ನು ಗುರುವಿಂಗೆ ಸಮರ್ಪಿಸಲೂ, ಆ ಗುರುವರ್ಪಿಸಿಕೊಂಡ ಅಂಗವೆಲ್ಲಾ ಗು ರುಸ್ವರೂಪವಾಗಿರ್ಪುದು, ಪ್ರಾಣಲಿಂಗ, ಇಷ್ಟಾರ್ಥಲಿಂಗಸಂಹಿತೆಯೆಂ ದು ಹೇಳುತ್ತಿಹುದಾದ ಕಾರಣ, ಅಷ್ಟವಿಧಾರ್ಚನೆ ಷೋಡಶೋಪಚಾ

ಕಂಗಳಂ ಮಾಡುವ ಭಕ್ತಿಯ ಸೇವದಿಂದ, ಪ್ರಾಣದ್ರವ್ಯ ಪದಾರ್ಥವನ್ನು
ಲಿಂಗಕ್ಕೆ ಸಮರ್ಪಿಸಲೂ, ಆಲಿಂಗ ಸಮರ್ಪಿಸಿಕೊಂಡ ಪ್ರಾಣದ್ರವ್ಯಪ
ದಾರ್ಥವೆಲ್ಲಾ ಲಿಂಗಸ್ವರೂಪವಾಗಿರ್ಪುದು, ಜ್ಞಾನ, ಜ್ಞಾನಜಂಗಮ,
(ಸುಜ್ಞಾನಂಜಂಗಮಶ್ಚೈವ) ಎಂದು ಹೇಳುತ್ತಿಹುದಾದಕಾರಣ, ಅ
ನ್ನವಸ್ತ್ರಗಂಧಮಣಿಭೂಷಣ ತಾಂಬೂಲವನಿತಾಗೀತ ಮುಂತಾದ ಸ
ಕಲ ಪದಾರ್ಥಂಗಳಂಕೊಟ್ಟು ಮಾಡುವ ಭಕ್ತಿಯ ಸೇವದಿಂದ ಜ್ಞಾನ
ದ್ರವ್ಯಪದಾರ್ಥವನ್ನು ಜಂಗಮಕ್ಕೆ ಸಮರ್ಪಿಸಲೂ, ಆ ಜಂಗಮವರ್ಪಿ
ಸಿಕೊಂಡ ಜ್ಞಾನದ್ರವ್ಯ ಪದಾರ್ಥವೆಲ್ಲಾ ಜಂಗಮ ಸ್ವರೂಪವಾಗಿರ್ಪು
ದು, ಗುರುವಿನಲ್ಲಿ ಶುದ್ಧಪ್ರಸಾದ, ತನಗೇ ದೀಕ್ಷಾತ್ರಯಂಗಳಿಂದ ಅಂ
ಗಕ್ಕೆ ಲಿಂಗಸಂಬಂಧವನ್ನು ಕರುಣಿಸಿಕೊಟ್ಟಂಥಾ, ಸದ್ಗುರುದೇವಂಗೆ
ಸಕಲಪದಾರ್ಥಂಗಳ ಸಮರ್ಪಿಸಲೂ ಆಗುರುಸಮರ್ಪಿಸಿಕೊಂಡು, ಆಗು
ರುಮುಖದಿಂದುಳುಮೆಯಾಗಿ ಬಂದುದೇ ಶುದ್ಧಪ್ರಸಾದ, ಲಿಂಗದಲ್ಲಿ ಸಿ
ದ್ಧಪ್ರಸಾದ, ಆಗುರುಮುಖದಿಂ ಬಂದ ಇಷ್ಟಲಿಂಗಕ್ಕೆ ಸಕಲಪದಾ
ರ್ಥಂಗಳ ಸಮರ್ಪಿಸಲು, ಆಲಿಂಗಸಮರ್ಪಿಸಿಕೊಂಡು ಆಲಿಂಗಮುಖದಿಂ
ದುಳುಮೆಯಾಗಿ, ಬಂದುದೆ ಸಿದ್ಧಪ್ರಸಾದ ಜಂಗಮದಲ್ಲಿ ಪ್ರಸಿದ್ಧಪ್ರ
ಸಾದ, ಶ್ರೀಗುರುವಿಗೂ ಲಿಂಗಕ್ಕೂ ಪ್ರಾಣಕಳಾಚೈತನ್ಯಸ್ವರೂಪನಾ
ದ ಚರಲಿಂಗಕ್ಕೆ ಸಕಲ ಪದಾರ್ಥಂಗಳ ಸಮರ್ಪಿಸಲೂ, ಆಜಂಗಮ
ಅರ್ಪಿಸಿಕೊಂಡು ಆಜಂಗಮ ಮುಖದಿಂದುಳಿಮೆಯಾಗಿ ಬಂದುದೆ, ಪ್ರಸಿ
ದ್ಧಪ್ರಸಾದ, ಈಪ್ರಕಾರದಿಂದ ಹೇಳಲ್ಪಟ್ಟಿತ್ರಿವಿಧ ಪ್ರಸಾದವು,ಈ ಶು
ದ್ಧ-ಸಿದ್ಧ-ಪ್ರಸಿದ್ಧವೆಂಬ ಮೂರುಪ್ರಸಾದಂಗಳೂ, ಒಂದರೊಳಗೊಂ
ದು ಸಮರಸವಾಗಿ ಎಂಬಲ್ಲಿ, ಶುದ್ಧವೆ ಸಿದ್ಧದಲ್ಲಿ, ಸಿದ್ಧವೆ ಪ್ರಸಿದ್ಧದಲ್ಲಿ
ಪ್ರಸಿದ್ಧವೆ ಚಿಕ್ಕಲಾ ಪ್ರಸಾದದಲ್ಲಿ, ಸಮರಸವಾಗಿ, ಮಹಾ, ದೊಡ್ಡಿ
ತ್ತಾದ, ಘನ। ಸಾಂದ್ರವಾದ, ಪರಿಪೂರ್ನ, ಜಗದ್ವ್ಯಾಪಕತ್ವವನುಳ್ಳ।
ಪ್ರಸಾದಂ, ಚಿತ್ಕಲಾ ಪ್ರಸಾದದಲ್ಲಿ, ಕೂಡುವ ಕೂಟವೂ, ಅಳವಟ್ಟು
ಅಂಗವಾದ ಶಿವಶರಣನು, ಜ್ಞಾನಿಯಲ್ಲಾ ಘಟಪಟಾದಿಗಳ ಇದಿರಿಟ್ಟು
ಕೊಂಡರಿವ್ರೋಪಾದಿಯಲ್ಲಿ, ತನ್ನಿಂದ ವಸ್ತುವ ಬಿನ್ನವಿಟ್ಟುಕೊಂಡು ತಿ
ಳಿವ ಖಂಡಿತಜ್ಞಾನಿಯು,ಅಲ್ಲಾ ಅಜ್ಞಾನಿಮುಂನವೇ ಅಲ್ಲಾ, ತನ್ನಲಿಂಗದ
ನಿಜವನು ತಿಳಿಯದೆ ಇರುವ ಮತ್ತಜ್ಞಾನಿಯು ಮುನ್ನವೆ. ಅಲ್ಲಾ,

ಶೂನ್ಯನಲ್ಲಾ ಜೀವನವರ್ತನೆ ವುಳ್ಳಾತನು ಅಲ್ಲಾ, ನಿಶ್ಶೂನ್ಯೇಪರ
ಮನವರ್ತನೆ ವುಳ್ಳಾತನು ಮುಂನವೇ ಅಲ್ಲಾ, ದ್ವೈತಿಯಲ್ಲಾ, ಲಿಂಗಾಂ
ಗವೆರಡಕ್ಕೆ ಭಿನ್ನವಿಟ್ಟುಕೊಂಡು ಪೂಜಿಸಿ ಫಲಪದಂಗಳ ಪಡೆದನುಭವಿ
ಸಿ ಭವವನ್ನೈಯ್ದಿ ಹೋಗುವ ಸಿದ್ಧಾಂತ ಮಾರ್ಗವುಳ್ಳಾತನು, ಅಲ್ಲಾ
ಅದ್ವೈತಿಮುನ್ನವೆ ಅಲ್ಲಾ, ಆತ್ಮಾಯೇಕೇವಲಶ್ಶಿವಃ, ಆತ್ಮನೆ ಬ್ರಹ್ಮ
ವೆಂದು ನುಡಿವ ವೇದಾಂತ ಮಾರ್ಗವುಳ್ಳಾತನು, ಮುನ್ನವೇ ಅಲ್ಲಾ,
ಈಪ್ರಕಾರದಿಂದ ಪೇಳಲ್ಪಟ್ಟೀ ಉಭಯಾತ್ಮಕ ತಾನೆಯಾಗಿ ಈ ಎರಡ
ರ ಸ್ವರೂಪವಾಗಿರುವ ಪರಬ್ರಹ್ಮವೇ ಶಿವಶರಣತಾನಾಗಿ, ಇದುಕಾರಣ
ಈಷಟ್ಸ್ಥಲಂಗಳು, ಆಗು, ಆಗೆ, ಮಹಾಲಿಂಗ- ಆ ಮಹಾಲಿಂಗದಿಂದ,
ಐಕ್ಯ-ಐಕ್ಯನಿಂದ, ಶರಣ, ಶರಣನಿಂದ, ಪ್ರಾಣಲಿಂಗಿ, ಪ್ರಾಣಲಿಂಗಿಯಿಂದ
ಪ್ರಸಾದಿ, ಪ್ರಸಾದಿಯಿಂದ, ಮಹೇಶ್ವರ, ಮಹೇಶ್ವರನಿಂದ, ಭಕ್ತ, ಆಭ
ಕ್ತನಿಂದ, ಸರ್ವಾಚಾರ ಸಂಪತ್ತಿನಾಚರಣೆಯೆಲ್ಲಾ, ಆದಂಥಾದ್ದೀಗ, ಆ
ಗು, ಹೋಗು, ಆಸರ್ವಾಚಾರ ಸಂಪತ್ತಿನಾಚರಣೆವಿಡಿದು, ಆಚರಿಸುವ
ಪರಿಯಂತರವೂ, ಆಚರಿಸಿ, ಆ ಆಚರಣೆಯು ಸಮಾಪ್ತಿಯಾದಬಳಿಕ
ಆಸರ್ವಾಚಾರ ಸಂಪತ್ತಿನಾಚರಣೆಯೆಲ್ಲಾ ಭಕ್ತನಲ್ಲಿ ಅಡಗಲೂ, ಆ ಭ
ಕ್ತನೇ ಮಹೇಶ್ವರನಲ್ಲಿ, ಮಹೇಶ್ವರನೇ ಪ್ರಸಾದಿಯಲ್ಲಿ, ಪ್ರಸಾದಿಯೆ
ಪ್ರಾಣಲಿಂಗಿಯಲ್ಲಿ, ಪ್ರಾಣಲಿಂಗಿಯೆ, ಶರಣನಲ್ಲಿ, ಶರಣನೆ ಐಕ್ಯನಲ್ಲಿ, ಆ
ಐಕ್ಯನೆ, ಮಹಾಲಿಂಗದಲ್ಲಿ, ಅಡಗಿಹೋದಂಥಾದ್ದೀಗ, ಹೋಗು ಭಕ್ತನ
ಅಷ್ಟವಿಧಸಕೀಲ ಮಹೇಶ್ವರ ಅಷ್ಟವಿಧಸಕೀಲ ಪ್ರಸಾದಿಯು ಅಷ್ಟ
ವಿಧಸಕೀಲ, ಪ್ರಾಣಲಿಂಗಿಯ ಅಷ್ಟವಿಧಸಕೀಲ, ಶರಣನ ಅಷ್ಟವಿಧ
ಸಕೀಲ, ಐಕ್ಯನ ಅಷ್ಟವಿಧಸಕೀಲಸಂಬಂಧವು, ಭಕ್ತ ಅಷ್ಟವಿಧಸ
ಕೀಲವೇ ಇಷ್ಟಲಿಂಗದ ಶಕ್ತಿಪೀಠದಲ್ಲಿ, ಮಹೇಶ್ವರನ ಅಷ್ಟವಿಧಸಕೀಲ
ವೇ, ಇಷ್ಟಲಿಂಗದ ಕಟಿಯಲ್ಲಿ, ಪ್ರಸಾದಿಯ ಅಷ್ಟವಿಧಸಕೀಲವೆ, ಇಷ್ಟ
ಲಿಂಗದ ವರ್ತುಳದಲ್ಲಿ, ಪ್ರಾಣಲಿಂಗಿಯ ಅಷ್ಟವಿಧಸಕೀಲವೇ, ಇಷ್ಟ
ಲಿಂಗದ ಗೋಮುಖದಲ್ಲಿ, ಶರಣನ ಅಷ್ಟವಿಧಸಕೀಲವೇ, ಇಷ್ಟಲಿಂಗ
ದನಾಳದಲ್ಲಿ, ಐಕ್ಯನ ಅಷ್ಟವಿಧಸಕೀಲವೆ, ಇಷ್ಟಲಿಂಗದ ಗೋಮುಖ
ದಲ್ಲಿ, ಸ್ವಾಯತವಾಗಿರುವಂಥಾ ನಿಲುಕಡೆಯನು ಚನ್ನ, ಕಾಯಕಾಂತಿ
ಯಲಾವಣ್ಯವನುಳ್ಳಂಥಾ ಮಲ್ಲಿಕಾ, ಮಲ್ಲಿಗೆಹುವ್ವಿನೋಪಾದಿಯಲ್ಲಿ, ಅರ್ಜು

ನೆ, ಧವಳಾಂಗವನುಳ್ಳ ಅಯ್ಯಾಯೆಲೆ ಸ್ವಾಮಿಯೆಂಬುದೆಸರಿ, ಮತ್ತಂತು ಮಲ್ಲದೆ, ಚನ್ನೆಯೆಂದಡೆ, ಮಾದಾರಚನ್ನಯ್ಯಗಳು, ಮಲ್ಲಿಕಾಯೆಂದಡೆ, ಮಲ್ಲಿಕಾವೇದಿಯು, ಅರ್ಜುನೈಯ್ಯಯೆಂದಡೆ, ಕಿರೀಟಿಯು ಐಯ್ಯ- ನಿಮ್ಮ ಭಕ್ತರಾದ - ಈಮುವ್ವರಭಿಧಾನದಿಂದ - ಕರಸಿಕೊಳ್ಳಪ್ಪಟ್ಟಲೆ ಲಿಂಗವೆ = ನಿಮ್ಮ ಶಿವಶರಣರೆ ತಿಳಿದಿರ್ಪರು-ಮಿಕ್ಕಿನ ಅಜ್ಞಾನಜೀವಿಗಳೊರ್ವರಿಗೂ ತಿಳಿಯಬಾರದು- ಎಂಬಶಬ್ದಕ್ಕರ್ಥವು.

ಶ್ರೀ ಅಕ್ಕಗಳ ವಚನವು ಸಂಪೂರ್ಣವು.

---

## ಶ್ರೀ ಪ್ರಭುದೇವರ ಸೃಷ್ಟಿವಚನವು.



ಸ್ವತಂತ್ರಕರ್ತೃವಾದ ಅಲ್ಲಮ ಪ್ರಭುಸ್ವಾಮಿಗಳೆಂಬ ನಿರಂಜನ ಗಣಾಧೀಶ್ವರನು-ನಿರೂಪಿಸಿದ ಸೃಷ್ಟಿವಚನ-ಊರ್ಧ್ವಸೃಷ್ಟಿ ಅಧೋ ಸೃಷ್ಟಿಗಳ ಕ್ರಮವನ್ನು ಹೇಳುವ ವಚನ-ಮತ್ತಂತುಮಲ್ಲದೆ-ಅಂಗ ಲಿಂಗೋದ್ಭವಂಗಳ ಸ್ವರೂಪವನ್ನು ಹೇಳುವ ವಚನ - ಮೊಟ್ಟ ಮೊದಲೊಳಗೆ ಬ್ರಹ್ಮವು-ಏನೇನು ಇಲ್ಲದಂದು-ಅಷ್ಟತನು ಶಿವಶಕ್ತಿಗಳ ಸಾಕಾರಗಳೊಂದು ಕುರುಹು ಕಾಣಿಸದಕಾಲದಲ್ಲಿ- ಮಹಾ ದೊಡ್ಡಿತ್ತಾದ-ಘನ-ಸಾಂದ್ರವಾದ-ಶೂನ್ಯ- ತನುಶೂನ್ಯ- ಮನಶೂನ್ಯ- ಕರಣಶೂನ್ಯವಾದ ಬ್ರಹ್ಮನಾಗೊಪ್ಪುತಿರ್ದುದು-ಅಂತಿರ್ದಹಾಗೆ-ನಿರವಯನಿರಾಕಾರವಾಗೊಪ್ಪುತ್ತಿರ್ದ ಪರವಸ್ತುತಾನೆ-ತನ್ನಯ ಮನೋಹರವಾದ- ಸಗುಣಾನಂದ ಲೀಲಾವಿನೋದಕ್ಕೊದಗಿದಂತಾದ್ದೆ-ಸ್ವಲೀಲಾ-ಆಸ್ವಲೀಲೆಯೆಚಿತ್ತು-ಆ ಚಿತ್ತಿನ ಸ್ವಭಾವದಿಂದ-ಆತ್ಮನೆಂದು-ಮೂಲಾತ್ಮನೆಂದು ಹೇಳುವ-ಅಂಗಸ್ಥಲವೊಂದಾದುದು-ಅದು ಹ್ಯಾಗೆಂದೊಡೆ-ಮೊದಲು ನಿಃಕಲಬ್ರಹ್ಮವು-ಆನಿಃಕಲಬ್ರಹ್ಮದಿಂದ ಚಿತ್ತು-ಆ ಚಿತ್ತುವಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಪುಟ್ಟಿದವು -ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು ಘಟ್ಟಿಕೊಂಡು - ಅಖಂಡಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು-ಆ ಮಹಾಲಿಂಗದಿಂದ

ಸದಾಶಿವಮೂರ್ತಿ ಪುಟ್ಟಿದನು-ಆ ಸದಾಶಿವನ ಪಂಚಮುಖದಿಂದ ಪಂಚ ಭೂತಂಗಳು ಪುಟ್ಟಿದವು-ಗೋಪ್ಯಮುಖದಲ್ಲಿ ಆತ್ಮನು ಪುಟ್ಟಿದನು-ಅಂತಪ್ಪ ಪರಬ್ರಹ್ಮದಿಂದಾದ-ಚಿದಾತ್ಮನೆಂಬಜ್ಞಾನಕಲಾತ್ಮನೆಂದು ಹೇಳುವ-ಅಂಗಸ್ಥಲವೊಂದಕ್ಕೆ ಕವಲಿಗೆಯಾಗಿ ಸೇರಿದ-ಇಪ್ಪತ್ತೈದು ತತ್ವಂಗಳು-ಅವೆಂತಾವೆಲೆಸ್ವಾಮಿಯೆಂದು ಬೆಸಗೊಂಡೊಡೆ-ಅರಿವುರೂಪವಾದ ಶ್ರವಣಾದಿ ಇಂದ್ರಿಯಂಗಳೈದು-ಕರ್ಮಕ್ರಿಯಾರೂಪವಾದ ವಾಗಾದಿ ಇಂದ್ರಿಯಂಗಳೈದು - ಶಬ್ದವಿಷಯವೆ ಮೊದಲಾದವಿಷಯಂಗಳೈದು-ಪ್ರಾಣಾದಿ ವಾಯುಗಳೈದು-ಮನಃ-ಬುದ್ಧಿ-ಚಿತ್ತ-ಅಹಂಕಾರ-ಮೂಲಾತ್ಮನೆಂಬ ಅಂತಃಕರಣಂಗಳೈದು-ಈಪ್ರಕಾರದಿಂದ ಹೇಳಲ್ಪಟ್ಟವುಗಳಿಂದ ಕೂಡಿರುವುದೆ ಅಂಗವು-ತನ್ನಲ್ಲಿ ಏಕಾರ್ಥವಾಗಬೇಕೆಂಬನಿಮಿತ್ಯ ಭಕ್ತಿಹಿತಾರ್ಥವಾಗಿ - ಜೀವಾಪ್ಯೈತ ಭಕ್ತಿಕಾರ್ಣಾರ್ಥವಾಗಿ ಶಿಷ್ಯಸ್ಯಪಾವಸ್ಥೆ-ಭಕ್ತಿನಿಮಿತ್ಯರ್ಥವಾಗಿ ಎಂಬುವದು ಸರಿ-ಮತ್ತಂತೆಯಲ್ಲದೆ-ಜ್ಞಾನೋದಯವಾಗಡಿಗೆರಗಬಂದ ಜ್ಞಾನಕಲಾತ್ಮನ ವಿಶ್ವಾಸಕ್ಕೋಸ್ಕರ-ಪರಾತ್ಪರವಪ್ಪ-ಆವುದು ಪರವಾಗಿಹುದೋ-ಅದಕ್ಕೆ ಪರವಾದ-ಮನೋಹರವಾದ ಮಹಾಲಿಂಗವುತಾನೆ-ಹನ್ನೊಂದು ತೆರನಾಯಿತು-ಏಕಾದಶ ತತ್ವಸ್ವರೂಪವನ್ನು ತಳೆಯಿತು-ಇಂತು ಏಕಾದಶ ತತ್ವಸ್ವರೂಪವನ್ನುತಾಳಿದಪರಿ ಕ್ರಮಂ-ತರುವಾಯದ ನಿಲುಕಡೆಯು-ಹ್ಯಾಗಿಪ್ಪುದೆಲೆಸ್ವಾಮಿಯೆಂದುಬೆಸಗೊಂಡೊಡೆ-ಶಾಂತಿಶಕ್ತಿಯೆ ಮೊದಲಾದ ಶಕ್ತಿಗಳೈದು-ಶಿವಸದಾಖ್ಯವೆ ಮೊದಲಾದ ಕರ್ತೃಗಳೈದು-ಈ ಎಲ್ಲಕ್ಕುಪರಿಯಾಗಿ ತೋರುವ ಮೇಲಣ ಮಹಾಲಿಂಗತತ್ವ ತಾನೊಂದು-ಪ್ರಥಮದಲ್ಲಿ ನಿರೂಪಣವಪಾಲಿಸಿದ-ಅಂಗಸಂಬಂಧವಾದ ತತ್ವಂಗಳಿಪ್ಪತ್ತೈದು ಲಿಂಗಸಂಬಂಧವಾದ ತತ್ವಗಳು ಹನ್ನೊಂದು-ಅಂಗಲಿಂಗ ಸಂಬಂಧವಾದುಭಯತತ್ವಂಗಳು ಕೂಡಿ ಮುವ್ವತ್ತಾರು ತತ್ವಂಗಳಾದವು-ಈ ಮುವ್ವತ್ತಾರು ತತ್ವಂಗಳ ಸಮರಸೈಕ್ಯವೆಂಬುವದು ಸರಿ-ಅಂಗತತ್ವವಿಪ್ಪತ್ತೈದು ಕಲಾಶಕ್ತಿಯರ ಬಲದಿಂದ-ಸಾದಾಖ್ಯಂಗಳಲ್ಲಿ ಸಮರಸವಾಗುವ ನಿಲುಕಡೆಯು-ಹ್ಯಾಗಿಪ್ಪುದೆಲೆಸ್ವಾಮಿಯೆಂದು ಬೆಸಗೊಂಡೊಡೆ ಕರ್ಮಕ್ರಿಯಾರೂಪವಾದ ವಾಗಾದಿ ಇಂದ್ರಿಯಂಗಳೈದು-ನಿವೃತ್ತಿಕಲಾಪರ್ಯಾಯನಾಮವನುಳ್ಳಕ್ರಿಯಾಶಕ್ತಿಯನ್ನುಕೂಡಿ ಎಂಬಲ್ಲಿ - ಶಿವ ಎಂಬುದೆವಾಕ್ಕು - ಶಿವಾಚಾರವನ್ನು

ದೃಢವಿಡುವುದೆಪಾಣಿ - ಗುರುಮಾರ್ಗಾಚಾರದಲ್ಲಿ ಆಚರಿಸುವುದೆ ಪಾದ-
ಅಧೋಗತಿಗಿಳಿಸುವ ಮಲತ್ರಯಂಗಳನ್ನು ವಿಸರ್ಜಿಸಿಬಿಡುವುದೆ ಪಾಯು
ಶಿವಾನುಭಾವಿಗಳ ಸತ್ಸಂಗದಲ್ಲಿ - ಸದಾ ಆನಂದಿಸುವುದೆ ಗುಹ್ಯವು-ಈ
ರೀತಿಯಾಗಿ ವಾಗಾದಿ ಕರ್ಮೇಂದ್ರಿಯಂಗಳು- ನಿವೃತ್ತಿಯಾಗಿ-ನಿವೃತ್ತಿ
ಕಲಾಪರಿಯಾಯನಾಮವನುಳ್ಳ ಕ್ರಿಯಾಶಕ್ತಿಯನ್ನೈದಿ-ಆ ಕ್ರಿಯಾಶಕ್ತಿ
ಯ ಬಲದಿಂದ- ಕರ್ಮಸಾದಾಖ್ಯಸ್ವರೂಪವಾದ- ಆಚಾರಲಿಂಗವನ್ನೊ
ಡಗೂಡಿದಲ್ಲಿ - ಪೃಥ್ವೀತತ್ವ ಬಯಲಾಯಿತು - ಪೃಥ್ವಿಯಳಿದು ಚಿತ್ಪೃ
ಥ್ವಿಯ ಸ್ವರೂಪಿನಿಂದ - ಭಕ್ತಂಗೊಡಲಾಗಲೂ-ಆಭಕ್ತನು ಆಚಾರಲಿಂಗ
ದಂಗವಾಗಿ - ಆಚಾರಲಿಂಗದಲ್ಲಿಯೇ ಅಡಗಿದನು ಎಂಬುದರ್ಥ—ಶಬ್ದ
ವಿಷಯವೇ ಮೊದಲಾದೈದು ತನ್ಮಾತ್ರೆಗಳು-ಪ್ರತಿಷ್ಠಾಕಲಾಪರಿಯಾಯ
ನಾಮುವನುಳ್ಳ ಜ್ಞಾನಶಕ್ತಿಯನ್ನುಕೂಡಿ ಎಂಬಲ್ಲಿ ಶಬ್ದಗುರು-ಸ್ಪರುಶನ
ಲಿಂಗ-ರೂಪು ಶಿವಲಾಂಛನ - ರಸ ಶಿವಪ್ರಸಾದ - ಗಂಧಶಿವನಿರ್ಮಾಲ್ಯ-
ಶಬ್ದಾದಿ ವಿಷಯಂಗಳೈದು ನಿವೃತ್ತಿಯಾಗಿ - ಪ್ರತಿಷ್ಠಾಕಲಾಪರಿಯಾ
ಯನಾಮವನುಳ್ಳ ಜ್ಞಾನಶಕ್ತಿಯನ್ನುಕೂಡಿ - ಆ ಜ್ಞಾನಶಕ್ತಿಯಬಲ
ದಿಂದ - ಕರ್ತೃಸಾದಾಖ್ಯ ಸ್ವರೂಪವಾದ ಗುರುಲಿಂಗವನ್ನೊಡಗೂಡಿ
ದಲ್ಲಿ - ಅಪ್ಪುತತ್ವ ಬಯಲಾಯಿತು - ಅಪ್ಪುವಳಿದು - ಚಿದಪ್ಪುಸ್ವರೂಪಿ
ನಿಂದ-ಮಹೇಶ್ವರಂಗೊಡಲಾಗಲು-ಆ ಮಹೇಶ್ವರನು ಗುರುಲಿಂಗವಾಗಿ-
ಗುರುಲಿಂಗದಲ್ಲಿಯೆ ಅಡಗಿದನೆಂಬುದರ್ಥ-ಅರಿವುರೂಪವಾದ ಶ್ರವಣಾದಿ
ಇಂದ್ರಿಯಂಗಳೈದು-ವಿದ್ಯಾಕಲಾಪರಿಯಾಯನಾಮವನುಳ್ಳ ಇಚ್ಛಾಶಕ್ತಿ
ಯನ್ನುಕೂಡಿ ಎಂಬಲ್ಲಿ-ಶ್ರೋತ್ರದಲ್ಲಿ-ಶಿವಕಥಾ ಶಿವಪುರಾಣಾದ್ಯರ ವಚ
ನವಲ್ಲದೆ-ಅನ್ಯವಪ್ಪ ಮಾಯಾಕು ಶಾಸ್ತ್ರಕು ಭಾಷೆಗಳಂ ಕೇಳದಿಹು
ದು-ತ್ವಕ್ಕಿನಲ್ಲಿ-ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗಧಾರಣವಲ್ಲದೆ-ಅನ್ಯ
ವಪ್ಪ ಮಾಯಾಚೋಹಂಗಳಿಂ-ಧರಿಸದಿಹುದು-ನೇತ್ರದಲ್ಲಿ-ಶಿವಲಿಂಗನಿರೀ
ಕ್ಷಣೆಯಲ್ಲದೆ-ಅನ್ಯವಪ್ಪ ಮಾಯಾಕು ಶಾಸ್ತ್ರಕು ಭಾಷೆಗಳಂ ರೂಪಂ
ಗಳಂ ನೋಡದಿಹುದು-ಜಿಹ್ವೆಯಲ್ಲಿ-ಶಿವಸುಖ ಪ್ರಸನ್ನೇತಿ ಪ್ರಸಾದ
ಸ್ವೀಕಾರವಲ್ಲದೆ-ಅನ್ಯವಪ್ಪ ಮಾಯೋಚ್ಛಿಷ್ಟಂಗಳಂ ಭುಂಜಿಸದಿಹುದು
ಘ್ರಾಣದಲ್ಲಿ- ಶಿವನಿರ್ಮಾಲ್ಯ ಗಂಧವಲ್ಲದೆ-ಅನ್ಯವಪ್ಪ ಮಾಯಾ ದುರ್ವಾ
ಸನೆಯಾಘ್ರಾಣಿಸದಿಹುದು-ಈ ರೀತಿಯಲ್ಲಿ ಶ್ರೋತ್ರಾದಿ ಜ್ಞಾನೇಂದ್ರಿ

ಯೆಂಗಳೈದು ನಿವೃತ್ತಿಯಾಗಿ - ವಿದ್ಯಾಕಲಾಪರಿಯಾಯನಾಮವೆನುಳ್ಳ ಇಚ್ಛಾಶಕ್ತಿಯನ್ನು ಕೂಡಿ - ಆ ಇಚ್ಛಾಶಕ್ತಿಯ ಬಲದಿಂದ- ಮೂರ್ತಿ ಸಾದಾಖ್ಯಸ್ವರೂಪವಾದ ಶಿವಲಿಂಗವನ್ನೊಡಗೂಡಿದಲ್ಲಿ-ಅಗ್ನಿತತ್ವ ಬಯಲಾಯಿತು-ಅಗ್ನಿಯಳಿದು ಚಿದಗ್ನಿಸ್ವರೂಪಿನಿಂದ-ಪ್ರಸಾದಿಗೊಡಲಾಗಲು ಆಪ್ರಸಾದಿಯು ಶಿವಲಿಂಗದಂಗವಾಗಿ-ಆ ಶಿವಲಿಂಗದಲ್ಲಿಯೆ ಅಡಗಿದನೆಂಬುದರ್ಥ—ಪ್ರಾಣವಾಯುವೆ ಮೊದಲಾದ ವಾಯುಗಳೈದು-ಶಾಂತಿಕಲಾಪರಿಯಾಯನಾಮವನುಳ್ಳ-ಆದಿಶಕ್ತಿಯನ್ನು ಕೂಡಿ ಎಂಬಲ್ಲಿ-ಪ್ರಾಣವಾಯುವೆ ಸತ್ತು-ಅಪಾನವಾಯುವೆ ಚಿತ್ತು-ವ್ಯಾನವಾಯುವೆ ಆನಂದ=ಉದಾನವಾಯುವೆ ನಿತ್ಯ-ಸಮಾನವಾಯುವೆ ಪರಿಪೂರ್ಣ-ಈ ರೀತಿಯಲ್ಲಿ ಪ್ರಾಣಾದಿ ವಾಯುಗಳು- ಪಂಚಲಕ್ಷಣಸ್ವರೂಪಿನಿಂದ ನಿವೃತ್ತಿಯಾಗಿ- ಶಾಂತಿಕಲಾ ಪರಿಯಾಯನಾಮವನುಳ್ಳ ಆದಿಶಕ್ತಿಯನ್ನು ಕೂಡಿ ಆ ಆದಿಶಕ್ತಿಯಬಲದಿಂದ-ಅಮೂರ್ತಿ ಸಾದಾಖ್ಯಸ್ವರೂಪವಾದ-ಜಂಗಮಲಿಂಗವನ್ನೊಡಗೂಡಿದಲ್ಲಿ-ವಾಯುತತ್ವ ಬಯಲಾಯ್ತು-ವಾಯುವಳಿದು-ಚಿದ್ವಾಯುಸ್ವರೂಪಿನಿಂದ-ಪ್ರಾಣಲಿಂಗಿಗೊಡಲಾಗಲೂ-ಆ ಪ್ರಾಣಲಿಂಗಿಯು ಜಂಗಮಲಿಂಗಕ್ಕಂಗವಾಗಿ- ಆ ಜಂಗಮಲಿಂಗದಲ್ಲಿಯೆ ಅಡಗಿದನೆಂಬುದರ್ಥ— ಮನ-ಬುದ್ಧಿ-ಚಿತ್ತ-ಅಹಂಕಾರ-ಮೂಲಾತ್ಮನೆಂಬೈದಂತಃಕರಣಂಗಳು ಶಾಂತಾತೀತ ಕಲಾಪರಿಯಾಯನಾಮವನುಳ್ಳ ಪರಶಕ್ತಿಯನ್ನು-ಕೂಡಿ ಎಂಬಲ್ಲಿ-ಮನದಲ್ಲಿ ಶಿವಧ್ಯಾನ-ಬುದ್ಧಿಯಲ್ಲಿ ನಿರ್ವಂಚನೆ-ಚಿತ್ತದಲ್ಲಿ ದಾಸೋಹ-ಅಹಂಕಾರದಲ್ಲಿ ನಿರಹಂಕಾರ-ಜೀವನಳಿದು ಸಜ್ಜೀವ-ಈರೀತಿಯಲ್ಲಿ ಮನಸಾದಿ ಕರಣಂಗಳೈದು ನಿವೃತ್ತಿಯಾಗಿ-ಶಾಂತಾತೀತ ಕಲಾಪರಿಯಾಯನಾಮವನುಳ್ಳ ಪರಶಕ್ತಿಯನ್ನು ಕೂಡಿ ಎಂಬಲ್ಲಿ- ಆ ಪರಶಕ್ತಿಯ ಬಲದಿಂದ-ಶಿವಸಾದಾಖ್ಯಸ್ವರೂಪವಾದ- ಪ್ರಸಾದಲಿಂಗವನ್ನೊಡಗೂಡಿದಲ್ಲಿ-ಆಕಾಶತತ್ವ ಬಯಲಾಯ್ತು-ಆ ಆಕಾಶವಳಿದು-ಚಿದಾಕಾಶಸ್ವರೂಪಿನಿಂದ ಶರಣಂಗೊಡಲಾಗಲು—ಆ ಶರಣನು ಪ್ರಸಾದಲಿಂಗದಂಗವಾಗಿ - ಪ್ರಸಾದಲಿಂಗದಲ್ಲಿಯೆ ಅಡಗಿದನೆಂಬುದರ್ಥ — ಇಂತು ಈ ದೇಹಸಂಬಂಧವಾದಿಪ್ಪತ್ತೈದು ತತ್ವಂಗಳು = ಕಲಾದಿಶಕ್ತಿಯರ ಬಲದಿಂದ = ಸಾದಾಖ್ಯಾದಿ ಲಿಂಗಂಗಳಲ್ಲಿ - ಸಮರಸವಾದ ಕೂಡಲೆ - ಆ ಲಿಂಗಸಂಬಂಧವಾದ ಹನ್ನೊಂದು ತತ್ವಂಗಳು-ಒಂದೊಂದು ತತ್ವವು-ಒಂದೊಂದು ತತ್ವದೊ

ಡನೆ ಬೆರೆಯಲು ಎಂಬಲ್ಲಿ-ನಿವೃತ್ತಿಕಲಾಪರ್ಯಾಯನಾಮವನುಳ್ಳ ಕ್ರಿಯಾ
ಶಕ್ತಿಯೆ - ಪ್ರತಿಷ್ಠಾಕಲಾಪರ್ಯಾಯನಾಮವನುಳ್ಳ ಜ್ಞಾನಶಕ್ತಿಯನ್ನು-
ಪ್ರತಿಷ್ಠಾಕಲಾಪರಿಯಾಯನಾಮವನುಳ್ಳ ಜ್ಞಾನಶಕ್ತಿಯು - ವಿದ್ಯಾಕಲಾ
ಪರಿಯಾಯನಾಮವನುಳ್ಳ ಇಚ್ಛಾಶಕ್ತಿಯನ್ನು - ವಿದ್ಯಾಕಲಾಪರ್ಯಾಯ
ನಾಮವನುಳ್ಳ ಇಚ್ಛಾಶಕ್ತಿಯೆ-ಶಾಂತಿಕಲಾಪರ್ಯಾಯನಾಮವನುಳ್ಳ ಆದಿ
ಶಕ್ತಿಯನ್ನು-ಶಾಂತಿಕಲಾಪರ್ಯಾಯನಾಮವನುಳ್ಳ ಆದಿಶಕ್ತಿಯು-ಶಾಂತಾ
ತೀತಕಲಾಪರಿಯಾಯನಾಮವನುಳ್ಳಪರಶಕ್ತಿಯನ್ನು-ಶಾಂತಾತೀತಕಲಾ
ಪರಿಯಾಯನಾಮವನುಳ್ಳ ಪರಶಕ್ತಿಯೆ-ಶಾಂತಾತೀತೋತ್ತರ ಕಲಾಪ
ರ್ಯಾಯನಾಮವನುಳ್ಳ ಚಿಚ್ಛಕ್ತಿಯನ್ನು - ಬೆರಿದೇಕಾರ್ಥವಾಗಿದ್ದಾಗ
ಎಂಬಲ್ಲಿ - ಕರ್ಮಸಾದಾಖ್ಯಸ್ವರೂಪವಾದ ಆಚಾರಲಿಂಗವೆ — ಕರ್ತೃ
ಸಾದಾಖ್ಯಸ್ವರೂಪವಾದ ಗುರುಲಿಂಗದಲ್ಲಿ - ಕರ್ಮಸಾದಾಖ್ಯಸ್ವರೂಪ
ವಾದ ಗುರುಲಿಂಗವೆ - ಮೂರ್ತಿಸಾದಾಖ್ಯಸ್ವರೂಪವಾದ ಶಿವಲಿಂಗದಲ್ಲಿ-
ಮೂರ್ತಿಸಾದಾಖ್ಯಸ್ವರೂಪವಾದ ಶಿವಲಿಂಗವೆ-ಅಮೂರ್ತಿಸಾದಾಖ್ಯಸ್ವ
ರೂಪವಾದ ಜಂಗಮಲಿಂಗದಲ್ಲಿ – ಅಮೂರ್ತಿಸಾದಾಖ್ಯಸ್ವರೂಪವಾದ
ಜಂಗಮಲಿಂಗವೆ- ಶಿವಸಾದಾಖ್ಯಸ್ವರೂಪವಾದ ಪ್ರಸಾದಲಿಂಗದಲ್ಲಿ- ಶಿವ
ಸಾದಾಖ್ಯಸ್ವರೂಪವಾದ ಪ್ರಸಾದಲಿಂಗವೆ – ಮಹಾಸಾದಾಖ್ಯಸ್ವರೂಪ
ವಾದ ಮಹಾಲಿಂಗದಲ್ಲಿ-ಸಮರಸವಾಗಲು-ಕುಳಸ್ಥಲಂ, ಅಂಗಲಿಂಗದಾಚ
ರಣೆಯಡಗಿತು-ನೀಪತಿಯಾಗಿಹೋಯ್ತು-ಇಂತು ಈ ಅಂಗಲಿಂಗದಾಚರಣೆ
ಯು-ನೀಪತಿಯಾದಕೂಡಲೆ-ಪರಾತ್ಪರವಪ್ಪ ಮಹಾಲಿಂಗವು-ಒಂದಾನೊಂ
ದು ಪಯೋಧರೋಪಲವು-ನೋಡನೋಡುತಕರಗಿ- ಶೀತಳನೀರಾದಂತೆ
ತನ್ನ ಪರಮನಿರ್ಗುಣಾನಂದ ಲೀಲಾವಿಲಾಸದಿಂದಲೆ-ತೋರಿಕೆಯನ್ನೆಲ್ಲಾ
ತನ್ನಲ್ಲಿ ಯೊಳಗೊಂಡು-ತಾನೆಂದಿನಂತೆ ನಿರಾಕಾರವಾಯಿತು-ಆ ವಿಚಾ
ರವು ಹ್ಯಾಗಿಪ್ಪದೆಲೆಸ್ವಾಮಿಯೆಂದು ಬೆಸಗೊಂಡೊಡೆ-ಗುರುವಾಕ್ಯಕ್ಕೆ
ಸದೃಶವಾದ ಹರವಾಕ್ಯವನ್ನು ನಿರೂಪಿಸುತಿಹರು-ಪೂರ್ವದಲ್ಲಿ ಪ್ರಸಿದ್ಧ
ವಾದ-ಖಲದ ತಂಡುಲದೋಪಾದಿಯಲ್ಲಿ - ಸಕಲತತ್ವಂಗಳಾವರ್ಣವಿಲ್ಲದ-
ಪರಬ್ರಹ್ಮವು-(ಕರ್ತಾಕರ್ಮವಿವರ್ಜಯೆತ್)ಕರ್ತಾ-ಪೂಜಿಸುವಭಕ್ತನು,
ಕರ್ಮ-ಪೂಜಾಕ್ರಿಯೆಗಳನ್ನು, ವಿವರ್ಜಯೇತ್-ಬಿಡಬೇಕು, ಅಂದರೆ-
ಇವೇನು ಇಲ್ಲದೆ ತಾನೊಂದೊಪ್ಪುತಿರ್ದಿತು-ಹಾಗೆ ನಿರವಯ ನಿರಾಕಾರ

ವಾಗೊಪ್ಪುತ್ತಿರ್ದ ಪರಬ್ರಹ್ಮವುತಾನೆ ಹಾಗೆ ನಿರವಯ ನಿರಾ
ಪ್ಪುತ್ತಿರ್ದ ಪರಬ್ರಹ್ಮವುತಾನೆ-ಸಾಕಾರವಾದ ಶರಣನಾದ
ನಾದ ಶರಣನಾಗಿ – ಸರ್ವಾಚಾರಸಂಪತ್ತು ಹಿಡಿದಾಚರಿಸಿ -
ಸನಾಪ್ತವಾದ ಬಳಿಕ-ಸ್ವಯವೆವ - ಅವನ್ನೆಲ್ಲವ ತನ್ನಲ್ಲೊ
ತಾನೆಂದಿನಂತೆ ನಿರಾಕಾರವಾಗುತಿದ್ದಿತು. ಅಂತಿರ್ದಪರಬ್ರ
ರಂಗವು-ಬಹಿರಂಗವು – ಭೂವ್ಯಾಕಾಶವೊದಲಾದ ಹತ್ತು
ಇಲ್ಲ-ನಿರ್ದ್ವಂದ್ವಂ-ಕರ್ತೃಕರ್ಮಗಳೆಂಬ ಭೇದಪ್ರಸಂಚವಿಲ್ಲದ
ಪರಮಂಪದಂ-ಉತ್ಕೃಷ್ಟವಾದ ಪರಬ್ರಹ್ಮವಾದಂಥಾದ್ದು
ಬದಾಗಿ ಶೃತಿವಾಕ್ಯವು ಹೇಳುತಿಹುದಾದಕಾರಣ-ಪ್ರಥಮದ
ಣವಮಾಳಿಸಿದ-ಅಂಗಸಂಬಂಧವಾದ ತತ್ವಂಗಳಿಪ್ಪತ್ತೈದು-ದ್ವಿ
ಲ್ಲಿ ನಿರೂಪಣವ ಪಾಲಿಸಿದ ಲಿಂಗಸಂಬಂಧವಾದ ತತ್ವಂಗಳು
ದು-ಈ ಉಭಯ ತತ್ವಂಗಳು ಕೂಡಿ-ಮೂವ್ವತ್ತಾರು- ಒಂದು
ದು ಸಮರಸವಾಗಿ ಎಂಬಲ್ಲಿ-ಅಂಗತತ್ವವಿಪ್ಪತ್ತೈದು ಕಲಾ
ಲದಿಂದ-ಸಾದಾಖ್ಯಲಿಂಗಂಗಳಲ್ಲಿ-ಸಮರಸವಾಗಿ-ಸರ್ವಶೂನ್ಯ
ಮಸ್ತ ತ್ರೋರುವ ತೋರಿಕೆಯೆಲ್ಲ-ತನ್ನಲ್ಲಿ ಒಳಕೊಂಡು - ತಾ
ನಿರಾಕಾರ ಸ್ವರೂಪವನ್ನು ತಾಳಿದ-ಪರಿಕ್ರಮದ ನಿರ್ಣಯದ
ತ್ವಮಸ್ಯಾದಿ ವಾಕ್ಯಗಳಲ್ಲಿ - ತತ್-ತ್ವಂ - ಅಸಿ- ಎಂಬ ಪದತ್ರ
ಸ್ವರೂಪವನ್ನು-ಹೇಳುವ ಉಪನಿಷದ್ವಾಕ್ಯದ-ಅರ್ಥಂಗಳಲ್ಲಿ-
ತು-ಅವೆಂತೆಂದೊಡೆ॥ಶ್ಲೋ॥(ತತ್ಪದೇನೋಚ್ಯತೇಲಿಂಗಂ)ತತ್ಪ
ಳುವುದೇ ಲಿಂಗಂ-ಶಿವತತ್ವವನೊಂದೊಳಕೊಂಡು ತೋರುವ
ಗವೆಂದು-ಉಚ್ಯತೇ- ಹೇಳಲ್ಪಟ್ಟಿತು(ತ್ವಂಪದೇನಾಂಗಮೀರಿತ
ದಿಂಪದಹೇಳುವುದ-ಅಂಗಂ-ಇಪ್ಪತ್ತೈದು ತತ್ವವನೊಳಕೊ
ರುವ ಶರೀರವೆಂದು- ಈರಿತಂ-ಹೇಳಲ್ಪಟ್ಟಿತು – ಅನಯೋ
ಸಂಬಂಧೋಸಿಪದೇನಚ) ಅನಯೋಃ – ಈ ಲಿಂಗಾಂಗವೆಂಬೆರ
ಭಾವೇನ – ಕೂಟಸ್ವರೂಪವಾದ ಭಕ್ತಿಯುಳ್ಳ, ಪದೇನ – ಪ
ಸಂಬಂಧಃ – ಸಮರಸವು, ಅಸಿ-ಆಗಿದ್ದಿ, ಅಂದರೆ ವಿದ್ಯಾತ
ಕೊಂಡು ತ್ರೋರುವ ಅಸಿಪದವಲಾ – ಹೀಗೆಂದು ಶೃತಿವಾಕ್ಯ
ವುನು—ಲಿಂಗಾಂಗವೆಂಬುಭಯಪದದ ಐಕ್ಯವೆ- ಅಸಿಪದವು

